**A.R. PANCHAGAVI**
Eminent Parlimentarian Series
Written by
**Professor Chandrashekara Akki**
**Published by**
Karnataka Legislature Library Committee
Vidhana Soudha, Bangalore-560001.
Page: 200 + xiii Price: 20-00 Rs.

First Edition: 2006 Copies: 2000
**Printed & Designed by**
Government Press, Bangalore.

**ಎ.ಆರ್. ಪಂಚಗಾವಿ**
ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ
ಲೇಖಕರು:
**ಪ್ರೊ|| ಚಂದ್ರಶೇಖರ ಅಕ್ಕಿ**
ಪ್ರಕಾಶನ
ಗ್ರಂಥಾಲಯ ಸಮಿತಿ
ಕರ್ನಾಟಕ ವಿಧಾನ ಮಂಡಲ
ವಿಧಾನಸೌಧ, ಬೆಂಗಳೂರು-560 001.
ಪುಟ: 200 + xiii ಬೆಲೆ: 20/- ರೂ.

ಮೊದಲ ಮುದ್ರಣ: 2006 ಪ್ರತಿಗಳು: 2,000
ಮುದ್ರಣ ಮತ್ತು ವಿನ್ಯಾಸ
ಸರ್ಕಾರಿ ಮುದ್ರಣಾಲಯ, ಬೆಂಗಳೂರು-560 001.

# ವಿಧಾನ ಮಂಡಲ ಗ್ರಂಥಾಲಯ ಸಮಿತಿ
## 2005-2006

---

*ಅಧ್ಯಕ್ಷರು*

**ವಿ.ಆರ್. ಸುದರ್ಶನ್**

ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು

*ಸದಸ್ಯರು*

**ಕೃಷ್ಣ**

ಸಭಾಧ್ಯಕ್ಷರು, ಕರ್ನಾಟಕ ವಿಧಾನ ಸಭೆ

**ವಿಶ್ವನಾಥ್ ಪಾಟೀಲ್ ಹೆಬ್ಬಾಳ್**

ವಿಧಾನಸಭಾ ಸದಸ್ಯರು ಹಾಗೂ

ಉಪ ಸಮಿತಿಯ ಅಧ್ಯಕ್ಷರು

**ಜಿ.ಎಸ್. ಗಡ್ಡದೇವರ ಮಠ**

ವಿಧಾನಸಭಾ ಸದಸ್ಯರು

**ಆರ್. ಧ್ರುವನಾರಾಯಣ್**

ವಿಧಾನಸಭಾ ಸದಸ್ಯರು

**ಕಳಕಪ್ಪ ಜಿ. ಬಂಡಿ**

ವಿಧಾನಸಭಾ ಸದಸ್ಯರು

**ಡಾ|| ವೀರಬಸವಂತರೆಡ್ಡಿ ಮುದ್ನಾಳ್**

ವಿಧಾನಸಭಾ ಸದಸ್ಯರು

**ಡಾ. ಚಂದ್ರಶೇಖರ ಬಿ. ಕಂಬಾರ**

ವಿಧಾನ ಪರಿಷತ್ ಸದಸ್ಯರು

**ಮುಖ್ಯಮಂತ್ರಿ ಚಂದ್ರು**

ವಿಧಾನ ಪರಿಷತ್ ಸದಸ್ಯರು

**ಉಮಾಶ್ರೀ**

ವಿಧಾನ ಪರಿಷತ್ ಸದಸ್ಯರು

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಅಧಿಕಾರಿ – ಸಂಪಾದಕ ವರ್ಗ

### ಕರ್ನಾಟಕ ವಿಧಾನ ಮಂಡಲ

| | |
|---|---|
| ಡಿ'ಸೋಜ ರಾಬಿನ್‌ಸನ್ | ಪ್ರಧಾನ ಕಾರ್ಯದರ್ಶಿ |

### ಕರ್ನಾಟಕ ವಿಧಾನಸಭೆ ಸಚಿವಾಲಯ

| | |
|---|---|
| ಟಿ. ರಾಜಣ್ಣ | ಕಾರ್ಯದರ್ಶಿ |
| ಎಸ್.ಬಿ. ಪಾಟೀಲ್ | ಅಪರ ಕಾರ್ಯದರ್ಶಿ |
| ಕೆ.ಎನ್. ಪ್ರಭಾಕರರಾವ್ | ಜಂಟಿ ಕಾರ್ಯದರ್ಶಿ |
| ಪಿ. ಓಂಪ್ರಕಾಶ್ | ಸಭಾಧ್ಯಕ್ಷರ ಕಾರ್ಯದರ್ಶಿ |
| ಎಸ್. ಬಸವರಾಜ | ಉಪ ಕಾರ್ಯದರ್ಶಿ (ಪ್ರ) |
| ಕೆ. ನೂರ್ ಮಹಮದ್ | ಅಧೀನ ಕಾರ್ಯದರ್ಶಿ |
| ಎನ್. ನರಸಿಂಹಮೂರ್ತಿ | ಶಾಖಾಧಿಕಾರಿ |

### ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

| | |
|---|---|
| ಜಯಶಂಕರಮೂರ್ತಿ | ಕಾರ್ಯದರ್ಶಿ (ಪ್ರ) |
| ಕೃಷ್ಣೇಗೌಡ | ಸಭಾಪತಿಯವರ ಕಾರ್ಯದರ್ಶಿ |

### ಸಂಪಾದಕರು

**ಎಲ್.ಎನ್. ಮುಕುಂದರಾಜ್**

ಕನ್ನಡ ಉಪನ್ಯಾಸಕರು

(ಅನ್ಯಕರ್ತವ್ಯದ ಮೇರೆಗೆ)

# ಮುನ್ನುಡಿ

13 ಫೆಬ್ರವರಿ 2006

ರಾಷ್ಟ್ರದ ಸ್ವಾತಂತ್ರ್ಯ ಸುವರ್ಣ ಮಹೋತ್ಸವದ ಆಚರಣೆಯ ಅಂಗವಾಗಿ ಈ ದೇಶಕ್ಕಾಗಿ ದುಡಿದ, ಅಗ್ರಮಾನ್ಯ ಸಂಸದೀಯ ಪಟುಗಳಾಗಿ ಕೊಡುಗೆಯನ್ನು ನೀಡಿದ ಮಹನೀಯರನ್ನು ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಪ್ರತಿಭಾವಂತ ಸಂಸದೀಯ ಪಟುಗಳ ಬಗ್ಗೆ ಅನೇಕ ಹೊತ್ತಿಗೆಗಳನ್ನು ಹಿಂದಿ ಹಾಗೂ ಆಂಗ್ಲ ಭಾಷೆಯಲ್ಲಿ ಹೊರತಂದಿರುತ್ತಾರೆ. ಅವುಗಳಲ್ಲಿ ಡಾ।। ರಾಮಮನೋಹರ ಲೋಹಿಯಾ, ಡಾ।। ಬಿ.ಆರ್. ಅಂಬೇಡ್ಕರ್, ಡಾ।। ಶಾಂಪ್ರಸಾದ್ ಮುಖರ್ಜಿ, ಡಾ।। ರಾಜೇಂದ್ರ ಪ್ರಸಾದ್ ಮೊದಲಾದ ಗಣ್ಯರ ಪುಸ್ತಕಗಳನ್ನು ನಾವು ಕನ್ನಡದಲ್ಲಿ ಭಾಷಾಂತರಿಸಿ ಹೊರತಂದಿರುವ ಸಂತೋಷಕರ ವಿಷಯವನ್ನು ಉಲ್ಲೇಖಿಸಬಯಸುತ್ತೇವೆ.

ಹಾಗೆಯೇ, ರಾಜ್ಯದ ಸಂಸದೀಯ ಪಟುಗಳಾದ ಅನೇಕ ಮಹನೀಯರನ್ನು ಕುರಿತು ಹೊತ್ತಿಗೆಗಳನ್ನು ಸಿದ್ಧಪಡಿಸಿ ಪ್ರಕಟಿಸುವ ಯೋಜನೆಯನ್ನು ಕರ್ನಾಟಕ ವಿಧಾನ ಮಂಡಲವು ಹಮ್ಮಿಕೊಂಡಿದ್ದು, ವಿಧಾನ ಮಂಡಲದ ಗ್ರಂಥಾಲಯ ಸಮಿತಿಗೆ ವಹಿಸಲಾಗಿತ್ತು. ಈ ಉಪ ಸಮಿತಿಯು ಕಾರ್ಯಪ್ರವೃತ್ತರಾಗಿ ರಾಜ್ಯದ ಲೇಖಕರ, ವಿದ್ವಾಂಸರ ಸಹಕಾರದಿಂದ ಈ ಯೋಜನೆಯನ್ನು ಕಾರ್ಯಗತಗೊಳಿಸಲು ನಿರ್ಧರಿಸಿತು.

ಈ ಪ್ರತಿಭಾವಂತ ಸಂಸದೀಯ ಪಟುಗಳ ಮಾಲಿಕೆಯಲ್ಲಿ ಈಗಾಗಲೇ ಶ್ರೀ ಕೆಂಗಲ್ ಹನುಮಂತಯ್ಯ, ಶ್ರೀ ಶಾಂತವೇರಿ ಗೋಪಾಲಗೌಡ, ಶ್ರೀ ಎಸ್. ನಿಜಲಿಂಗಪ್ಪ, ಶ್ರೀ ಕೆ.ಸಿ. ರೆಡ್ಡಿ, ಶ್ರೀ ದೇವರಾಜ ಅರಸು, ಶ್ರೀ ಜೆ.ಹೆಚ್. ಪಟೇಲ್, ಶ್ರೀ ಟಿ.ಆರ್. ಶಾಮಣ್ಣ, ಶ್ರೀ ಎಸ್.ಡಿ. ಗಾಂವಕರ್, ಶ್ರೀಮತಿ ಬಿ.ಎಲ್. ಸುಬ್ಬಮ್ಮ, ಡಾ|| ಲಂಕಾ ಸುಂದರಂ ಮತ್ತಿತರ ಹಲವು ಗಣ್ಯರ ಬಗೆಗಿನ ಪುಸ್ತಕಗಳನ್ನು ಹೊರತರಲಾಗಿದೆ.

ಪ್ರೊ|| ಚಂದ್ರಶೇಖರ ಅಕ್ಕಿ ಅವರು ರಚಿಸಿರುವ ರಾಜ್ಯದ ಹಿರಿಯ ಸಂಸದೀಯ ಪಟುವಾಗಿದ್ದ ಶ್ರೀ ಎ.ಆರ್. ಪಂಚಗಾವಿ ಅವರ ಬಗೆಗಿನ ಪುಸ್ತಕವನ್ನು ತಮ್ಮ ಮುಂದಿಡಲು ಹೆಮ್ಮೆಯೆನಿಸುತ್ತದೆ. ಈ ಪುಸ್ತಕವನ್ನು ರಚಿಸಿದ ಲೇಖಕರಿಗೆ ಹಾಗೂ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೂ ಹಾಗೂ ಉಪ ಸಮಿತಿಯ ಅಧ್ಯಕ್ಷರಿಗೆ ಹಾಗೂ ಸದಸ್ಯರಿಗೆ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ರಾಜ್ಯದ ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಪುಸ್ತಕವು ಮಾನ್ಯ ಸದಸ್ಯರುಗಳಿಗೆ, ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಹೆಚ್ಚಿನ ಅನುಭವ ನೀಡುತ್ತದೆ ಮತ್ತು ಉಪಯುಕ್ತವಾಗುತ್ತದೆಂದು ಭಾವಿಸುತ್ತೇವೆ.

ವಿ.ಆರ್. ಸುದರ್ಶನ್
ಸಭಾಪತಿ
ಕರ್ನಾಟಕ ವಿಧಾನ ಪರಿಷತ್ತು

ಕೃಷ್ಣ
ಸಭಾಧ್ಯಕ್ಷರು
ಕರ್ನಾಟಕ ವಿಧಾನ ಸಭೆ

# ಲೇಖಕರ ಮಾತು

If you would not be forgotten
As soon as you are dead & rotton
Either write a thing of worth reading
Or do a thing worth writing.

*("ಸಾವನಪ್ಪಿ ಶರೀರ ಕೊಳೆತು, ಮರೆತು ಹೋಗುವ ಮುನ್ನ ನಿನ್ನ ಹೆಸರು ಅಮರವಾಗಿ ಜನರು ಓದಿ ಒಳಿತು ಪಡೆವ ಗ್ರಂಥವೊಂದ ಬರೆ: ಇಲ್ಲ, ಗ್ರಂಥ ರಚನೆಗೆ ತಿರುಳು ನೀಡುವ ಕಾರ್ಯವೊಂದು ಗೈ")*

ಬೆಂಜಿಮಿನ್ ಫ್ಲಾಂಕ್ಲಿನ್‌ನ ಈ ಮಾತು ಮನುಷ್ಯ ಬದುಕಿನ ನೈಜ ಸಾರ್ಥಕತೆ ಬಿಂಬಿಸುವಂತಹದು.

ಶ್ರೀ ಎ. ಆರ್. ಪಂಚಗಾವಿಯವರು ಯಾವ ಪುಸ್ತಕ ಬರೆಯಲಿಲ್ಲ; ಆದರೆ ಕೃತಿಯೊಂದಕ್ಕೆ ವಸ್ತುವಾಗಬಲ್ಲಂಥ ಆದರ್ಶಮಯ ಸಾರ್ಥಕ ಬದುಕು ನಡೆಸಿದವರು. ಇಂಥ ಯೋಗಿ ಸದೃಶ್ಯ ವ್ಯಕ್ತಿತ್ವವನ್ನು ಕುರಿತು ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆಯಡಿಯಲ್ಲಿ ನನ್ನಿಂದ ಕೃತಿಯೊಂದು ರೂಪುಗೊಳ್ಳುವಂತೆ ನೋಡಿಕೊಂಡಿದ್ದು ನನ್ನ ಪುಣ್ಯ ವಿಶೇಷವೆಂದು ಭಾವಿಸಿದ್ದೇನೆ.

ಅಂದಿನ ಮುಂಬೈ ಪ್ರಾಂತ್ಯದ ಭಾಗವಾಗಿದ್ದ ಬೆಳಗಾವಿ ಜಿಲ್ಲೆಯ ಗೋಕಾಕ ತಾಲೂಕನ್ನು ಪ್ರತಿನಿಧಿಸಿ 1952ರಲ್ಲಿ ಮುಂಬೈ ವಿಧಾನಸಭೆ ಪ್ರವೇಶಿಸಿದ ಎ. ಆರ್. ಪಂಚಗಾವಿ ಭಾಷಾವಾರು ಪ್ರಾಂತ ರಚನೆಯ ನಂತರ ಮತ್ತೆ ಮೂರು ಸಾರಿ ಮೈಸೂರು ರಾಜ್ಯ ವಿಧಾನ ಸಭೆಗೆ ಆಯ್ಕೆಗೊಂಡಿದ್ದರು. ಈ ಇಪ್ಪತ್ತು ವರ್ಷಗಳ ಶಾಸಕತ್ವದ ಅವಧಿಯಲ್ಲಿ ಒಂದು ಬಾರಿ ಉಪಸಭಾಪತಿಯಾಗಿದ್ದರು. ಗಾಂಧೀಜಿಯವರ ಜೀವನ ಆದರ್ಶ ಸಿದ್ಧಾಂತಗಳನ್ನು ಅಕ್ಷರಶಃ ಪಾಲಿಸಿ ಅನುಸರಿಸಿ ನಡೆದರು. ಸದನದಲ್ಲಿ ಅವರು ಮಂಡಿಸಿದ ವಿಚಾರಗಳು– ಅವುಗಳ ಹಿಂದಿದ್ದ ಸಾಮಾಜಿಕ ಕಾಳಜಿ ಮತ್ತು ಕಳಕಳಿಗಳು ಸರ್ವಕಾಲಕ್ಕೂ ಸ್ಮರಣೀಯ ಮತ್ತು

ಅನುಕರಣೀಯ. ಸೈದ್ಧಾಂತಿಕ ರಾಜಕೀಯಕ್ಕೆ ಬದ್ಧರಾಗಿದ್ದರಿಂದ ವೈಭವಯುತ ಆಡಂಬರದ ರಾಜಕೀಯ ಪ್ರಪಂಚದಲ್ಲಿ ಅವರು ಯಾರಿಗೂ ಕಾಣದೇ ಹೋದದ್ದು ದುರ್ದೈವದ ಸಂಗತಿ. ಕಾಲಗರ್ಭದಲ್ಲಿ ಇಂಥವರು ಕರಗಿಹೋದರೆ ಆಗುವ ಹಾನಿ ಸಮಾಜಕ್ಕೆ ತಾನೆ? ಇತಿಹಾಸವನ್ನು ಮರೆತವರು ಹೇಗೆ ತಾನೆ ಇತಿಹಾಸ ನಿರ್ಮಿಸುತ್ತಾರೆ? ಅಂಥವರಿಗೆ ಸತ್ವರಂಪರೆಯ ನೈಜ ಪಾಠಗಳಾಗಿ ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಮುಂದಿರುವಂತೆ ಮಾಡಿದ ಈ 'ಮಾಲಿಕೆ' ನಿಜಕ್ಕೂ ಅಭಿನಂದನಾರ್ಹವಾದುದು. ಇಂದಿನ–ಮುಂದಿನ ಜನಾಂಗಕ್ಕೆ ಶ್ರೀ ಎ. ಆರ್. ಪಂಚಗಾವಿ ಈ ಮಾಲಿಕೆಯ ಒಂದು ಅರ್ಥಪೂರ್ಣ ಪುಟವಾದರೆ ನಮ್ಮೆಲ್ಲರ ಶ್ರಮ ಸಾರ್ಥಕ.

ಈಗ ಸಧ್ಯ ಅಮೇರಿಕೆಯಲ್ಲಿ ನೆಲೆಸಿರುವ ಅವರ ಅಳಿಯ ಶ್ರೀ ವೆಂಕಣ್ಣ ಗಣಿಯವರ ಪ್ರಯತ್ನದಿಂದ ಶ್ರೀ ಜಿ. ಎಸ್. ಬಿ.ಪಾಟೀಲ, ಶ್ರೀ ನರೇಂದ್ರ ಪುರಂದರೆ, ಡಾ. ನಿಂಗಣ್ಣ ಸಣ್ಣಕ್ಕಿಯವರ ಸಂಪಾದಕತ್ವದಲ್ಲಿ "ಗೋಕಾಕ ಗಾಂಧಿ" ಹೆಸರಿನ ಹೊತ್ತಿಗೆ ಈ ಹಿಂದೆ ಬೆಳಕು ಕಂಡಿದೆ. ಇಂದು ಸರಕಾರ ಮುಂದಾಗಿ ಪ್ರತಿಭಾವಂತ ಸಂಸದಿಯ ಪಟು ಮಾಲಿಕೆಯಲ್ಲಿ ಶ್ರೀ ಪಂಚಗಾವಿಯವರನ್ನು ಕುರಿತು ಗ್ರಂಥ ಪ್ರಕಟನೆಗೆ ಮುಂದಾಗಿರುವುದರಿಂದ ಅದಕ್ಕೊಂದು ವಿಸ್ತೃತ ರೂಪದ ಸಮಗ್ರತೆ ಲಭಿಸುವಂತಾಯಿತು.

ಈ ಕೃತಿ ರಚನೆಗೆ 'ಗೋಕಾಕ ಗಾಂಧಿ' ಆಕರ ಗ್ರಂಥವಾಗಿ ಕೆಲ ಉಪಯುಕ್ತ ಮಾಹಿತಿ ನೀಡಿದೆ. ಅದರ ಸಂಪಾದಕ ಮಂಡಳಿಯನ್ನು ಹಾಗೂ ಅದರ ಕೆಲ ಲೇಖಕರನ್ನು ಸೌಜನ್ಯತೆಯೊಂದಿಗೆ ನೆನೆಯುತ್ತೇನೆ.

ಈ ಗ್ರಂಥ ಸರಕಾರದ ಯೋಜನೆಯಡಿ ಪ್ರಕಟಗೊಳ್ಳುವಂತೆ ನೋಡಿಕೊಂಡ ಕರ್ನಾಟಕ ರಾಜ್ಯ ಕಾನೂನು ಸಚಿವರಾದ ಸನ್ಮಾನ್ಯ ಶ್ರೀ ಎಚ್.ಕೆ. ಪಾಟೀಲ್ ಅವರಿಗೂ, ಗ್ರಂಥಾಲಯ ಸಮಿತಿ ಅಧ್ಯಕ್ಷರಾದ ಶ್ರೀ ವಿ.ಆರ್. ಸುದರ್ಶನ್ ಅವರಿಗೂ, ಉಪಸಮಿತಿಯ ಅಧ್ಯಕ್ಷರಾದ ಶ್ರೀ ವಿಶ್ವನಾಥ ಪಾಟೀಲ ಹೆಬ್ಬಾಳರಿಗೂ ಮತ್ತು ಸಮಿತಿಯ ಸದಸ್ಯರಲ್ಲೊಬ್ಬರಾಗಿರುವ ಹಾಗೂ ನನಗೆ ಅತ್ಯಂತ ಆದರಣೀಯರು, ಆತ್ಮೀಯರು ಆಗಿರುವ ಡಾ. ಚಂದ್ರಶೇಖರ ಕಂಬಾರ ಅವರಿಗೂ ತುಂಬು ಮನದ ನಮನಗಳು. ಸಂಪಾದಕರಾಗಿದ್ದು ಉಪಯುಕ್ತ ಸಲಹೆ ಸೂಚನೆಗಳೊಂದಿಗೆ ಮಾರ್ಗದರ್ಶನ ನೀಡಿದ ಕ್ರೀಯಾಶೀಲ ವ್ಯಕ್ತಿತ್ವದ ಕವಿಮನದ ಶ್ರೀ ಎಲ್. ಎನ್. ಮುಕುಂದರಾಜ್ ಅವರಿಗೆ ಧನ್ಯವಾದಗಳು.

ಗ್ರಂಥ ರಚನೆಯ ಸಂದರ್ಭದಲ್ಲಿ ನನ್ನ ಶ್ರಮ–ನೋವು ಮತ್ತು ನಲಿವು ಸಮನಾಗಿ ಹಂಚಿಕೊಂಡ ಕವಿ–ಕಲಾವಿದ, ಸಾಹಿತಿ–ಸನ್ಮಿತ್ರ ಶ್ರೀ ಮಹಾಲಿಂಗ ಮಂಗಿ ಇವರನ್ನು ನೆನೆಯದಿದ್ದರೆ ಕೃತಘ್ನನಾದೇನು.

ಶ್ರೀ ಎ. ಆರ್. ಪಂಚಗಾವಿಯವರ ಮಗ ಶ್ರೀ ರಂಗಪ್ಪ, ಸೊಸೆ ಶ್ರೀಮತಿ ಸರೋಜಾ ಅಭಿಮಾನಪಟ್ಟು ಹಲವಾರು ವಿಷಯ ತೆರೆದಿಟ್ಟಿದ್ದಾರೆ. ಮೂಡಲಗಿಯ ಶ್ರೀ ಸೋನವಾಲಕರ ಕುಟುಂಬದವರು, ಜಮಖಂಡಿಯ ಡಾ. ಗಿರೀಶ ಉದಪುಡಿಯವರು ಗೋಕಾಕದ ಸರ್ವಶ್ರೀ ಟಿ. ಆರ್. ಉದಪುಡಿ, ರಾಮನಗೌಡ ಪಾಟೀಲ, ಆರ್. ಟಿ. ಚವಲಿ, ಪಿ. ವ್ಹಿ. ಬಡಗನ್ನವರ ಮುಂತಾದವರಲ್ಲದೆ; ಸ್ವಾತಂತ್ರ್ಯ ಹೋರಾಟಗಾರರು, ಅವರ ನಿಕಟವರ್ತಿ ಸ್ನೇಹಿತರುಗಳು ಆದ ಸರ್ವಶ್ರೀ ಚುನಿಲಾಲ ಬಾಫನಾ, ಶಿವಶಂಕರೆಪ್ಪ ತಡಕೋಡ, ಬಾಳಗೌಡ ಪಾಟೀಲ, ಯು. ಎಫ್. ಯಲಿಗಾರ... ಹೀಗೆ ಹಲವಾರು ಜನ ಪಂಚಗಾವಿಯವರ ಜೊತೆಗಿನ ತಮ್ಮ ನಿಕಟತೆಯನ್ನೂ, ಅಭಿಮಾನವನ್ನೂ ಸ್ಮರಿಸಿಕೊಂಡಿದ್ದಾರೆ. ಕೆಲವರು ಲೇಖನ ಹಾಗೂ ಸಂದರ್ಶನಗಳ ಮೂಲಕ ಹಂಚಿಕೊಂಡಿದ್ದಾರೆ. ಈ ಎಲ್ಲ ಮಹನೀಯರಿಗೂ ಧನ್ಯವಾದಗಳು. ಹಸ್ತಪ್ರತಿ ತಯಾರಿಸುವಲ್ಲಿ ಸಹಕರಿಸಿದ ಶ್ರೀ ಸಚೀನ ಜಾಧವ, ಖಾಜಿ, ಸುನಂದ, ರಾಶಿನಕರ ಹಾಗೂ ಬಾಳಯ್ಯ... ಮುಂತಾದವರಿಗೆಲ್ಲ ಕೃತಜ್ಞತೆಗಳು.

– ಪ್ರೊ॥ ಚಂದ್ರಶೇಖರ ಅಕ್ಕಿ

# ಪರಿವಿಡಿ



## ಭಾಗ–1

### ಅಪ್ಪಟ ವ್ಯಕ್ತಿತ್ವದ ಅಪ್ಪಣ್ಣ ಪಂಚಗಾವಿ

## ಭಾಗ–2
## ಸದನದಲ್ಲಿ ಪಂಚಗಾವಿ

## ಭಾಗ–3

## ದಿಗಂತಕ್ಕೇರಿದ ದಿವ್ಯ ನಕ್ಷತ್ರ

### I) ಅಶ್ರುತರ್ಪಣ



### II) ಗಣ್ಯರ ದೃಷ್ಟಿಯಲ್ಲಿ ಪಂಚಗಾವಿ

## III) ಅಭಿಮಾನಿಗಳ ದೃಷ್ಟಿಯಲ್ಲಿ



## IV) ಕವಿಗಳು ಕಂಡ ಪಂಚಗಾವಿ



## ಭಾಗ–4

# ಗೋಕಾವಿ ನಾಡಿನ ಹೆಮ್ಮೆಯ ಪುತ್ರ

## ಎ. ಆರ್. ಪಂಚಗಾವಿ

ದಿವಂಗತ ಪ್ರಧಾನಿ ಲಾಲಬಹಾದ್ದೂರ ಶಾಸ್ತ್ರಿ ಕುರಿತು ಕವಿ ಚೆನ್ನವೀರ ಕಣವಿಯವರು ಹೀಗೆ ಹೇಳುತ್ತಾರೆ:

''ನಮ್ಮ ಮಧ್ಯ ಇವನಿದ್ದನೆಂದರೆ ನಂಬುವೆಯ
ಇಷ್ಟು ಸಾದಾ ಸೀದಾ ಮನುಷ್ಯ ? ಬಡತನದ
ಪಲ್ಲಕ್ಕಿ ಹೊತ್ತು ಮೆರೆಸಿದ ಪ್ರಮಾಣಿಕತೆಯ.
ಹೆಂಡತಿ ಮಕ್ಕಳಿಗೆ ಆಸ್ತಿ ಸಂಪಾದಿಸದ
ಮನೆಯಿರದ ಪ್ರಧಾನಿ, ಇವನೆಂಥ ಭಾರತೀಯ?
ಬಂದದ್ದು ಹಂಚಿ ಮಾಡಿ ದಾಟಿ ತಿರುಗಿಸಿದ
ಗದ್ದುಗೆಯನೇರಿದರು ಕಾಣಿಸಿಕೊಳ್ಳದ ಕಿರಿಯ
ಬಾಜಾ ಬಜಂತ್ರಿಯ ನಿಲಿಸಿ ಸಹಜ ತಂತಿಯ ಮಿಡಿದ.''

ಈ ಮಾತು ಇಪ್ಪತ್ತು ವರ್ಷ ವಿಧಾನ ಸಭಾ ಸದಸ್ಯನಾಗಿ, ಉಪ ಸಭಾಪತಿಯಾಗಿ ರಾಜಕೀಯ ಬದುಕಿನಲ್ಲಿದ್ದರೂ ಕೂಡ ಅದರ ಕೊಳಚೆ ಸೋಂಕದಂತೆ ನೋಡಿಕೊಂಡ ಅಪ್ಪಟ ಗಾಂಧೀವಾದಿ ಶ್ರೀ ಎ. ಆರ್. ಪಂಚಗಾವಿಯವರಿಗೂ ಸಂಪೂರ್ಣವಾಗಿ ಅನ್ವಯಿಸುವಂತಹದು.

ಗೋಕಾವಿ ನಾಡು ನಯನ ಮನೋಹರ ಜಲಪಾತದ ರಮಣೀಯತೆಗೆ, ಕರದಂಟಿನ ವಿಶಿಷ್ಟ ರುಚಿಗೆ ಹೆಸರಾದುದು. ಪ್ರೊ. ಕೆ. ಜಿ. ಕುಂದಣಗಾರ, ಡಾ. ಶಿ. ಚ. ನಂದೀಮಠ , ರ್‍ಯಾ. ಡಿ. ಸಿ. ಪಾವಟೆಯರಂತ ಸಂಶೋದಕ ಶಿಕ್ಷಣ ತಜ್ಞರು ಮತ್ತು ಡಾ. ಬೆಟಗೇರಿ ಕೃಷ್ಣಶರ್ಮ, ಬಸವರಾಜ ಕಟ್ಟಿಮನಿ, ಕೃಷ್ಣಮೂರ್ತಿ ಪುರಾಣಿಕ, ಡಾ. ಚಂದ್ರಶೇಖರ ಕಂಬಾರರಂಥ ಉದ್ದಾಮ ಸಾಹಿತಿ ಶ್ರೇಷ್ಠರು ಈ ಗೋಕಾವಿ ನೆಲದಲ್ಲಿ ಮೂಡಿ ಬಂದವರು. ಉತ್ತರ ಕರ್ನಾಟಕದ ಜಾನಪದ ಬೈಲಾಟ 'ಪಾರಿಜಾತ' ಹುಟ್ಟಿದ್ದು ಇಲ್ಲಿಯೇ. ತಾಲೂಕಿನ ಕುಲಗೋಡ ಗ್ರಾಮದ ತಮ್ಮಣ್ಣನು ರಾಯಚೂರ ಜಿಲ್ಲೆಯ ಅಪರಾಳ ತಮ್ಮಣ್ಣನು, ಮೂಲ ಭಾಗವತ ಕಾವ್ಯವನ್ನು ರಂಗಕ್ಕೆ ಮಾರ್ಪಡಿಸಿ, ತನ್ನದೇ ತಂಡ ಕಟ್ಟಿ ತಾನೇ ನಟಿಸುವ ಮೂಲಕ ಪಾರಿಜಾತ ರಂಗ ಪರಂಪರೆಯೊಂದನ್ನು ಹುಟ್ಟು

ಹಾಕಿದ. ಕರ್ನಾಟಕದ ಪ್ರಥಮ ರಂಗನಟಿ ಖ್ಯಾತಿಯ ಗೋಕಾಕ ತಾಲೂಕಿನ ಕೌಜಲಗಿಯ ನಿಂಗಮ್ಮ ತನ್ನ ಬದುಕನ್ನೇ ಪಾರಿಜಾತಕ್ಕೆ ಸಮರ್ಪಿಸಿಕೊಂಡಳು. ಉತ್ತರ ಕರ್ನಾಟಕದ ಪ್ರಥಮ ವೃತ್ತಿರಂಗ ನಾಟಕ ಕಂಪನಿ ಗೋಕಾಕ ತಾಲೂಕಿನ ಕೊಣ್ಣೂರ ಗ್ರಾಮದಲ್ಲಿ ಶತಮಾನದ ಹಿಂದೆ ಹುಟ್ಟಿ ಬಂದಿತು. ವರ್ಷಂಪ್ರತಿ ಸಾವಿರಾರು ಜನ ಪ್ರೇಕ್ಷಕರನ್ನು ಸೆಳೆಯುವ ಗೋಕಾಕ 'ದಬೆದಬೆ' ಹಾಗೂ ಅದರ ದಡದಲ್ಲಿ ಬ್ರಿಟಿಷರಿಂದ ಸ್ಥಾಪನೆಗೊಂಡ (ಕ್ರಿ.ಶ. 1886) ಪ್ರಸಿದ್ಧ ನೂಲಿನ ಗಿರಣಿ..... ಹೀಗೆ ಹತ್ತು ಹಲವು ವಿಧದ ಖ್ಯಾತಿ ಗೋಕಾವಿ ನಾಡಿಗಿದೆ. ಇಂಥವರ ಮಧ್ಯದಲ್ಲಿಯೇ ಮೂಡಿ ಬಂದವರು ರಾಜಕೀಯ ರಂಗದ ಧ್ರುವತಾರೆಯೆನಿಸಿದ ಅಪ್ಪಣ್ಣ ರಾ. ಪಂಚಗಾವಿಯವರು.

ಬೆಳಗಾವಿ ಜಿಲ್ಲೆಯ ರಾಮದುರ್ಗ ಹಾಗೂ ಗೋಕಾಕ ತಾಲೂಕುಗಳು ನೆರೆಹೊರೆಯವು. ರಾಮದುರ್ಗ ತಾಲೂಕಿನ ಹಿರೇಕೊಪ್ಪ ಪಂಚಗಾವಿಯವರ ತಂದೆ ಊರು. ಗೋಕಾಕ ತಾಲೂಕಿನ ಕುಲಗೋಡ ತಾಯಿಯ ಊರು. ತಾಯಿಯ ತವರೂರಲ್ಲಿ 14-11-1913 ರಲ್ಲಿ ಪಂಚಗಾವಿ ಜನಿಸಿದರು. ಪ್ರಾಥಮಿಕ ಹಂತದ ಶಿಕ್ಷಣ ಹಿರೇಕೊಪ್ಪದಲ್ಲಿ, ಮಾಧ್ಯಮಿಕ ಶಿಕ್ಷಣ ಗೋಕಾಕದ ಪ್ರತಿಷ್ಠಿತ ಮುನ್ಸಿಪಲ್ ಹೈಸ್ಕೂಲನಲ್ಲಿ ಪೂರೈಸಲ್ಪಟ್ಟವು. ಶೈಕ್ಷಣಿಕ ಸೌಲಭ್ಯಕ್ಕಾಗಿ ಗೋಕಾಕದಲ್ಲಿ ವಾಸ ಮುಂದೆ ಇದೇ ಊರಲ್ಲಿ ವಕೀಲಿ ವೃತ್ತಿ ಪ್ರಾರಂಭಿಸಿದರು. 1952 ರಲ್ಲಿ ಬಾಂಬೆ ಸ್ಟೇಟ್ ಎಸೆಂಬ್ಲಿಗೆ ಗೋಕಾಕ ಪೂರ್ವಭಾಗದಿಂದ ಚುನಾಯಿತರಾದರು. ಹೀಗಾಗಿ ಎ. ಆರ್. ಪಂಚಗಾವಿ ಕಾರ್ಯಕ್ಷೇತ್ರ (ಕರ್ಮಭೂಮಿ) ಸಹಜವಾಗಿ ಗೋಕಾವಿ ನಾಡೇ ಆಯಿತು. ಗೋಕಾಕ ನೆಲದ ಋಣ ಪಂಚಗಾವಿಯವರ ಮೇಲೆ ಹೇಗಾಯಿತೋ ಹಾಗೆಯೇ ಪರಿಶುದ್ಧ ಜೀವನದ ಈ ವ್ಯಕ್ತಿಯಿಂದಾಗಿ ಗೋಕಾವಿ ನಾಡಿನ ಘನತೆ ಗೌರವವೂ ವೃದ್ಧಿಸಿದವು.

## ಶಿಕ್ಷಣ:

ಗೋಕಾದಲ್ಲಿ ಮಾಧ್ಯಮಿಕ ಶಿಕ್ಷಣ ಪೂರೈಸಿದ ಮೇಲೆ ಪದವಿ ವ್ಯಾಸಂಗ ಪ್ರಾರಂಭಗೊಂಡದ್ದು ಮಹಾರಾಷ್ಟ್ರದ ಕೊಲ್ಲಾಪೂರ ರಾಜಾರಾಮ ಕಾಲೇಜಿನಲ್ಲಿ. ತಮ್ಮ ಬಿ. ಎ. ಆನರ್ಸ್‌ಗೆ ಅವರು ಆಯ್ಕೆ ಮಾಡಿದ್ದು ಕನ್ನಡ ವಿಷಯ. ಅಲ್ಲಿ ಅವರಿಗೆ ಗುರುಗಳಾಗಿದ್ದವರು ಕನ್ನಡದ ಶ್ರೇಷ್ಠ ಸಂಶೋಧಕ-ವಿದ್ವಾಂಸರಾದ ಪ್ರೊ. ಕೆ. ಜಿ. ಕುಂದಣಗಾರರು. ಗೋಕಾಕ ತಾಲೂಕಿನ ಕೌಜಲಗಿಯವರಾದ ಪ್ರೊ. ಕೆ. ಜಿ. ಕುಂದಣಗಾರರಿಗೆ ತಮ್ಮೂರಿನ ನೆರೆ ಹಳ್ಳಿ ಕುಲಗೋಡದಲ್ಲಿ ಹುಟ್ಟಿ ಬೆಳೆದ ಹುಡುಗ ಅಪ್ಪಣ್ಣ ಪಂಚಗಾವಿಯ ಮೇಲೆ ಅಪಾರ ಪ್ರೀತಿ ಅಭಿಮಾನ! ಮೂರು ವರ್ಷದ ಪದವಿ ಶಿಕ್ಷಣದ ಓದಿ ಪೂರೈಸಿದ ಮೇಲೆ ಧಾರವಾಡದ ಪ್ರತಿಷ್ಠಿತ ಕರ್ನಾಟಕ ಕಾಲೇಜಿನಲ್ಲಿ ಅಂತಿಮ ವರ್ಷದ ಬಿ. ಎ. ಓದಿ ಪೂರೈಸಿದರು. ಅಲ್ಲಿ ಪ್ರೊ. ಸಾಸನೂರರಂಥ ಮೇಧಾವಿ ಗುರುವಾಗಿ ಸಿಕ್ಕರು. ಹೀಗಾಗಿ ಅಪಾರವಾದ ಕನ್ನಡ ಸಾಹಿತ್ಯದ ಓದಿನ ಅವಕಾಶ ಇವರಿಗೆ ಲಭಿಸಿತು. ಕನ್ನಡ ಸಾಹಿತ್ಯದ ಜೊತೆಗೆ ಇಂಗ್ಲೀಷ ಸಾಹಿತ್ಯದ ಅಧ್ಯಯನವನ್ನು ಮಾಡಿದರು. ಅವರ ಸಂಗ್ರಹ ಗ್ರಂಥಗಳನ್ನು ನೋಡಿದಾಗ ಷೇಕ್ಸಪಿಯರ್‌ನ ಹ್ಯಾಮ್ಲೇಟ್, ಮಾರ್ಕಬೇತ್, ಅಥೆಲೋ, ಕಿಂಗಲೇಯರ್, ಜೂಲಿಯಸ್ ಸೀಜರ್ ಮುಂತಾದ ನಾಟಕಗಳು ಪ್ರಸಿದ್ಧ ಚಿಂತಕರ ಹಲವಾರು ಕೃತಿಗಳು ಸಂಗ್ರಹಿಸಲ್ಪಟ್ಟಿದ್ದು ಕಂಡು ಬರುತ್ತದೆ.

ಎ. ಆರ್. ಪಂಚಗಾವಿಯುವರು ಕೊಲ್ಹಾಪೂರ ಕಾನೂನು ಮಹಾವಿದ್ಯಾಲಯದಿಂದ 1939 ರಲ್ಲಿ ಎಲ್‌ಎಲ್.ಬಿ. ಪದವಿ ಪಡೆದುಕೊಂಡು ಗೋಕಾಕದಲ್ಲಿ ವಕೀಲ ವೃತ್ತಿ ಪ್ರಾರಂಭಿಸಿದರು. 1952ರ ವರೆಗೂ ಗ್ರಾಮೀಣ ಪ್ರದೇಶದ ರೈತರನ್ನು ಅದರಲ್ಲೂ ವಿಶೇಷವಾಗಿ ಬಡ-ಬಗ್ಗರನ್ನು ಗಮನದಲ್ಲಿಟ್ಟುಕೊಂಡು ಕಡಿಮೆ ಫೀ ಯೊಂದಿಗೆ ಕೇಸು ನಡೆಸುತ್ತ ಜನಾನುರಾಗಿ ನ್ಯಾಯವಾದಿಯಾಗಿ ಹೆಸರು ಮಾಡಿದರು.

## ಸಾರ್ವಜನಿಕ ಸೇವೆಯಲ್ಲಿ

ಕಾನೂನು ಪದವಿ ವಿದ್ಯಾರ್ಥಿಯಾಗಿದ್ದಾಗಲೇ ವೈವಾಹಿಕ ಜೀವನ ದೀಕ್ಷೆ ಪಡೆದರು. ಕುಲಗೋಡದ ಬಾಲಪ್ಪಾ ಮಿರ್ಜಿಯವರ ಮಗಳಾದ ಸೌ. ಪಾರ್ವತೆವ್ವ ಎಲ್ಲ ವಿಧದಲ್ಲೂ ಇವರಿಗೆ ಅನುರೂಪಳಾದ ಸತಿಯಾದಳು. ಗಾಂಧೀಜಿಯವರ ಗಾಢ ಪ್ರಭಾವವಕ್ಕೊಳಗಾಗಿದ್ದ ಎ. ಆರ್. ಪಂಚಗಾವಿಯವರ ತಂದೆ ಶ್ರೀ ರಾಮಪ್ಪನವರು ಮದುಮೆಯ ಸಂದರ್ಭದಲ್ಲಿ ಹೆಣ್ಣಿನವರಿಂದ ಮಗನಿಗಾಗಿ ಪಡೆದದ್ದು ಕೇವಲ ಒಂದು ಜೊತೆ ಖಾದಿ ಬಟ್ಟೆ. ರಾಮಪ್ಪ ಪಂಚಗಾವಿಯವರು ನೇರವಾಗಿ ಸ್ವಾತಂತ್ರ್ಯ ಹೋರಾಟದಲ್ಲಿ ತೊಡಗಿಸಿಕೊಳ್ಳದಿದ್ದರು ಇವರ ಪರ್ಯಾಯ ಸೇವೆ ಅನುಪಮ ಹಾಗೂ ವಿಶಿಷ್ಟವಾದುದು. ಸ್ವಾಂತತ್ರ್ಯ ಹೋರಾಟ ನಾಡಿನಾದ್ಯಂತ ಚುರುಕುಗೊಂಡ ಸಂದರ್ಭದಲ್ಲಿ ಉತ್ತರ ಕರ್ನಾಟಕದಲ್ಲಿ ಅದು ಇನ್ನೂ ಉಗ್ರ ರೂಪ ತಾಳಿತ್ತು. ಅದರಲ್ಲೂ ವಿಶೇಷವಾಗಿ ಬೆಳಗಾವಿ ಜಿಲ್ಲೆ ಅದರ ಕೇಂದ್ರ ಸ್ಥಾನವೆನಿಸಿತ್ತು. ಸರ್ವಶ್ರೀ ಅಣ್ಣು ಗುರೂಜಿ , ವಾಲಿ ಚನ್ನಪ್ಪ, ಗಂಗಾಧರರಾವ ದೇಶಪಾಂಡೆ, ವಾಮನ್‌ರಾವ ಬಿದರಿ, ಯಮನಪ್ಪ ಅರಭಾಂವಿ, ನಿಂಗಪ್ಪ ಕರಲಿಂಗನ್ನವರ, ವೆಂಕರೆಡ್ಡಿ ಹೂಲಿ, ಹುಲಕುಂದ ರಾಜೇಸಾಬ ಹೀಗೆ ಹಲವಾರು ಜನ ಚಳುವಳಿಗಾರರು ಸಕ್ರೀಯ ಹೋರಾಟದಲ್ಲಿ ಭಾಗವಹಿಸಿದ್ದರು. ರೈಲು ಹಳಿ ಕೀಳುವುದು, ಕಂದಾಯ ಕಚೇರಿ – ಪೋಸ್ಟ ಸುಡುವುದು, ಶಿಂಧಿ ಗಿಡಗಳನ್ನು ಕಡೆಯುವುದು ಹೀಗೆ ದಿನಾ ಒಂದಿಲ್ಲೊಂದು ಬುಡಮೇಲು ಕೃತ್ಯದಲ್ಲಿ ತೊಡಗಿ ತಲೆ ಮರೆಸಿಕೊಂಡು ತಿರುಗುತ್ತ ದಿನಕ್ಕೊಂದು ವಾಸ್ತವ್ಯ ಬದಲಿಸುತ್ತ ಬ್ರಿಟಿಷ ಆಡಳಿತಕ್ಕೆ ಚಳ್ಳೆ ಹಣ್ಣು ತಿನಿಸುತ್ತಿದ್ದರು. ಆ ದಿನಗಳಲ್ಲಿ ಚಳುವಳಿಗಾರರಿಗೆ ಪಂಚಗಾವಿ ರಾಮಪ್ಪನವರ ಮನೆಯೇ ಅವರಿಗೆ ಊಟೋಪಚಾರ ಇತ್ಯಾದಿ ವ್ಯವಸ್ಥೆ ಹೊಂದಿದ ಅಡಗು ತಾಣವಾಗಿತ್ತು. ಇದೆಲ್ಲ ಹದಿವಯದ ಅಪ್ಪಣ್ಣ ಪಂಚಗಾವಿಯವರಮೇಲೆ ದಟ್ಟ ಪರಿಣಾಮ ಬೀರುತ್ತಾ ಹೋಯಿತು. ತಂದೆಯವರ ಪ್ರೋತ್ಸಾಹ ಜೊತೆಗೆ ಗೋಕಾಕ ಸ್ವಾಂತತ್ರ್ಯ ಹೋರಾಟಗಾರರಾದ ಶ್ರೀ ಶಂಕರೆಪ್ಪಣ್ಣ ಭರಭರಿ ಹಾಗೂ ಕೌತನಾಳಿ ಸೋದರರೊಂದಿಗೆ ಕಾಂಗ್ರೆಸ್ ಸ್ವಯಂ ಸೇವಕರಾಗಿ ದೇಶ ಸೇವಾ ಕಾರ್ಯದ ದೀಕ್ಷೆ ಪಡೆದರು.

# ಸಕ್ರಿಯ ರಾಜಕಾರಣಕ್ಕೆ ಪ್ರವೇಶ

ಉಪಜೀವನಕ್ಕೆ ವಕೀಲಿ ಬದುಕು ವೃತ್ತಿಯಾದರೆ, ಗಾಂಧಿಜೀವರ ಸೈದ್ಧಾಂತಿಕ ಸೇವಾ ಮಾರ್ಗ ಪ್ರವೃತ್ತಿಯಾಯಿತು. ಇದೇ ಸಂದರ್ಭದಲ್ಲಿ ಅಂದರೆ 1950 ಜನೇವರಿ 26 ಸಾರ್ವಭೌಮ ಪ್ರಜಾಪ್ರಭುತ್ವ ಗಣರಾಜ್ಯ (Soveraign Democratic Republic) ಅಂಗೀಕರಿಸಿ ಪ್ರಥಮ ಸಾರ್ವತ್ರಿಕ ಚುನಾವಣೆಗೆ ದೇಶ ಅಣಿಯಾಯಿತು. ಹೀಗಾಗಿ 1951ರ ಕೊನೆಯಲ್ಲಿ ಸ್ವತಂತ್ರ ಭಾರತದ ಮೊದಲ ಮಹಾ ಚುನಾವಣೆ ಘೋಷಿಸಲ್ಪಟ್ಟಿತು. ಭಾರತ ದೇಶದ ಪ್ರೌಢ ನಾಗರಿಕ, ಪ್ರಪ್ರಥಮ ಐತಿಹಾಸಿಕ ಮತದಾನಕ್ಕೆ ಅಣಿಯಾದ ಪ್ರತಿಯೊಬ್ಬರಿಗೂ ಇದೊಂದು ರೋಮಾಂಚನಕಾರಿ ಅನುಭವ! ಇನ್ನು ಚುನಾಯಿತ ಪ್ರತಿನಿಧಿಯಾಗಿ ಲೋಕಸಭೆ ಹಾಗೂ ವಿಧಾನಸಭೆ ಪ್ರವೇಶಿಸುವುದು ಎಂಥ ಸಂತಸದ ಐತಿಹಾಸಿಕ ದಾಖಲೆಯ ವಿಷಯ ಎನಿಸಬಹುದಲ್ಲವೇ? ಅಂಥಹ ಗೌರವಕ್ಕೆ ಭಾಜನರಾದವರೇ ಧನ್ಯರು!

ಉತ್ತರ ಕರ್ನಾಟಕದ ಬೆಳಗಾವಿ, ಧಾರವಾಡ, ಕಾರವಾರ , ಬಿಜಾಪೂರ ಜಿಲ್ಲೆಗಳು ಅಂದಿನ ಮುಂಬೈ ಪ್ರಾಂತದಲ್ಲಿ ಸೇರಿದ್ದವು. ತಯಾರಿ ನಡೆಸಿದ್ದ ಚುನಾವಣೆಗೆ ಅಂದಿನ ಪ್ರಮುಖ ಪಕ್ಷಗಳೆಂದರೆ ಸ್ವಾತಂತ್ರ್ಯ ಹೋರಾಟದ ಮೂಲಕ ಜನ ಮಾನಸದಲ್ಲಿ ಹಚ್ಚು ಹಸಿರಾಗಿ ನಿಂತ ಕಾಂಗ್ರೇಸ್ ಪಕ್ಷವೇ ಮುಂಚೂಣಿಯಲ್ಲಿದ್ದರೂ ಅದಕ್ಕೆ ಪ್ರಭಲ ಪೈಪೋಟಿ ನೀಡುವಂತೆ ಸಂಘಟಿತವಾಗಿದ್ದ ಆಚಾರ್ಯ ಜೆ.ಬಿ. ಕೃಪಲಾನಿಯವರಿಂದ ಸ್ಥಾಪಿತಗೊಂಡ ' ಕಿಸಾನ್ ಮಜದೂರ ಪ್ರಜಾಪಕ್ಷ' , ಜಯಪ್ರಕಾಶ ನಾರಾಯಣರ ಹಿರಿತನದ 'ಸಮಾಜವಾದಿ ಪಕ್ಷ', ಭಾರತದ ಉದ್ದಗಲಕ್ಕೂ ತನ್ನ ಅಸ್ತಿತ್ವ ಉಳಿಸಿಕೊಂಡು ಬಂದ 'ಕಮ್ಯುನಿಸ್ಟ ಪಕ್ಷ ' ಹಾಗೂ ಮುಂಬೈ ಪ್ರಾಂತ್ಯಕ್ಕೆ ಸೀಮಿತವಾದಂತೆ 'ರಿಪಬ್ಲಿಕನ್ ಪಾರ್ಟಿ ಆಫ್ ಇಂಡಿಯಾ' ಇವೆಲ್ಲಾ ಹೆಚ್ಚು ಕಡಿಮೆ ಮುಂಬೈ ಪ್ರಾಂತದಲ್ಲಿ (ಗೋಕಾಕ ಸೇರಿದಂತೆ) ಪ್ರಭಲವಾದ ಪ್ರಮುಖ ಪಕ್ಷಗಳಾಗಿದ್ದವು.

# ಪ್ರಥಮ ಮಹಾಚುನಾವಣೆಯಲ್ಲಿ ಎ. ಆರ್. ಪಂಚಗಾವಿ

ಉಳಿದೆಲ್ಲಡೆ ಕಾಂಗ್ರೇಸ್ ಪಕ್ಷದ ಉಮೇದುವಾರಿಕೆಗೆ ಹೆಚ್ಚಿನ ಪೈಪೋಟಿ ಇದ್ದರೆ ಗೋಕಾಕ ಕ್ಷೇತ್ರದ ಚಿತ್ರ ಇದಕ್ಕೆ ತದ್ವಿರುದ್ಧವಾಗಿತ್ತು. ಘಟಾನುಘಟಿಗಳೆಲ್ಲ ಕಿಸಾನ್ ಮಜದೂರ ಪಕ್ಷದಲ್ಲಿ ಗುರ್ತಿಸಿಕೊಂಡಿದ್ದರು. ಅಂದು ಬೆಳಗಾವಿ ಜಿಲ್ಲೆಯ ರಾಜಕೀಯದಲ್ಲಿ ಮಹತ್ತರ ಬದಲಾವಣೆಯಾಗಿತ್ತು. ಪ್ರಮುಖ ಸ್ವಾತಂತ್ರ ಹೋರಾಟಗಾರರೆನಿಸಿದ್ದ ಸರ್ವ ಶ್ರೀ ವಾಲಿಚನ್ನಪ್ಪ ರಾಯನಗೌಡ ಪಾಟೀಲ, ಶಾಂತಿನಾಥ ಇಂಗಳೆ, ಚಿನ್ಮಯಸ್ವಾಮಿ ಹಿರೇಮಠ (ಬೆಂಕಿ ಸ್ವಾಮಿ), ಎಸ್. ಎನ್. ಅಂಗಡಿ ಮುಂತಾದವರೆಲ್ಲ ಕಿಸಾನ್ ಮಜದೂರ ಪ್ರಜಾಪಕ್ಷ ಸೇರಿದ್ದರು. ಇವರೆಲ್ಲರೂ ಜಿಲ್ಲೆಯ ನಾನಾಕ್ಷೇತ್ರಗಳಿಂದ ಅದೇ ಪಕ್ಷದ ಹುರಿಯಾಳುಗಳು ಆಗಿದ್ದರು. ಇಂಥ ಸಂದರ್ಭದಲ್ಲಿ ಗೋಕಾಕ ತಾಲೂಕಿನ ಕಾಂಗ್ರೇಸ್ ಪಕ್ಷದ ಹುರಿಯಾಳಾಗಿ ಶ್ರೀ ಎ. ಆರ್. ಪಂಚಗಾವಿಯವರು ಅಭ್ಯರ್ಥಿ ಎಂದು ನಿರ್ಣಯಿಸಲ್ಪಟ್ಟರು. ಇವರಿಗೆ ಎದುರಾಳಿಯಾಗಿ ಪ್ರಜಾ ಪಕ್ಷದಿಂದ ನಿಯೋಜಿತರಾದವರು ಮಾತ್ರ ಸಾಮಾನ್ಯರಾಗಿರಲಿಲ್ಲ. ಕೆ.ಎಲ್.ಇ. ಶಿಕ್ಷಣ ಸಂಸ್ಥೆ, ಕರ್ನಾಟಕದ ಪ್ರತಿಷ್ಠಿತ ಶಿಕ್ಷಣ ಸಂಸ್ಥೆ. ಇದರ ಸಂಸ್ಥಾಪಕರಲ್ಲೊಬ್ಬರು ಮಾತ್ರರಲ್ಲ, ಅದರ ಸಪ್ತರ್ಷಿಗಳಲ್ಲೊಬ್ಬರೆಂದು ಗೌರವಿಸಲ್ಪಡುತ್ತಿದ್ದ ಶ್ರೀ ಬಿ. ಬಿ. ಮಮದಾಪೂರರವರು ಅಭ್ಯರ್ಥಿಯಾಗಿದ್ದರು. ಬೆಳಗಾವಿ ಜಿ. ಎ. ಹೈಸ್ಕೂಲ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ್ದು ಮಾತ್ರವಲ್ಲ 'District School Board' ಅಧ್ಯಕ್ಷರಾಗಿ ಪ್ರಾಥಮಿಕ ಶಾಲಾ ಶಿಕ್ಷಕರ ಆರಾದ್ಯ ದೈವವೆನಿಸಿದ್ದರು. ಜಿಲ್ಲೆಯ ಎಲ್ಲ ಪದವಿದರರು ಸುಶಿಕ್ಷಿತರ ಅಚ್ಚುಮೆಚ್ಚಿನ ವ್ಯಕ್ತಿ ಎನಿಸಿದ್ದರು. ಹೀಗೆ ಅಪಾರ ಜನಮನ್ನಣೆ ಪಡೆದ ಮಮದಾಪೂರ ಸ್ಪರ್ಧಿಸಿದಾಗ ಸಹಜವಾಗಿ ಗೋಕಾಕ ನಗರ ಹಾಗೂ ತಾಲೂಕಿನ ಮುಂದುವರೆದ ಜನಾಂಗದವರು ಹಾಗೂ ಶ್ರೀಮಂತರು ಅವರನ್ನೇ ಬೆಂಬಲಿಸಿದರು. ಆದರೆ ಜನಸಾಮಾನ್ಯರ ನಿಕಟತೆ ಕಾಯ್ದುಕೊಂಡಿದ್ದರಿಂದ ಮೇಲಾಗಿ ಅಂದು 'ನೊಗ ಹೇರಿದ ಜೋಡೆತ್ತಿನ ಗುರುತಿನೊಂದಿಗೆ' ಸ್ಪರ್ಧಿಸಿದ್ದ ಕಾಂಗ್ರೇಸ್ ಪಕ್ಷ ರಾಷ್ಟಕ್ಕೆ ಸ್ವಾತಂತ್ರ್ಯ ತಂದುಕೊಟ್ಟ ಪಕ್ಷವೆಂದು ಜನ–ಮನದಲ್ಲಿ ಅಚ್ಚಳಿಯದ ಪ್ರಭಾವ ಬೀರಿತ್ತು. ಜೊತೆಗೆ ಪಂಚಗಾವಿಯವರು ಒಬ್ಬ ವಕೀಲರಾಗಿ ತಾಲೂಕಿನ ಹಳ್ಳಿಗರ ಪರವಾಗಿ ಭೂ ಗೇಣಿ ಪ್ರಕರಣದ ವಕಾಲತ್ತು ವಹಿಸುತ್ತಿದ್ದರಿಂದ ಬಡ ರೈತರ ಪ್ರೀತಿಯ ವ್ಯಕ್ತಿಯಾಗಿದ್ದರು. ಅವರೆಲ್ಲ ಪಂಚಗಾವಿಯವರ ಬೆನ್ನಿಗೆ ನಿಂತರು ಮಾತ್ರವಲ್ಲ ಚುನಾವಣೆ ಸಂದರ್ಭದಲ್ಲಿ ಪ್ರಚಾರ ಕಾರ್ಯದಲ್ಲಿ ತೊಡಗಿ ಊರೂರು ಸುತ್ತುವ ಕಾರ್ಯಕರ್ತರಿಗೆ ಊಟೋಪಚಾರದ ವ್ಯವಸ್ಥೆಯನ್ನು ಸ್ವಂತ ಖರ್ಚಿನಲ್ಲಿ ಮಾಡುತ್ತಿದ್ದರು. ಇದು ಪ್ರತಿಯೊಂದು ಹಳ್ಳಿಯ ಸಾಮಾನ್ಯ ಚಿತ್ರವಾಗಿತ್ತು. ಹೀಗಾಗಿ ಎ. ಆರ್. ಪಂಚಗಾವಿ ಪ್ರಬಲ ಪ್ರತಿಸ್ಪರ್ಧಿ ಬಿ. ಬಿ. ಮಮದಾಪೂರರನ್ನು ದೊಡ್ಡ ಅಂತರದಿಂದ ಸೋಲಿಸಿ ವಿಜಯೀಯಾದರು. ಪ್ರಥಮ ವಿಧಾನ ಸಭೆ ಪ್ರವೇಶಿಸಿದಾಗ ಇವರ ವಯಸ್ಸು ಕೇವಲ 38 ವರ್ಷ.

ಮುಂಬೈ ಪ್ರಾಂತ್ಯದಲ್ಲಿ ಕಾಂಗ್ರೇಸ್ ಬಹುಮತಪಡೆದು ಸರಕಾರ ರಚಿಸಿತು. ಮುರಾರ್ಜಿ ದೇಸಾಯಿವರು ಮುಖ್ಯ ಮಂತ್ರಿಗಳಾಗಿ ಸರ್ಕಾರ ರಚಿಸಿದರು. ಅಷ್ಟು ವಿಶಾಲವಾದ ರಾಜ್ಯಕ್ಕೆ ಇವರು ರಚಿಸಿದ ಮಂತ್ರಿ ಮಂಡಳದ ಸದಸ್ಯರು ಕೇವಲ ಒಂಬತ್ತು ಜನ. ಅದರಲ್ಲಿ ಮುಂಬೈ-ಕರ್ನಾಟಕದಿಂದ ಆಯ್ಕೆಯಾದ ಎಂ. ಪಿ. ಪಾಟೀಲ, ಸಂಪುಟ ದರ್ಜೆಯ ಮಂತ್ರಿಯಾಗಿಯೂ, ಕೆ. ಎಫ್. ಪಾಟೀಲ (ಬ್ಯಾಡಗಿ ಕ್ಷೇತ್ರ, ಧಾರವಾಡ ಜಿಲ್ಲೆ) ಮತ್ತು ಬಿ. ಡಿ. ಜತ್ತಿ (ಜಮಖಂಡಿ ಕ್ಷೇತ್ರ ವಿಜಾಪೂರ ಜಿಲ್ಲೆ) ಇಬ್ಬರೂ ಉಪಮಂತ್ರಿಗಳಾಗಿ ಸೇರ್ಪಡೆಯಾದರು. ಆ ಸಂದರ್ಭದಿಂದಲೂ ಎ. ಆರ್. ಪಂಚಗಾವಿಯವರು ಬಿ. ಡಿ. ಜತ್ತಿಯವರ ಅಭಿಮಾನಿ ಬೆಂಬಲಿಗರಾಗಿದ್ದರು. ಮುಂದೆ ತಮ್ಮ ರಾಜಕೀಯ ಜೀವನದ ಕೊನೆಯವರೆಗೂ ಜತ್ತಿಯವರ ಕುರಿತ ಅವರ ನಿಷ್ಠೆ ಬದಲಾಗಲಿಲ್ಲವೆಂಬುದು ಗಮನಾರ್ಹ ಅಂಶ.

## ಮತ್ತೆ ಮೂರು ಅವಧಿಗೆ ಶಾಸಕರು

1957ರ ಎರಡನೇ ಮಹಾ ಚುನಾವಣೆ ಜರುಗಿದ ಸಂದರ್ಭಕ್ಕೆ ಹಲವಾರು ಬದಲಾವಣೆಯಾಗಿದ್ದವು. ಭಾಷಾವಾರು ತಳಹದಿಯಮೇಲೆ ರಾಜ್ಯಗಳ ಪುನರ್ ವಿಂಗಡಣೆಯಾಗಿ ನವ್ಹೆಂಬರ್ 1, 1956ರಂದು ಕನ್ನಡಿಗರ ಒಕ್ಕೂಟದ ಅಂಗವಾಗಿ ಹೊಸ ರಾಜ್ಯ ಉದಯವಾಯಿತು. ಹೀಗಾಗಿ ಈ ಮೊದಲು ಮುಂಬೈ ಪ್ರಾಂತ್ಯದಲ್ಲಿದ್ದ ಬೆಳಗಾವಿ, ವಿಜಾಪೂರ, ಧಾರವಾಡ ಮತ್ತು ಕಾರವಾರ ರಾಜ್ಯಗಳು ಪುನರ್‌ರಚಿತ ಹೊಸ ಮೈಸೂರು ರಾಜ್ಯದಲ್ಲಿ ಸೇರಿದವು. ಹೀಗಾಗಿ 1957ರ ಚುನಾವಣೆ ಮುಂಬೈ-ಕರ್ನಾಟಕ ರಾಜ್ಯಗಳ ಕನ್ನಡಿಗರಿಗೆ ವಿಶೇಷ ಸಂಭ್ರಮದ ವಿಷಯವಾಗಿತ್ತು.

ಈ ದಿನಗಳಿಗಾಗಲೆ ಪಂಚಗಾವಿಯವರು ವಿನಾಬಾಜಿಯವರ ಭೂದಾನ ಚಳುವಳಿಯಲ್ಲೂ ಸಕ್ರಿಯರಾಗಿದ್ದರು. ಶಾಸಕರಿದ್ದೂ ಬರಿಗಾಲಿನಲ್ಲಿ ಹಳ್ಳಿ-ಹಳ್ಳಿ ಸುತ್ತುತ್ತ ಭೂ ರಹಿತರ ಹಿತಕ್ಕಾಗಿ ಹೋರಾಟ ನಡೆಸಿದ್ದರು. ಹೀಗಾಗಿ ಮುಂದಿನ ಚುನಾವಣೆಯಲ್ಲಿ ಇವರಿಗೆ ಹೆಚ್ಚಿನ ಆಸಕ್ತಿ ಉಳಿದಿರಲಿಲ್ಲ. ಅದಾಗ್ಯೂ ಕಾಂಗ್ರೇಸ್ ಪಕ್ಷ ಇವರನ್ನು ಸಹಜವಾಗಿ ಬಿಟ್ಟುಕೊಡಲು ತಯಾರಿರಲಿಲ್ಲ. ಬೆಳಗಾವಿ ಜಿಲ್ಲೆಯಲ್ಲಿ ಬಹಳಷ್ಟು ಕ್ಷೇತ್ರಗಳ ಕಾಂಗ್ರೇಸ್ ಅಭ್ಯರ್ಥಿಗಳು ಬದಲಾದರೂ ಬಿ. ಬಿ. ಮಮದಾಪೂರಂತಹ ಪ್ರತಿಷ್ಠಿತರನ್ನು, ಮೊದಲ ಚುನಾವಣೆಯಲ್ಲಿ ಸೋಲಿಸಿದ್ದು ಸಣ್ಣ ವಿಷಯವಾಗಿರಲಿಲ್ಲ. ಇದೇ ಸಂದರ್ಭದಲ್ಲಿ ಕ್ಷೇತ್ರ ಪುನರ್‌ವಿಂಗಡಣೆಯಾಗಿ ಗೋಕಾಕ ತಾಲೂಕು ಮತಕ್ಷೇತ್ರ ಪೂರ್ವ ಹಾಗೂ ಪಶ್ಚಿಮ ಕ್ಷೇತ್ರವೆಂದು ಎರಡಾಗಿ ವಿಭಜಿಸಲ್ಪಟ್ಟಿದ್ದವು. ಪೂರ್ವಭಾಗಕ್ಕೆ ಪಂಚಗಾವಿಯವರೇ ಅಭ್ಯರ್ಥಿಗಳಾದರು. ಪಶ್ಚಿಮ ಭಾಗಕ್ಕೆ ನಿಂಗಪ್ಪಣ್ಣ ಕರನಿಂಗನವರ ಕಾಂಗ್ರೇಸ್ ಅಭ್ಯರ್ಥಿ. ಸ್ವಾತಂತ್ರ್ಯ ಹೋರಾಟಗಾರ ಪ್ರಾಮಾಣಿಕ ವ್ಯಕ್ತಿಯಾಗಿದ್ದರಿಂದ ಇಬ್ಬರೂ ಶಾಸಕರಾಗಿ ಚುನಾಯಿತರಾದರು.

1962ರ ಮೂರನೇ ಚುನಾವಣೆಯಲ್ಲಿ ಮತ್ತೆ ಎ. ಆರ್. ಪಂಚಗಾವಿಯವರು ಯಾವ ಹೆಚ್ಚಿನ ತೊಂದರೆಗಳಿಲ್ಲದೆ ಚುನಾಯಿತರಾದರು. ಈ ವೇಳೆಗಾಗಲೇ ಕಾನೂನು ಜ್ಞಾನವುಳ್ಳ ಅನುಭವಿ ರಾಜಕಾರಣಿಯಾಗಿ ರೂಪಗೊಂಡಿದ್ದ ಎ. ಆರ್. ಪಂಚಗಾವಿಯವರಿಗೆ ಸಚಿವ ಪದವಿ ನ್ಯಾಯವಾಗಿ ಸಿಗಲೇ ಬೇಕಾಗಿತ್ತು. ನಿಜಲಿಂಗಪ್ಪ ಹಾಗೂ ಬಿ. ಡಿ. ಜತ್ತಿ ಈ ಇಬ್ಬರ ರಾಜಕೀಯ ಮೇಲಾಟದಲ್ಲಿ ನಿಜಲಿಂಗಪ್ಪನವರ ಕೈ ಮೇಲಾಗಿತ್ತು. ಪಂಚಗಾವಿಯವರು ಬಿ. ಡಿ. ಜತ್ತಿಯವರ ಮೇಲಿನ ನಿಷ್ಠೆ ಬದಲಿಸಲಿಲ್ಲ ಎಂದೂ ಇವರಿಂದ ನಂಬಿಕೆ ದ್ರೋಹ ನಡೆಯಲಿಲ್ಲ. ಆದರೂ ಇವರ ಪ್ರಾಮಾಣಿಕತೆಗೆ ಖ್ಯಾತ ಸಂಸದೀಯ ಪಟು ಎನಿಸಿಕೊಂಡಿದ್ದ ಇವರ ಯೋಗ್ಯತೆಗೆ ಕಡಿಮೆಯದ್ದೇ ಅನಿಸಿದರೂ

ಉಪಸಭಾಪತಿ ಪಟ್ಟ ಇವರಿಗೆ ಲಭಿಸಿತು. ಆ ಗೌರವಯುತ ಸ್ಥಾನದ ಗಣತೆ, ಮಹತ್ವಗಳಿಗೆ ಚ್ಯುತಿ ಬರದ ರೀತಿಯಲ್ಲಿ ನಡೆದುಕೊಂಡರು.

**ನಾಲ್ಕನೇ ಚುನಾವಣೆ (1967)**: ಈ ಮೊದಲಿನ ಮೂರು ಚುನಾವಣೆಗಳಲ್ಲಿ ಇವರ ಅಭಿಮಾನಿಯಾಗಿದ್ದು ಇವರ ಗೆಲುವಿಗೆ ಶ್ರಮಿಸಿದ್ದ ಕಾರ್ಮಿಕ ನಾಯಕ ಯಮನಪ್ಪ ಅರಭಾಂವಿಯವರು ಪಂಚಗಾಂವಿಯವರಿಗೆ ಎದುರಾಳಿಯಾಗಿ ಸ್ಪರ್ಧಿಸಿದರು. ಇವರ ಬೆಂಗಾವಲಿಗೆ ಕಳೆದ 15 ವರ್ಷಗಳಿಂದ ತಮ್ಮ ಕ್ಷೇತ್ರದ ಸಮಸ್ಯೆಗಳ ಪರಿಹಾರಕ್ಕಾಗಿ ಅವರ ಪಟ್ಟ ಶ್ರಮವಿತ್ತು. ಹೀಗಾಗಿ ವಿಜಯ ಮಾಲೆ ಇವರ ಕೊರಳಿಗೇ ಬಿತ್ತು.

ಡಿ.ವ್ಹಿ.ಜಿ ಹೇಳುತ್ತಾರೆ,

*"ಋಣವ ತೀರಿಸಬೇಕು ಋಣವ ತೀರಿಸಬೇಕು*
*ಋಣವ ತೀರಿಸುತ ಜಗದಾದಿ ಸತ್ವವನು*
*ಜನದಿ ಕಾಣುತ್ತದರೊಳ್ ಒಂದುಗೂಡಲು ಬೇಕು.*
*ಮನೆಯೊಳಗೆ ಮಠ ನಿನಗೆ ಮಂಕುತಿಮ್ಮ"*

ಹುಟ್ಟಿದಾರಭ್ಯ ಹಲ ವಿದದ ಋಣದ ಮೂಟೆಯನ್ನು ಹೊತ್ತ ಮನುಷ್ಯ ಈ ಋಣ ತೀರಿಸುವತ್ತ ಗಮನ ಹರಿಸಬೇಕು. ಏನೆಲ್ಲಾ ನೀಡಿದ ದೇವನ ಋಣ ತೀರಿಸುವುದು ಹೇಗೆ? ಎಂಬುದಕ್ಕೆ ಡಿ.ವ್ಹಿ.ಜಿ.ಯವರು ಹೇಳುವುದು, "ಜನರಲ್ಲಿಯೇ ನನ್ನನ್ನು ಕಾಣುತ್ತ ಅವರ ಬೇಕು-ಬೇಡಗಳಿಗೆ ಸಂದಿಸುತ್ತ, ಅವರ ಸೇವೆ ಮಾಡಿದರೆ ನನ್ನ ಋಣ ಸಂದಾಯವಾಗುವುದು" ಎಂದು. ಯಾರಿಗೆ ಈ ಋಣದ ಪರಿವೆ ಇರುತ್ತದೆಯೋ ಅದನ್ನು ತೀರಿಸುವ ಕುರಿತು ಸದಾ ಚಡಪಡಿಸುತ್ತಾರೊ ಅವರು ನಿಜವಾದ ಮನುಷ್ಯರು, ಸಾರ್ಥಕ ಜೀವಿಗಳು. ಈ ಗುಂಪಿಗೆ ಸೇರಿದವರು ಪಂಚಗಾವಿಯವರು. 'ಜನ ಸೇವೆಯೇ ಜನಾರ್ಧನ ಸೇವೆ', 'ದೇಶ ಸೇವೆಯೇ ಈಶ ಸೇವೆ' ಇತ್ಯಾದಿ ಮಾತುಗಳ ನೈಜಾನುಷ್ಠಾನವೇ ಇವರ ಬದುಕು.

ಬಡಬಗ್ಗರ ಕುರಿತು ಸದಾ ಚಿಂತಿಸುವ ಅವರ ನೋವುಗಳಿಗೆ ಮಿಡಿವ ಜೀವ ಅವರದು. ತೊಂದರೆ ಹೇಳಿಕೊಂಡು ಬಂದವರಿಗೆಲ್ಲ ಉದಾರವಾಗಿ ನೀಡಿದವರು. ಇವರ ಪತ್ನಿ ಶ್ರೀಮತಿ ಪಾರ್ವತೆವ್ವನವರದು ವಿಶಾಲ ಮನಸ್ಸು, ಮಾತೃ ಹೃದಯ. ಬಂದವರಿಗೆ ಊಟ, ತಿನಿಸು ಎಂದು ಚಡಪಡಿಸುವ ಜೀವ. ಅವರು ಕನಿಷ್ಠ ಚಹ ಕುಡಿದಾದರೂ ಹೋಗಬೇಕು. ಕಟ್ಟಾ ಗಾಂಧೀ ಸಿದ್ಧಾಂತದ ಅನುಯಾಯಿಯಾಗಿದ್ದ ಪಂಚಗಾವಿಯವರು ಕನಸುಮನಸಿನಲ್ಲಿಯೂ ಜಾತಿಯ ತಾರತಮ್ಯ ಮಾಡಿದವರಲ್ಲ. ಯಾರೇ ಬಂದರೂ ಸಮಾಧಾನವಾಗಿ ಇದ್ದ ತುತ್ತು ಹಂಚಿ ತಿಂದವರು. ಅವರ ಮನೆಯಲ್ಲಿಯೇ ಇದ್ದು ಓದಿದವರು ಹಲವರು. ಅವರ ಸಹಾಯ-ಸಹಕಾರಗಳಿಂದ ಜೀವನ ರೂಪಿಸಿಕೊಂಡವರು ಕೂಡಾ ಸಾಕಷ್ಟು ಜನ. ಅವರೆಲ್ಲ ತಮ್ಮ ಬದುಕಿನುದ್ದಕ್ಕೂ ಪಂಚಗಾಂವಿಯವರನ್ನು ಸ್ಮರಿಸುತ್ತ ಬಂದಿದ್ದಾರೆ.

ಅವರದು ತತ್ವಬದ್ಧ ಜೀವನ ಎಂಬುದಕ್ಕೆ ಒಂದು ಒಳ್ಳೆಯ ಉದಾಹರಣೆ ಎಂದರೆ ಅವರ ಚುನಾವಣೆಗೆ ನಿಂತುಕೊಳ್ಳುವ ಮೊದಲು ಕೇವಲ 8-10 ವರ್ಷ ವಕೀಲ ವೃತ್ತಿ ನಡೆಸಿದ್ದರು. 1952ರಲ್ಲಿ ಚುನಾಯಿತರಾಗಿ ಮುಂಬೈ ಪ್ರಾಂತ್ಯಕ್ಕೆ ಆಯ್ಕೆಗೊಂಡಮೇಲೆ ವಕೀಲ ವೃತ್ತಿ ಬಿಟ್ಟು ಬಿಟ್ಟರು. ಅದಕ್ಕೆ ಅವರು ನೀಡುವ ಕಾರಣವೆಂದರೆ: "ಶಾಸಕನಂಥ ಸ್ಥಾನದಲ್ಲಿದ್ದು ವಕೀಲ ವೃತ್ತಿ ನಡೆಸಿದರೆ

ಜನ ಅಧಿಕಾರ ಸ್ಥಾನದಲ್ಲಿದ್ದವನನ್ನು ಖುಷಿ ಪಡಿಸಲು, ಶಾಸಕನ ಸಾಮೀಪ್ಯ ಬಯಸಲು ಎಷ್ಟೋ ಕಿರಿಯ ವಕೀಲರನ್ನು ತೊರೆದು ಬರಬಹುದಾದ ಸಾಧ್ಯತೆ ಇತ್ತು. ಇದು ಇತರ ವಕೀಲರ ವೃತ್ತಿಗೆ ಕುತ್ತು ಬರಬಹುದಾಗಿತ್ತು. ಅದು ಅಲ್ಲದೇ ಶಾಸಕರಾಗಿಯೂ ಕೇಸುಗಳನ್ನು ಹಿಡಿಯುತ್ತಾ ಹೋದರೆ ಅತ್ತ ಜನತೆಯ ಪ್ರತಿನಿಧಿಯಾಗಿ ಶಾಸನ ಸಭೆಯಲ್ಲಿ ಸಮರ್ಪಣಾ ಭಾವದಿಂದ ದುಡಿಯುವುದು ಸಾಧ್ಯವಿಲ್ಲ; ಇತ್ತ ಊರಿನಲ್ಲಿಯೇ ಉಳಿದು ಕಕ್ಷಿಗಾರರಿಗೂ ನ್ಯಾಯ ಒದಗಿಸಲು ಸಾಧ್ಯವಿಲ್ಲವೆಂಬ ಸತ್ಯ ಅರಿತಿದ್ದರು. ಇದಕ್ಕೂ ಮೇಲಾಗಿ ತನ್ನ ಅನುಕೂಲಕ್ಕೆ ತಕ್ಕಂತೆ ಮುದ್ದತಿನ ಮೇಲೆ ಮುದ್ದತ್ತು ಪಡೆಯುತ್ತ ಬಡ ರೈತ ಕಕ್ಷಿಗಾರರಿಗೆ ಹೊರೆಯಾಗಬೇಕಾಗುತ್ತಿತ್ತು. ಇದು ಶೋಷಣೆಯಲ್ಲದೇ ಇನ್ನೇನು? ಎನ್ನುವ ಅವರ ಪ್ರಾಮಾಣಿಕತೆಗೆ ತಲೆಬಾಗಬೇಕು. 1952–72ರ ಅವರ ಶಾಸಕತ್ವದ ಅವಧಿಯ ನಂತರ ನಾಲ್ಕಾರು ವರ್ಷ ಮಾತ್ರ ಹೈಕೋರ್ಟನಲ್ಲಿ ನ್ಯಾಯವಾದಿಯಾಗಿದ್ದರು.

## ಶಿಕ್ಷಣ ಮತ್ತು ಸಹಕಾರ ಪ್ರೇಮಿ

ಹಲವಿಧದ ಅನಾನುಕೂಲತೆಯ ನಡುವೆಯೂ ಕಲಿಯುವ ಸಲುವಾಗಿಯೇ ಹುಟ್ಟೂರನ್ನು ಬಿಟ್ಟು ಬಂದು ಗೋಕಾಕದಲ್ಲಿ ಬಾಡಿಗೆ ಮನೆ ಮಾಡಿ ಮಾಧ್ಯಮಿಕ ಶಿಕ್ಷಣ, ಕೊಲ್ಹಾಪೂರ–ಧಾರವಾಡಗಳಲ್ಲಿ ಪದವಿ ಶಿಕ್ಷಣ ಮತ್ತೆ ಕೊಲ್ಹಾಪೂರಕ್ಕೆ ಹೋಗಿ ಕಾನೂನು ಪದವಿ ಪಡೆದರು. ಎಷ್ಟೊಂದು ತಿರುಗಾಟ ತೊಳಲಾಟ ಎಷ್ಟೊಂದು ಖರ್ಚು–ವೆಚ್ಚ! ಜನಸಾಮಾನ್ಯರ ಕುರಿತು ಚಿಂತಿಸಿ ಅವರ ಮನ ನೊಂದು ಹೋಗಿತ್ತು. ಆ ದಿನಗಳಲ್ಲಿ ಉನ್ನತ ಶಿಕ್ಷಣ ಮಾತ್ರವಲ್ಲ ಪ್ರಾಥಮಿಕ ಹಂತದ ಶಿಕ್ಷಣವೇ ಜನಸಾಮಾನ್ಯರಿಗೆ ಎಟುಕದಂತಿತ್ತು. ಅಂದು ಗೋಕಾಕದಲ್ಲಿದ್ದ ಮುನ್ಸಿಪಲ್ ಹೈಸ್ಕೂಲ್ ಹೊರತುಪಡಿಸಿದರೆ ತಾಲೂಕಿನ ಕೌಜಲಗಿ ಎಂಬ ಗ್ರಾಮದಲ್ಲಿ 1959ರಲ್ಲಿ ಸ್ಥಾಪನೆಗೊಂಡ ಎ. ಡಿ. ಹೈಸ್ಕೂಲ್ ಎಂಬ ಚಿಕ್ಕದೊಂದು ಹೈಸ್ಕೂಲು. ಅದು ಬಿಟ್ಟರೆ ಬೇರೆ ಅನುಕೂಲವೇ ಇಲ್ಲ. ಇಂಥ ಸನ್ನಿವೇಷದಲ್ಲಿ ಕೆಲ ಶಿಕ್ಷಣ ಪ್ರೇಮಿ ಸ್ನೇಹಿತರೊಡಗೂಡಿ 'ನ್ಯಾಷನಲ್ ಎಜ್ಯೂಕೇಶನ್ ಸೊಸಾಯಿಟಿ' ಎಂಬ ಶಿಕ್ಷಣ ಸಂಸ್ಥೆ ಒಂದನ್ನು ಹುಟ್ಟುಹಾಕಿದರು. ಗೋಕಾಕದ ಒಂದು ಮುರುಕು ಮನೆಯಲ್ಲಿ ಇಪ್ಪತ್ತು–ಇಪ್ಪತ್ತೈದು ವಿದ್ಯಾರ್ಥಿಗಳೊಂದಿಗೆ 'ನ್ಯೂ ಇಂಗ್ಲೀಷ ಸ್ಕೂಲ್' ಎಂಬ ಹೆಸರಿನ ಮಾಧ್ಯಮಿಕ ಶಾಲೆ ಪ್ರಾರಂಭಿಸಿದರು. ಇಂದು ಹನ್ನೆರಡನೂರಕ್ಕೂ ಅಧಿಕ ವಿದ್ಯಾರ್ಥಿಗಳನ್ನೊಳಗೊಂಡ ಗೋಕಾಕದ ಒಂದು ಪ್ರತಿಷ್ಠಿತ ಹೈಸ್ಕೂಲ್ ಆಗಿ ನಿಂತಿದೆ. 1959ರಿಂದ 1990ರ ವರೆಗೂ ಅವರೇ ಈ ಶಿಕ್ಷಣ ಸಂಸ್ಥೆಯ ಅಧ್ಯಕ್ಷರಾಗಿದ್ದರು. ತಮ್ಮ ಊರು ಹಿರೇಕೊಪ್ಪದಲ್ಲಿಯೂ ಬಿ.ಜಿ. ಹೈಸ್ಕೂಲ್‌ನ್ನು, ಕಲ್ಲೋಳ್ಳಿಯಲ್ಲಿ ಪಂಡಿತ ಜವಾಹರಲಾಲ ನೆಹರು ಹೈಸ್ಕೂಲ್‌ಗಳು ಮುಂದೆ ಕೆಲವು ವರ್ಷಗಳಲ್ಲಿ ಸ್ಥಾಪನೆಗೊಂಡವು. ಇಂದು ಒಂದೊಂದು ಮಾಧ್ಯಮಿಕ ಶಾಲೆಗಳು ಬೃಹತ್ತಾಗಿ ಬೆಳೆದು ನಿಂತು ಗ್ರಾಮೀಣ ಮಕ್ಕಳ ಭವಿಷ್ಯ ಬರೆಯುವಲ್ಲಿ ಮಹತ್ತರದ ಪಾತ್ರವಹಿಸುತ್ತಿವೆ. ಎ. ಆರ್. ಪಂಚಗಾವಿಯವರ ದೂರದೃಷ್ಟಿಗೆ ಸಾಕ್ಷಿ ಹೇಳುತ್ತ ನಿಂತಿವೆ.

ರೈತರ ಹಿತರಕ್ಷಣೆ ಹಾಗೂ ಅಬ್ಯುದ್ಯಯಕ್ಕಾಗಿ ಸಹಕಾರಿ ರಂಗ ಬಲಗೊಳ್ಳಬೇಕೆಂಬುದು ಪಂಚಗಾವಿಯವರ ಮಹದಾಶೆಯಾಗಿತ್ತು. ಅದಕ್ಕನುಗುಣವಾಗಿ ಪ್ರಾಥಮಿಕ ಕೃಷಿ ಅಭಿವೃದ್ಧಿ ಬ್ಯಾಂಕ್ ಸ್ಥಾಪಿಸಿ ತಾಲೂಕಿನ ರೈತರಿಗೆಲ್ಲ ಅನುಕೂಲವಾಗುವಂತೆ ಮಾಡಿದರು. ನಗರದಲ್ಲಿ ರಡ್ಡಿ ಕೋ–ಆಪ್. ಕ್ರೆ. ಬ್ಯಾಂಕ್. ಲಿ. ಕೂಡ ಪಂಚಗಾವಿಯವರ ಪ್ರಯತ್ನದ ಫಲವಾಗಿ ಪ್ರಾರಂಭಗೊಂಡಿತು. ಗೋಕಾಕ ತಾಲೂಕಿನಾದ್ಯಂತ ಕಬ್ಬು ಬೆಳೆಗಾರರು ಬಹು ಸಂಖ್ಯೆಯಲ್ಲಿ ಇದ್ದುದ್ದರಿಂದ ಅವರಿಗೆ ಅನುಕೂಲವಾಗಲೆಂಬ ದೃಷ್ಠಿಯಿಂದ ಸಾಕಷ್ಟು ಶ್ರಮಿಸಿ 1970ರಲ್ಲಿ ತಾಲೂಕಿನ ಸಮಸ್ತ ರೈತರ ಸಹಕಾರದೊಂದಿಗೆ "ಘಟಪ್ರಭಾ ಸಹಕಾರಿ ಸಕ್ಕರೆ ಕಾರಖಾನೆ" ಯನ್ನು ಸ್ಥಾಪನೆ ಮಾಡಿದರು. ಅವರು ಅದರ ಮುಖ್ಯ ಪ್ರವರ್ತಕರಾಗಿ ಹಗಲಿರುಳು ಶ್ರಮಿಸಿ, ಶೇರು ಸಂಗ್ರಹಣೆ ಮಾಡಿ ಅದರ ಅಭಿವೃದ್ಧಿಗೆ ಕಾರಣೀಭೂತರಾದರು.

ಅಂದು ಗ್ರಾಮೀಣ ಪ್ರದೇಶದಲ್ಲಿ ತಾಲೂಕಾ ಸ್ಥಳ ಗೊಕಾಕದಲ್ಲಿಯೇ ಸುಸಜ್ಜಿತವಾದ ಆಸ್ಪತ್ರೆಗಳಿರಲಿಲ್ಲ. ಬಡ ಹಳ್ಳಿಗರ ತೊಳಲಾಟ ನೋಡುವಂತಿರಲಿಲ್ಲ. ಪಂಚಾಗಾಂವಿಯವರ ವಿಶೇಷ ಶ್ರಮದ ಫಲವಾಗಿ ಗೋಕಾಕದಲ್ಲಿ "ಕಾಟೇಜ ಹಾಸ್ಪಿಟಲ್" ಹೆಸರಿನ ಸರಕಾರಿ ಆಸ್ಪತ್ರೆ ಸ್ಥಾಪನೆಗೊಂಡಿತು.

## ಸರ್ವಾಣಾಂ ಪ್ರಿಯ

ಪಂಚಗಾಂವಿ ಯಾರಿಗೂ ಎಂದೂ ಬೇಡಾಗಿ ಬೇಸರವಾಗುವಂತೆ ನುಡಿದವರಲ್ಲ ಮತ್ತು ನಡೆದವರಲ್ಲ. ಎಲ್ಲರ ಪ್ರೀತಿಗೆ ಪಾತ್ರರಾದವರು. ದ್ವೇಷ–ಅಸೂಯೆ, ಅಹಂಕಾರ–ಆಡಂಬರ, ಸಿಟ್ಟು–ಸೊಕ್ಕುಗಳನ್ನು ಎಂದೂ ತಮ್ಮ ಬಳಿ ಸುಳಿಯಗೊಟ್ಟವರಲ್ಲ. ಯೋಗಿಯ ಪ್ರಶಾಂತ ನಿಶ್ಚಲ ನಿರ್ಲಿಪ್ತ ಸ್ವಭಾವ ಅವರದು. ಎಲ್ಲ ವರ್ಗದ ಎಲ್ಲ ಜಾತಿ ಪಂಗಡಗಳ ಜನರೊಂದಿಗೆ ಒಂದಾಗಿ ಬಾಳಿ ಬದುಕಿದರು. ದುರ್ಗುಣ ದುರಾಸೆದೂರವಿಟ್ಟು ನಿಷ್ಕಪಟ, ನಿಷ್ಕಲ್ಮಷ, ನಿಸ್ವಾರ್ಥ ಸಾಧು ವ್ಯಕ್ತಿತ್ವದಿಂದ ಅಜಾತ ಶತ್ರುವೆನಿಸಿದರು.ಅಧಿಕಾರ ಬಂತೆಂದು ಹಿಗ್ಗಿದವರಲ್ಲ ಹೋಯಿತೆಂದು ಕುಗ್ಗಿದವರಲ್ಲ.

ಎಲ್ಲರೊಳಗೊಂದಾಗು ಎಂಬ **ಡಿವಿಜಿ** ಮಾತಿನ ಬಾಳ ಮರ್ಮವನ್ನರಿತು ಕರ್ಮ ಮಾಡಿ ಬಾಳಋಣ ತೀರಿಸಿದರು. ಅವರ ಆದರ್ಶತನ, ಸರಳತೆ ಗುಣಸ್ವಭಾವಗಳನ್ನು ಅನುಕರಣೆ ಮಾಡುವದೂ ಕೂಡ ಅಷ್ಟು ಸುಲಭವಲ್ಲ. ರಾಷ್ಟ್ರಪಿತ ಗಾಂಧೀಯಂತೆ ಈ ಗೋಕಾಕ ಗಾಂಧೀ ಕೂಡ ನಮ್ಮ ಸಮಕಾಲೀನ ದಂತಕತೆಯ ಕಲ್ಪನೆಯ ಪಾತ್ರವಾಗಿ ತೋರುತ್ತಾರೆ ! ಅವರಿಗೆ ಅವರೇ ಹೋಲಿಕೆ. ಪಂಚಗಾವಿಯವರದು ತುಂಬ ಸರಳ ಜೀವನ. ಅವರು 4 ಭಾರಿ ವಿಧಾನ ಸಭೆಗೆ ಆಯ್ಕೆಯಾದ ಶಾಸಕ, ಶಾಸನಸಭೆಯ ಉಪಸಭಾಪತಿ ಎಂದರೆ ಜನ ನಂಬುವದು ಕಷ್ಟವಾಗುತ್ತಿತ್ತು. ಹೊಸ ಪೀಳಿಗೆಯ ಜನ ನಂಬುತ್ತಿರಲಿಲ್ಲ. ಅಷ್ಟರ ಮಟ್ಟಿಗೆ ಉಡುಗೆ–ತೊಡುಗೆ; ನಡೆ–ನುಡಿ ಎಲ್ಲವೂ ಸೀದಾಸಾದಾ. ಗೋಕಾಕ ರಸ್ತೆಗಳಲ್ಲಿ ಪಾದಚಾರಿಯಾಗಿ ಒಬ್ಬರೇ ನಿರ್ಭಯವಾಗಿ ನಿರಾಂತಕವಾಗಿ ಹೋಗುವ ದೃಷ್ಯ ಅಂದಿನ ದಿನಗಳಲ್ಲಿ ಸಾಮಾನ್ಯವಾಗಿತ್ತು. ತಮ್ಮ ಕೆಲಸಕ್ಕೆ ತಾವೇ ಹೋಗುವ ತಾವೇ ಮಾಡಿಕೊಳ್ಳುವ ಸ್ವಾವಲಂಬಿ. ಊರಿಗೆ ಹೊಲಗಳಿಗೆ ಅಥವಾ ತಾನೇ ಕಟ್ಟಿ ಬೆಳೆಸಿದ ಶಿಕ್ಷಣ ಸಂಸ್ಥೆಗಳಿಗೆ ಭೇಟ್ಟಿಕೊಡುವದಿದ್ದಾಗ ಅವರು ಬಹಳಷ್ಟು ಕಡೆಗೆ ಏಕಾಂಗಿಯಾಗಿ ಸರ್ಕಾರಿ ಬಸ್ಸಿನಲ್ಲೇ ಓಡಾಡಿಕೊಂಡಿದ್ದರು.

ಆಸ್ತಿ– ಅಧಿಕಾರ ಅಂತಸ್ತು ಇದ್ದೂ ಇಲ್ಲದಂತಿರುವದು; ಸಹಜ ಸಾಮಾನ್ಯ ಜೀವನ ನಡೆಸುವದು ಎಲ್ಲರಿಂದಲೂ ಸಾಧ್ಯವಿಲ್ಲ. ಊರಲ್ಲಿ ಆತ್ಮೀಯರಲ್ಲಿ, ಪರಿಚಿತ ಸಂಬಂಧಿಗಳಲ್ಲಿ, ಮದುವೆಗಳಲ್ಲಿ ಅಂತ್ಯಕ್ರಿಯೆಗಳಲ್ಲಿ ಒಬ್ಬ ಸಾಮಾನ್ಯನಂತೆ ತಪ್ಪದೇ ಪಾಲ್ಗೊಳ್ಳುತ್ತಿದ್ದರು.

ಗೋಕಾಕ ನಗರದಲ್ಲಿ ಯಾವುದೇ ವೈಚಾರಿಕ – ಸಾಹಿತ್ಯಕ ಸಾಂಸ್ಕೃತಿಕ ಸಭೆ ಸಮಾರಂಭ, ವಿಚಾರ ಸಂಕಿರಣಗಳಿದ್ದಲ್ಲಿ ವೇದಿಕೆಯ ಮೇಲೆ ಸ್ಥಾನ ಇರಲೇಬೇಕೆಂದಿಲ್ಲ ಕರೆದರೂ ಸಾಕು ಕರೆಯದಿದ್ದಾಗಲೂ ವಿಷಯ ತಿಳಿದಿದ್ದಲ್ಲಿ ಸಮಯವಿದ್ದಲ್ಲಿ ಓರ್ವ ಸಾಮಾಜಿಕ ಜವಾಬ್ದಾರಿಯ ಸುಸಂಸ್ಕೃತ ನಾಗರಿಕನಾಗಿ ಬಂದು ಕೂತು ಭಾಗವಹಿಸುತ್ತಿದ್ದರು.

ವೇದಿಕೆಗಾಗಿ ಕುರ್ಚಿಗಾಗಿ ಹಪಿಹಪಿಸುವ ಕಚ್ಚಾಡುವ ಇಂದಿನ ಪ್ರತಿಷ್ಠಿತರಲ್ಲಿ ಪಂಚಗಾಂವಿ ಅಪರೂಪದ ವ್ಯಕ್ತಿ. ಈ ಗುಣ ಸ್ವಭಾವ ಸಹಜವಾಗಿ ಎಲ್ಲರಿಗೂ ದಕ್ಕುವಂತಿದಲ್ಲ. ಬಿಳೇ ದೋತರ ಮೇಲೊಂದು ಬಿಳೀ ನೆಹರೂ ಶರ್ಟು ಮೇಲೆ ಕಿರೀಟವಿಟ್ಟಂತೆ ಗಾಂಧೀಟೊಪ್ಪಿಗೆ. ಅದೂ ಕೈ ಮಗ್ಗದಲ್ಲಿ ನೂಲಲಾದ ಒರಟು ಖಾದಿ. ಅದಕ್ಕೆ ಗಂಜಿ, ಇಸ್ತ್ರಿಯೂ ಇರುತ್ತಿರಲಿಲ್ಲ. ಅದು ಪಂಚಗಾವಿಯವರ ನಿತ್ಯ ಉಡುಪು. ಅಪರೂಪಕ್ಕೊಮ್ಮೊಮ್ಮೆ ಅವರ ಮೊಮ್ಮಗಳು ಬಲವಂತವಾಗಿ ತಾನೇ ಇಸ್ತ್ರೀ ಮಾಡಿ ಅಜ್ಜನಿಗೆ ನೀಡುತ್ತಿದ್ದುದುಂಟು.

ಇಪ್ಪತ್ತು ವರ್ಷಗಳ ಶಾಸಕತ್ವದ ನಂತರದ ದಿನಗಳಲಳಲ್ಲಿ ವ್ಯರ್ಥ ಕಾಲಹರಣ ಮಾಡುವದಕ್ಕಿಂತ ಕಾಯಕನಿರತನಾಗಬೇಕೆಂದು 3–4 ವರ್ಷ ಬೆಂಗಳೂರಿನಲ್ಲಿ ಹೈಕೋರ್ಟಿನಲ್ಲಿ ವಕೀಲಿ ವೃತ್ತಿಯನ್ನು ನಡೆಸಿದರು. ಅವರೊಬ್ಬ ಪ್ರತಿಬಾವಂತ ಯಶಸ್ವಿ ನ್ಯಾಯವಾದಿ ಯಾಗಿದ್ದರೆಂಬುದನ್ನು ಮತ್ತೆ ಹೇಳಬೇಕಾಗಿಲ್ಲ. ಬೆಂಗಳೂರು ನಗರದಲ್ಲಿ ಸಣ್ಣಮನೆ ಮಾಡಿಕೊಂಡು ಅಲ್ಲೇ ಅವರೊಬ್ಬರೇ ಇದ್ದುಕೊಂಡು ಪ್ರಾಕ್ಟೀಸ ಶುರು ಮಾಡಿದರು. ತಕ್ಕಮಟ್ಟಿಗೆ ಚೆನ್ನಾಗಿಯೂ ನಡೆದಿತ್ತು. ಪಂಚಗಾಂವಿ ಧರ್ಮಪತ್ನಿ ಪಾರ್ವತಮ್ಮ ವಿಧಿವಶರಾಗಿದ್ದರಿಂದ ಅವರೊಬ್ಬರೇ ಬೆಂಗಳೂರಲ್ಲಿ ಇರಬೇಕಾಗಿತ್ತು. ವೃದ್ಧಾಪ್ಯದಲ್ಲಿ ದೂರದ ಊರಲ್ಲಿ ಈ ರೀತಿ ಒಬ್ಬರೇ ಕೈ ಬಾಯಿ ಸುಟ್ಟುಕೊಂಡು ಪ್ರಯಾಸ ಪಡುವುದನ್ನು ನೋಡಲಾಗದೆ ಅವರ ಏಕೈಕ ಮಗ ರಂಗಪ್ಪ ಸೊಸೆ ಸರೋಜಾ ಬೆಂಗಳೂರಿಗೆ ಬಂದು ಒತ್ತಾಯಿಸಿ ಪುನ: ಗೋಕಾಕಕ್ಕೆ ಕರೆ ತಂದರು.

ಅಧಿಕಾರ ಇದ್ದಾಗಲೂ ಅಷ್ಟೇ ಇಲ್ಲದಾಗಲೂ ಅಷ್ಟೇ ಅವರು ವಿನಯ ಸೌಜನ್ಯದ ಪ್ರತೀಕ. ಕಣ್ಣುಗಳಲ್ಲಿ ಸದಾ ಕರುಣೆ ಧೈನ್ಯ ತುಂಬಿರುತ್ತಿತ್ತು. ಮುಖದಲ್ಲಿ ಎಂದಿಗೂ ಮಾಸದ ಮುಗುಳ್ನಗೆ.

ಮನೆಗೆ ಯಾರೇ ಅತಿಥಿ ಅಭ್ಯಾಗತರು, ಹಿರಿ–ಕಿರಿಯರು, ಪರಿಚಿತ ಅಪರಿಚಿತರು, ಸಾಮಾನ್ಯರಲ್ಲಿ ಸಾಮಾನ್ಯರೇ ಆಗಿರಲಿ ಖುದ್ದಾಗಿ ಬಾಗಿಲ ತೆರೆದು ಆತ್ಮೀಯವಾಗಿ ಸ್ವಾಗತಿಸಿ ಒಳಬರಮಾಡಿಕೊಳ್ಳುವ ಸಹೃದಯತೆ, ಬಂದವರ ಸಮಸ್ಯೆಗೆ ಪರಿಹಾರ ನೀಡುವರೊಂದಿಗೆ ತಮ್ಮ ಕೈಯಾರೆ ಚಹಾ ತಂದು ಉಪಚರಿಸಿ ನಂತರ, ತಾವೇ ಖುದ್ದಾಗಿ ಅತಿಥಿಗಳು ಕುಡಿದಿಟ್ಟ ಚಹಾಕಪ್ಪು ಎತ್ತಿ ಎತ್ತಿಡುವಷ್ಟು ವಿಧೇಯಭಾವ ಎಷ್ಟು ಜನರಲ್ಲಿದೆ? ಆಗಂತುಕರು ಮತ್ತೆ ಹೊರತು ನಿಂತಾಗ ಎದ್ದು ಬಾಗಿಲವರೆಗೂ ಬಂದು ಕೈ ಜೋಡಿಸಿ ಕಳಿಸುವ ಹೃದಯವಂತಿಕೆ ಅವಿಸ್ಮರಣೀಯ.

1935 ರಲ್ಲಿ ಗೋಕಾಕದಲ್ಲಿ ತರುಣ ಸಂಘ ಒಂದು ಸ್ಥಾಪಿಸಲ್ಪಟ್ಟಿತು. ಸರ್ವಶ್ರೀ ಎಂ. ಎಂ. ಉಮರಾಣಿ, ಶಂಕರೆಪ್ಪಾ ಲಕ್ಷೇಟ್ಟಿ, ಶಿವಶಂಕರಪ್ಪ ಭರಭರಿ, ಬಾಳಪ್ಪಾ ಹಾವಳಿ, ಯು. ಎಫ್. ಯಲಿಗಾರ, ಗುರುಸಿದ್ದಪ್ಪ ಕೌತನಾಳಿ, ಕರಡಿಗುದ್ದಿ ಹಾಗೂ ಅಪ್ಪಣ್ಣ ಪಂಚಗಾವಿ ಸದಸ್ಯರಾಗಿದ್ದರು. ಗ್ರಾಮೀಣ ಪ್ರದೇಶದಿಂದ ಬಂದ ಹಾಲುಮತದ ಯಮನಪ್ಪ ಅರಭಾಂವಿ, ಉದ್ದಪ್ಪ ಎತ್ತಿನಮನಿಯವರೂ ಈ ಸಂಘಟನೆಗೆ ಸೇರಿಕೊಂಡದ್ದರು.

ಸಮಾಜ ಸೇವೆಯಲ್ಲಿ ಸ್ವಯಂ ಸೇವಕರಾಗಿ ದುಡಿಯುತ್ತಲೇ ಈ ಸಂಘಟನೆಯಲ್ಲಿದ್ದು ಮುಂದೆ ಇವರೆಲ್ಲ ಡಾ|| ನಾ. ಸು. ಹರ್ಡಿಕರ ಅವರ ನೇತೃತ್ವದ ರಾಷ್ಟ್ರೀಯ ಸೇವಾದಳದಲ್ಲಿ ಸೇರಿಕೊಂಡರು. ಹಳ್ಳಿ-ಹಳ್ಳಿ ತಿರುಗಿ ಸ್ವಾತಂತ್ರ್ಯದ ಬಗ್ಗೆ ಜನ ಜಾಗೃತಿ, ಸಂಘಟನಾ ಕಾರ್ಯಗಳಲ್ಲಿ ತೊಡಗಿದರು. ಮುಂದೆ ಇವರೆಲ್ಲರೂ ಸಮಾಜ ಸೇವಾ ನಿರತರಾದ ಈ ಸಂಘಟಿತ ಸ್ನೇಹಿತರೆಲ್ಲ ದಶಕದ ನಂತರ ಕಾಂಗ್ರೇಸ್ ಪಕ್ಷವನ್ನು ಸೇರಿದರು.

ಪಂಚಗಾಂವಿಯವರು ಬಾಲ್ಯದಿಂದಲೂ ಗಾಂಧೀ ವಿಚಾರ ಧಾರೆಯಿಂದ ಪ್ರಭಾವಿತರಾಗಿದ್ದರೆಂಬುದನ್ನು ಮತೇ ಹೇಳಬೇಕಾಗಿಲ್ಲ. ಮುಂದೆ ಕಾಂಗ್ರೇಸ್ ಪ್ರತಿನಿಧಿ ಸದಸ್ಯರಾದರು. ಇವರು ಜಾತಿಯಿಂದ 'ರೆಡ್ಡಿ' ಪ್ರಬಲ ಸಮುದಾಯಕ್ಕೆ ಸೇರಿದವರಾದರೂ ತಾನೆಂದೂ ಜಾತಿವಾದಿಯಾಗಿ ತಮ್ಮ ಜಾತಿ ಪಂಗಡಗಳೊಂದಿಗೆ ಗುರ್ತಿಸಿಕೊಂಡವರಲ್ಲ. ಪಂಚಗಾಂವಿ ಅವರದ್ದು.

**ಜಾತ್ಯಾತೀತ ಧೋರಣೆ:** ಯಾವತ್ತೂ ಅವರದು ಕೃಷಿಕ-ಕಾರ್ಮಿಕರ ಬಡಶೋಷಿತರಪರ ನಿಲುವು. ಲೋಹಿಯಾ ಜಯಪ್ರಕಾಶ ನಾರಾಯಣ ಸಾಹಿತ್ಯದಿಂದ ಆಕರ್ಷಿತರಾಗಿದ್ದ ಪಂಚಗಾಂವಿ ಸಹಜವಾಗಿ ಸಮಾಜವಾದಿ ಚಿಂತನೆಗೆ ಒಲಿದವರು 'ಊಳುವವನೇ ಹೊಲದೊಡೆಯನಾಗಬೇಕು', 'ಸರ್ವರಿಗೂ ಸಮಬಾಳು ಸರ್ವರಿಗೂ ಸಮಪಾಲು' ಎಂಬ ನಿಲುವಿಗೆ ಬದ್ದರಾಗಿದ್ದರು. ಪಂಚಗಾವಿಯವರಿಗೆ ದೈವದಲ್ಲಿ ನಂಬಿಕೆಯಿದ್ದರೂ ದೇವರನ್ನು ನಿರಾಕರಿಸದಿದ್ದರೂ ಅವರೆಂದೂ ತಮ್ಮ ಜೀವಮಾನದಲ್ಲಿ ಕಲ್ಲು ದೇವರಿಗೆ ಕೈಮುಗಿದವರಲ್ಲ. ವಿಗ್ರಹಾರಾಧಾನೆಯಲ್ಲಿ ಹೊತ್ತುಗಳೆದವರಲ್ಲ! 'ಜನಸೇವೆಯೇ ಜನಾರ್ಧನನ ಸೇವೆ', 'ದೇಶ ಸೇವೆಯೇ ಈಶ ಸೇವೆ' ಎಂದುಕೊಂಡು ದರಿದ್ರ ನಾರಾಯಣನ ಸೇವೆ ಉಪಾಸನೆಯಲ್ಲೇ ಬದುಕು ಸವೆಸಿದರು. ಗ್ರಾಮೀಣ ಕೃಷಿ ಅಭಿವೃದ್ಧಿಗಾಗಿ ಬದುಕನ್ನು ಮುಡಿಪಾಗಿಟ್ಟಿದ್ದರು.

ಪಂಚಗಾವಿಯವರಿಗೆ ಕೃಷಿಯಲ್ಲಿ, ಕೃಷಿಕರಲ್ಲಿ ಆಸಕ್ತಿ ಮಾತ್ರವಲ್ಲ ಸ್ವತ: ಕೃಷಿಕ ಕುಟುಂಬದಿಂದ ಬಂದ ಇವರು ಅಪ್ಪಟ ರೈತ. ತಾವು ಬಿ.ಎ., ಎಲ್.ಎಲ್.ಬಿ. ಆದರೂ ತಮ್ಮ

ಹಳ್ಳಿಗೆ ಹೋದಾಗ ತಪ್ಪದೇ ಹೊಲಗಳಿಗೆ ಹೋಗುತ್ತಿದ್ದರು. ಬಿಡುವಿನ ಸಮಯದಲ್ಲಿ ರೈತನಾಗಿ ನೇಗಿಲು ಹಿಡಿದು ಕೃಷಿ ಕೆಲಸದಲ್ಲಿ ಉತ್ಸಾಹದಿಂದ ಪಾಲ್ಗೊಳ್ಳುತ್ತಿದ್ದರು. ಬಹಳ ಸಲ ತಮ್ಮ ಶಾಸಕರನ್ನು ಭೆಟ್ಟಿಯಾಗಲು ಅಭಿಮಾನಿಗಳು ಹುಡುಕಿಕೊಂಡು ಹಳ್ಳಿಗೆ ಹೋದರೆ ಅವರು ಊರಲ್ಲಿರದೇ ಹೊಲದಲ್ಲಿ ಆಳುಮಕ್ಕಳೊಂದಿಗೆ ಆಳಾಗಿ ದುಡಿಯುವದನ್ನು ಕಾಣುವದಿತ್ತು.

ಪಂಚಗಾವಿಯವರು ವಿನೋಭಾಜಿಯವರ ಗ್ರಾಮ ಸ್ವರಾಜ್ಯ ಗೋಧಾನ ಭೂಧಾನ ಚಳುವಳಿಗಳಿಂದಲೂ ಪ್ರಭಾವಿತರಾಗಿದ್ದು, ಭೂಧಾನ ಪಾದಯಾತ್ರಿಕರು ಇತ್ತ ಬಂದಾಗಲೆಲ್ಲ ಕಾರ್ಯಕರ್ತರಿಗೆ ಪಂಚಗಾವಿಯವರ ಮನೆಯೇ ಆಶ್ರಯತಾಣವಾಗಿತ್ತು. ಸ್ವಾತ್ರಂತ್ರ್ಯ ಸಂಗ್ರಾಮದಲ್ಲಿ ಚಳುವಳಿಕಾರರಿಗೆ ಆವರ ಬಾಗೋಜಿಕೊಪ್ಪದ ಮನೆಯೇ ಚಳುವಳಗಾರರಿಗೆ ಆಶ್ರಯತಾಣವಾಗಿದ್ದನ್ನು ಇಲ್ಲಿ ಸ್ಮರಿಸಬಹುದು.

ತಮ್ಮ ಜೀವನದ ಪ್ರತಿ ಕ್ಷಣಗಳನ್ನು ಸದಾಚಾರ ಪರೋಪಕಾರಗಳಲ್ಲೇ ವಿನಿಯೋಗಿಸಿದರು. ಒಂದು ಪೈಸೆಯನ್ನು ವ್ಯರ್ಥವಾಗಿ ವ್ಯಯಿಸದವರಲ್ಲ. ಅವರು ತಮ್ಮ ಒಂದು ಚುನಾವಣೆಯಲ್ಲಿ ಗರಿಷ್ಠವಾಗಿ ವೆಚ್ಚ ಮಾಡಿದ್ದು ಕೇವಲ 3500/– ರೂ ಮಾತ್ರ ಗಾಂಧೀಜಿಯ ತತ್ವವಾದರ್ಶ ಮೈಗೂಡಿಸಿಕೊಂಡ ಮಿತ್ಯವ್ಯಯದ ಜೀವನ ಅವರದು. ವಿಧಾನಸಭೆ ಶಾಸಕರಾಗಿ ಅವರು 1952 ರಲ್ಲಿ ಮೊದಲಸಾರೆ ಆರಿಸಿ ಮುಂಬಯಿ ವಿಧಾನಸಭೆಗೆ ಹೋದಾಗ ಅವರಿಗೆ ಸಿಗುತ್ತಿದ್ದ ದಿನಭತ್ಯೆ ನಿತ್ಯಬಳಿಕೆಗೆ ಸಾಕಾಗುತ್ತಿರಲಿಲ್ಲ. ಕೊನೆಗೆ ಸಮಾನ ಮನಸ್ಕ 3 ಜನ ಶಾಸಕರು ಒಂದು ಬಾಡಿಗೆ ರೂಮ ಹಿಡಿದು, ತಾವೇ ಅಡಿಗೆ ಮಾಡಿಕೊಂಡು ಶಾಸನ ಸಭೆಗೆ ಹಾಜರಾಗುತ್ತಿದ್ದರಂತೆ. ಇಂದಿನವರಿಗೆ ಈಗಿನ ರಾಜಕಾರಣಿಗಳ ಆಡಂಬರದ ಜೀವನ, ಆ ಧಿಮಾಕುಗಳು, ಚುನಾವಣೆ ನಡೆಸುವ ರೀತಿ ಬದುಕಿನ ರೀತಿ ಕಂಡವರಿಗೆ ಪಂಚಗಾವಿ, ಲಾಲಬಹದ್ದೂರ ಶಾಸ್ತ್ರಿ ಅಂತಹವರನ್ನು ರಾಜಕೀಯ ನಾಯಕರೆಂದು ಖಂಡಿತ ನಂಬಲಾರರು.

## ಸಾಮಾನ್ಯರಲ್ಲಿ ಅಸಮಾನ್ಯ

ಅಪ್ಪಣ್ಣ ಪಂಚಗಾವಿಯವರ ನಿರಾಡಂಬರ ವ್ಯಕ್ತಿತ್ವಕ್ಕೆ ಕನ್ನಡಿ ಹಿಡಿಯುವ ಒಂದು ಜೀವಂತ ಉದಾಹರಣೆ.

1960 ರಲ್ಲಿ ಕಲ್ಲೊಳ್ಳಿ ಗ್ರಾಮದಲ್ಲಿ ಶ್ರೀ ರಾಮಪ್ಪ ಕಡಾಡಿ ಎಂಬ ಕೃಷಿಕರ ಹೊಲದಲ್ಲಿ ಹತ್ತಿ ಬೆಳೆ ಅಭಿವೃದ್ಧಿ ಕುರಿತು ರೈತರ ಸಮಾವೇಶ ಏರ್ಪಡಿಸಲಾಗಿತ್ತು. ಗೋಕಾಕ ಕೃಷಿ ಇಲಾಖೆಯವರು ಈ ಸಮಾರಂಭವನ್ನು ಆಯೋಜಿಸಿದ್ದರು. ಈ ಕಾರ್ಯಕ್ರಮಕ್ಕೆ ವಿಶೇಷ ಅತಿಥಿಯಾಗಿ ಮುಂಬಯಿಯಿಂದ ನೂಲಿನ ಗಿರಣಿಗಳ ಅಧ್ಯಕ್ಷರು ಆಗಮಿಸಿದ್ದರು. ಅದೇ ಸಮಾವೇಶಕ್ಕೆ ಮುಖ್ಯ ಆತಿಥಿಗಳನ್ನಾಗಿ ರಾಜ್ಯ ವಿಧಾನಸಭೆಯ ಡೆಪ್ಯೂಟಿ ಸ್ಪೀಕರಾಗಿದ್ದ ಎ. ಆರ್. ಪಂಚಗಾಂವಿಯವರನ್ನು ಆಮಂತ್ರಿಸಿದ್ದರು. ಪ್ರತ್ಯೇಕ ವಿಶೇಷ ವಾಹನದ ವ್ಯವಸ್ಥೆ ಬಯಸದ ಶ್ರೀಯುತರು ಅದೇ ಕಾರ್ಯಕ್ರಮಕ್ಕೆ ಬರುತ್ತಿದ್ದ ಬಿ.ಡಿ.ಓ. ಜೀಪಿನಲ್ಲಿ ಕಲ್ಲೋಳಿಗೆ ಆಗಮಿಸಿದ್ದರು. ಮುಂಬಯಿಯಿಂದ ಬಂದ ನೂಲಿನ ಗಿರಣಿಗಳ ಸಂಘದ ಅಧ್ಯಕ್ಷರು ಮುಖ್ಯಅತಿಥಿಗಳಾದ ಶ್ರೀ ಪಂಚಗಾಂವಿಯವರನ್ನು ನೋಡಿರಲಿಲ್ಲ ಅವರು 'ಏನ್ರೀ ರಾಜ್ಯ ವಿಧಾನಸಭೆ ಉಪಸಭಾಪತಿಯವರನ್ನು ಕರೆತರಲು ಪ್ರತ್ಯೇಕ ವಾಹನ ವ್ಯವಸ್ಥೆ ಮಾಡಿಲ್ಲವೇ ಅವರಿನ್ನು ಬಂದಿಲ್ಲವೇ?' ಎಂದು ವಿಚಾರಿಸಿದರು ಆ ಮಾತಿಗೆ ಅಧಿಕಾರಿಗಳು 'ಶ್ರೀ ಪಂಚಗಾಂವಿಯವರು ಆಗಲೇ ಬಂದಿದ್ದಾರೆ. ಅದೋ ಅಲ್ಲಿ ಕೂತಿದ್ದಾರೆ ನೋಡಿ' ಎಂದು ತೋರಿಸಿದರಂತೆ.

ಪಂಚಗಾಂವಿವರು ಕಲ್ಲೋಳಿ ರೈತ ಸಮುದಾಯದ ಮಧ್ಯ ನೆಲದ ಮೇಲೆ ಕೂತು ಅವರ ಅನುವು-ಆಪತ್ತು, ಕುಂದು-ಕೊರತೆ, ಸುಖ-ದುಃಖಗಳ ಬಗ್ಗೆ ಚರ್ಚಿಸುತ್ತಿದ್ದಾರೆ. ಜವಳಿ ಒಕ್ಕೂಟದ ಅಧ್ಯಕ್ಷರು ಆ ಮಾತಿಗೆ ಇಂತಹ ಆತ್ಮೀಯ ಸರಳ ಸಜ್ಜನಿಕೆಯ ಜನನಾಯಕನನ್ನು ಅಖಂಡ ಭಾರತದಲ್ಲಿ ತಾನಿನ್ನೂ ನೋಡಲೇ ಇಲ್ಲವೆಂದು ಉದ್ಗಾರ ತೆಗೆದರಂತೆ.

**ಇಂತಹದೇ ಇನ್ನೊಂದು ಉದಾಹರಣೆ:** ಒಮ್ಮೆ ರಾತ್ರಿ ಬೆಳೆಗೆ ನೀರುಣಿಸಲು ಹೊರಟು ನಿಂತ ಹರಿಜನ ಆಳುಮಗನನ್ನು ಗಮನಿಸಿದರು. ಚಳಿಗಾಲವಿದ್ದರೂ ಅವಸರದಲ್ಲಿ ತಲೆಗೆ ಸುತ್ತುವ ಟಾವೇಲು ತನ್ನ ಮನೆಯಲ್ಲಿಯೇ ಬಿಟ್ಟು ಬಂದಿದ್ದಾನೆ. ತಟ್ಟನೆ ಪಂಚಗಾವಿಯವರು ತಮ್ಮ ಹೆಗಲ ಮೇಲಿನ ಹೊಸ ಟಾವೇಲನ್ನು ಒತ್ತಾಯದಿಂದ ಕೊಟ್ಟು ಕಳುಹಿಸಿದ್ದರು. ಎರಡು ದಿನಗಳ ನಂತರ ಆತ ಮನೆಗೆ ಹಿಂದಿರುಗಿದಾಗ ಅದೇ ಟಾವೇಲು ಇಸಿದುಕೊಂಡು, ಹೆಗಲಮೇಲೆ ಹಾಕಿಕೊಂಡು ಬೆಳಗಾವಿಗೆ ಹೊರಟೇಬಿಟ್ಟರು. ಮನೆಯಲ್ಲಿ ಅದನ್ನು ಒಗೆದು (ಶುಭ್ರಗೊಳಿಸಿ) ಕೊಡುತ್ತೇವೆಂದರೆ "ನನ್ನಂತೆ ಅವನು ಮನುಷ್ಯನಾನೆ?" ಎನ್ನುತ್ತ ಹೊರಟು ಹೋದ ಘಟನೆಯನ್ನು ಇಂದು ಅವರ ಸೊಸೆ ಶ್ರೀಮತಿ ಸರೋಜ ನೆನಪಿಸಿಕೊಂಡು ಹೇಳುವಾಗ ತಮ್ಮ ಮಾವನವರ ಕುರಿತು ಅಭಿಮಾನ ತುಂಬಿಬಂದಿತ್ತು. ಬೇರೆಯವರಾಗಿದ್ದರೆ ಆ ಹುಡುಗನಿಗೆ ಟಾವೇಲು ಕೊಡದೇ ಇರಬಹುದಾಗಿತ್ತು, ಇಲ್ಲವೇ ಕೊಟ್ಟಾದ ಮೇಲೆ ಅಸ್ಪೃಶ್ಯ ಉಪಯೋಗಿಸಿದ್ದನ್ನು ಮುಟ್ಟಲಾರದೆ 'ನೀನೇ ಇಟ್ಟುಕೊ'

ಎನ್ನುವ ದಾರಾಳತನದ ನಾಟಕವಾಡಬಹುದಿತ್ತು. ಅಂಥ ಕೃತ್ರಿಮವಲ್ಲದ ಆಚಾರ–ವಿಚಾರಗಳನ್ನು ಸಮನ್ವಯಗೊಳಿಸಿಕೊಂಡಿದ್ದ ಬದುಕು ಅವರದಾಗಿತ್ತು.

ರಾಜಕೀಯ ಜೀವನದಲ್ಲಿ ಸರಳತೆ–ಸೌಜನ್ಯತೆಗಳು ಸಂಪೂರ್ಣವಾಗಿ ಇಂದು ಮಾಯವಾಗಿವೆ. ಆದರೆ ಇಪ್ಪತ್ತು ವರ್ಷ ಶಾಸಕರಾಗಿದ್ದರೂ ಅದರ ಅಮಲು ಪಂಚಗಾವಿಯವರ ತಲೆಗೇರಿರಲಿಲ್ಲ. ಅವರ ಆಡಂಭರ ರಹಿತ ನಮ್ರ ನಡೆಗೆ ದ್ಯೋತಕವಾದ ಘಟನೆಯೊಂದನ್ನು ಬೆಳಗಾವಿಯಿಂದ ಹೊರಡುವ ದಿನಪತ್ರಿಕೆ 'ಹಸಿರು ಕ್ರಾಂತಿ'ಯ ಸಂಪಾದಕರಾದ ಶ್ರೀ ಕಲ್ಯಾಣರಾವ ಮುಚ್ಚಳಂಬಿಯವರು ಒಂದೆಡೆ ಉಲ್ಲೇಖಿಸಿದ್ದನ್ನು ಇಲ್ಲಿ ನೆನಪಿಸಿಕೊಳ್ಳುತ್ತೇನೆ. ರೈತ ಸಂಘದ ಕೆಲಸವೊಂದರ ಕುರಿತು ಪಂಚಗಾವಿಯರು ಸೇರಿದಂತೆ ನಾಲ್ಕು ಜನ ಬೆಂಗಳೂರಿಗೆ ಹೋದಾಗ ದುಂದು–ವೆಚ್ಚ ಬೇಡವೆಂಬ ಇವರ ಆಗ್ರಹದಮೇರೆಗೆ ಸಾಮಾನ್ಯ ವಸತಿಗೃಹವೊಂದರಲ್ಲಿ ಒಂದೇ ಕೋಣೆ ಬಾಡಿಗೆಗೆ ಹಿಡಿದರಂತೆ. ಎಲ್ಲರಿಗೂ ಆಗುವಷ್ಟು ಮಂಚಗಳಿರಲಿಲ್ಲ ಆಗ ತಾವೇ ಕೆಳಗೆ ಮಲಗುವುದಾಗಿ ಪಂಚಗಾವಿಯವರು ಹಟಹಿಡಿದರಂತೆ. ಅವರಲ್ಲಿ ಕಾಡಿ ಬೇಡಿ ವಿನಂತಿಸಿಕೊಂಡು ಮಂಚದಮೇಲೆ ಮಲಗಿಸುವಲ್ಲಿ ಯಶಸ್ವಿಯಾದ ಆ ಪ್ರಸಂಗವನ್ನು ಆರ್ದ್ರ ಮನದೊಂದಿಗೆ ನೆನಪಿಸಿಕೊಳ್ಳುತ್ತಾರೆ ಮುಚಳಂಬಿಯವರು.

ಐವತ್ತರ ದಶಕದಲ್ಲಿ ಭೂದಾನ ಚಳುವಳಿಯಲ್ಲಿ ಶ್ರೀಯುತರು ಸಕ್ರಿಯ ಕಾರ್ಯಕರ್ತರಾಗಿ ದುಡಿದಿದ್ದಾರೆ. ಮಹಾತ್ಮಾಜೀಯವರ ಜೀವನ ಶ್ರದ್ಧೆ ಇವರಲ್ಲಿ ಮನೆ ಮಾಡಿತ್ತು. ಹೀಗಾಗಿ ಸರ್ವೋದಯ ಪ್ರಚಾರ, ಪಾನ ನಿರೋಧ, ಖಾದಿ ಪ್ರಚಾರ, ವಯಸ್ಕರ ಶಿಕ್ಷಣ ಮುಂತಾದ ಹತ್ತಾರು ವಿದಾಯಕ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುತ್ತಿದ್ದರು. "ಬದುಕಿನಲ್ಲಿ ಆಡಂಬರವನ್ನೆಂದೂ ಬಯಸದ ಇವರು ಸರ್ವೋದಯ, ಭೂದಾನ ಕೆಲಸ ಅಂತಾ ಮುಧೋಳಕ್ಕೆ ಬಂದರೆ ಅವರ ವಾಸ್ತವ್ಯ 'ವಾತ್ಸಲ್ಯಧಾಮ ಆಶ್ರಮ' ಇಲ್ಲವೇ ಸಾಮಾನ್ಯವಾದ ಸರ್ವೋದಯ ಮುದ್ರಣಾಲಯವಾಗಿರುತ್ತಿತ್ತು ಎನ್ನುತ್ತಾರೆ ಅವರ ಒಡನಾಡಿಗಳಾದ ಮುಧೋಳದ ಶಂಕರ ಉತ್ತೂರರವರು.

ಇನ್ನೋರ್ವ ಅವರ ನಿಕಟವರ್ತಿ, ಗಾಂಧೀವಾದಿ ಗ್ಯಾನಮಲ್‌ಜೀ ರಾಠೋಡರು ಪಂಚಗಾವಿಯರೊಂದಿಗೆ ಕಳೆದ ಹಿಂದಿನ ದಿನಗಳನ್ನು ಮೆಲಕು ಹಾಕುತ್ತ "....ದೇಶ ಸೇವೆ, ಸಮಾಜ ಸೇವೆ, ದೀನ–ದಲಿತರ ಸೇವೆ ಎನ್ನುತ್ತ ಸದಾ ಊರೂರು ಸುತ್ತುವ ಪಂಚಗಾವಿಯವರು ಎಂದೂ ದುಡ್ಡು ಮಾಡುವತ್ತ ಗಮನ ಕೊಡಲಿಲ್ಲ. ಎಷ್ಟೊ ಸಾರೆ ನಮ್ಮಲ್ಲಿಯೇ ಕೈಗಡವಾಗಿ ಹಣ ಪಡೆದು ನಿಯಮಿತ ವೇಳೆಗೆ ಹಿಂದಿರುಗಿಸುತ್ತಿದ್ದರು..... ಒಮ್ಮೆಯಂತೂ ಮನೆತನದ ಅಡಚನೆಗೆ ಪುನಮ್‌ಚಂದ್ ಶಹಾ ಅವರಿಗೆ ಮನೆಯ ಟ್ರೇಜರಿಯನ್ನೇ ಮಾರಿಕೊಂಡರು" ಎನ್ನುತ್ತಾರೆ.

ಗಾಂಧೀಜಿ ಸಿದ್ಧಾಂತಗಳಲ್ಲಿ ಅಪಾರ ನಂಬಿಕೆ ಇರುವ ವಿಶ್ರಾಂತ ಶಿಕ್ಷಕರಾದ ಮಹಾದೇವಪ್ಪ ಅಂಗಡಿಯವರು ಪಂಚಗಾವಿಯವರನ್ನು ಕುರಿತು "...ಆರಾಧನಾ ಸಂಸ್ಕೃತಿ ಅಸಹ್ಯವೆನಿಸುವಷ್ಟು ಬೆಳೆದು ನಿಂತಿರುವ ಇಂದಿನ ಬಾಚಿಕೊಳ್ಳುವ ಪ್ರವೃತ್ತಿಗಳ ನಡುವೆ ಜಮೀನು, ಮನೆ, ಪೆಟ್ರೋಲ್ ಬಂಕು ಮುಂತಾದವುಗಳಿಗಾಗಿ ಬಾಯ್ಬಿಡುವ ವ್ಯಕ್ತಿಗಳು ತುಂಬಿರುವ ನಮ್ಮ ಸಮಾಜದಲ್ಲಿ ಪ್ರಾಮಾಣಿಕ ಜೀವನ ನಡೆಸಿದ ಈ ಮನುಷ್ಯ ಅತೀ ಅಪರೂಪದ ರಾಜಕಾರಣಿಯಾಗಿ ಹೋದರು" ಎನ್ನುತ್ತಾರೆ.

## ಮನೆಗೆ ಮಾರಿ ಊರಿಗೆ ಉಪಕಾರಿ

ಇದು ಕನ್ನಡಲ್ಲೊಂದು ಪ್ರಚಲಿತ ಅನುಭವವಾಣಿ. ಪಂಚಗಾಂವಿಯವರೂ ಅದೇ ರೀತಿ ಜೀವದುದ್ದಕ್ಕೂ, ಸಮಾಜಸೇವೆ ರಾಜಕಾರಣ ಮಾಡುತ್ತ ಬಂದರು. ಆದರೆ ತನ್ನ ಮನೆ ಮತ್ತು ಮನೆಯ ಆರ್ಥಿಕ ಪರಿಸ್ಥಿತಿಯನ್ನು ಅಲಕ್ಷಿಸುತ್ತಲೇ ಬಂದರು. ಗಾಧೀಜಿಯುವಂತೆ ಇವರಿಗೂ ವೈಯಕ್ತಿಕವಾದ ಸ್ವಂತದ ಬದುಕು ಇರಲಿಲ್ಲವೇನೊ? ಈ ಮೇಲಿನ ಗಾದೆ ಮಾತನ್ನು ಪಂಚಗಾವಿಯವರನ್ನು ನೋಡಿಯೇ ಮಾಡಿರಬೇಕು.

ಅತೀಯಾದ ಸಾತ್ವಿಕತೆ, ನಿಸ್ವಾರ್ಥ ಸೇವೆಗಳಿಂದ ಪಂಚಗಾಂವಿಯವರು ಶಮಗೂ ತಮ್ಮ ಕುಟುಂಬದ ಶ್ರೇಯೋಭಿವೃದ್ಧಿಗೂ ದ್ರೋಹ ಮಾಡಿಕೊಂಡರೇನೋ ಎಂದು ಅವರ ಸಮಕಾಲೀನ ಸ್ನೇಹಿತರು ಸಂಗಾತಿಗಳು ಹೇಳುವದಿದೆ. ಪಂಚಗಾಂವಿಯವರು ರಾಜಕೀಯ ಪ್ರವೇಶಿಸಿದ ಮೇಲೆಯೂ ಸ್ವಂತದ ಸುಖ ಸಂತೋಷ ಬಲಿಗೊಟ್ಟರು ಮಾತ್ರವಲ್ಲ, ಮನೆತನದ ಏಳ್ಗೆಯನ್ನು ಬಹುತೇಕ ಕಡೆಗಣಿಸಿದರು ಎಂಬ ದೂರಿದೆ.

ಪಂಚಗಾವಿ ರಾಜಕೀಯಕ್ಕೆ ಪ್ರವೇಶಿಸುವ ಮುನ್ನ ಗೋಕಾಕದಲ್ಲಿ ಅವರೊಬ್ಬ ಸ್ಥಾಪಿತ ಪ್ರತಿಭಾವಂತ ನ್ಯಾಯವಾದಿ ಪ್ರಮಾಣಿಕ ಯಶಸ್ವಿ ವಕೀಲರೆಂದು ಪ್ರತೀತಿ ಇತ್ತು. ಜೊತೆಗೆ ಆ ಕಾಲದಲ್ಲಿ ಉತ್ತಮವೆನ್ನಬಹುದಾದ ಗಳಿಕೆಯಿತ್ತು. ಕಕ್ಷಿದಾರರ ವಿಶ್ವಾಸಕ್ಕೆ ಪಾತ್ರರಾಗಿದ್ದ ಜನಪ್ರಿಯ ವಕೀಲರಾಗಿದ್ದರು. ಊರು ಹೊಲಮನೆ ಕಡೆಯೂ ಅನುಕೂಲಸ್ಥ ಕೃಷಿಕ ಕುಟುಂಬ ಇವರದಾಗಿತ್ತು.

ಆದರೆ ರಾಜಕಾರಣ ದೀಕ್ಷೆ ಕೊಟ್ಟ ಮೇಲೆ ತಮ್ಮ ವಕೀಲ ವೃತ್ತಿಯು ನಿಂತಿತು, ಕೃಷಿಯು ಅಲಕ್ಷಿಸಲ್ಪಟ್ಟಿತ್ತು ಬರಹೋಗುವ ಚುನಾವಣೆ ಖರ್ಚು ವೆಚ್ಚ ಅಧಿಕಗೊಂಡವು ಜೊತೆಗೆ ಗಾಂಧೀವಾದಿ ಪಂಚಗಾಂವಿ ಬ್ರಷ್ಟ ಸಂಪಾದನೆಗೆಂದೂ ನಾಲಗೆ ಕೈ ಚಾಚಿದವವರಲ್ಲ ಹೀಗೆ ರಾಜಕಾರಣ ಶಾಸಕಗಿರಿ ಸಮಾಜ ಸೇವೆ ಪಂಚಗಾಂವಿ ಮತ್ತು ಕುಟುಂಬದ ಪಾಲಿಗೆ ದುಬಾರಿಯಾಯಿತೆನ್ನಬೇಕು.

ಪಂಚಗಾವಿ ರಾಜಕೀಯವನ್ನೆಂದೂ ದಂಧೆ ಮಾಡಿಕೊಳ್ಳಲಿಲ್ಲವೆಂಬುದು ಗಮನಾರ್ಹ. ಆದರೆ ಧೂರ್ತ ರಾಜಕೀಯ ಕೂಡ ಅವರ ಅರ್ಹತೆ ಸಾಮರ್ಥ್ಯ ಪ್ರತಿಭೆಗೆ ಸೂಕ್ತ ಸ್ಥಾನ – ಮಾನ ನೀಡಿ ಸನ್ಮಾನಿಸಲಿಲ್ಲವೆಂಬುದು ಇತಿಹಾಸಿಕ ಸತ್ಯ. ಇದು ಅವರ ಅಭಿಮಾನಿಗಳ ಕೊರಗು ಕೂಡ.

ಆ ಕಾಲದಲ್ಲಿ 4 ಸಲ ನಿರಂತರವಾಗಿ ಬಹುಮತದಿಂದ ಆಯ್ಕೆಗೊಂಡು ಬಂದ ಹಿರಿಯ ಅನುಭವಿ ಎಲ್.ಎಲ್.ಬಿ. ಓದಿದ ಶುದ್ಧ ಹಸ್ತದ ಸಂಸದೀಯ ಪಟುವಾದಾಗ್ಯೂ ಕೂಡ ಇವರದೇ ಸರ್ಕಾರ ಅಧಿಕಾರದಲ್ಲಿದ್ದೂ ಪಂಚಗಾವಿಯವರಿಗೆ ಮಂತ್ರಿ ಪದವಿ ನೀಡದೇ ಅವರ ಅಗಾಧ ನಿಸ್ವಾರ್ಥ ಸೇವೆ ಸಾಮರ್ಥ್ಯ ಬಳಸಿಕೊಳ್ಳದೇ ಸರಕಾರ ಒಂದು ರೀತಿ ತನಗೆ ತಾನೇ ಅನ್ಯಾಯ ಮಾಡಿಕೊಂಡಿತೇನೋ?

ಆಗ ಕಾಂಗ್ರೇಸ್ ಸರ್ಕಾರದಲ್ಲೇ ಎರಡು ವಿಭಿನ್ನ ರಾಜಕೀಯ ಬಣಗಳಿದ್ದವು. ಅತ್ತ ಅತ್ಯಂತ ಪ್ರಭಾವಿ ಹಿರಿಯ ರಾಜಕಾರಣಿ ನಿಜಲಿಂಗಪ್ಪನವರದ್ದು ಒಂದು ಬಣವಾದರೆ ಇತ್ತ ರಾಜಕೀಯ ಮುತ್ಸದ್ದಿ ಬಿ. ಡಿ. ಜತ್ತಿಯವರೊಂದು ಬಣ. ಪಂಚಗಾವಿಯವರು ಜತ್ತಿ ಬಣದಲ್ಲಿ ತಮ್ಮನ್ನು ಗುರ್ತಿಸಿಕೊಂಡಿದ್ದು ಮಾತ್ರವಲ್ಲ ಮುಂದೆ ಅಧಿಕಾರದಾಸೆಗೆ ತನ್ನ ನಾಯಕನ ಕುರಿತು ನಿಷ್ಠೆಯನ್ನು, ಗುಂಪನ್ನು ಎಂದೂ ಬದಲಾಯಿಸಲಿಲ್ಲ. ಹೀಗಾಗಿ ಅಂದು ಅಧಿಕಾರದ ಚುಕ್ಕಾಣಿ ಹಿಡಿದಿದ್ದ ನಿಜಲಿಂಗಪ್ಪನವರ ಸರ್ಕಾರದಲ್ಲಿ ಪಂಚಗಾವಿಯವರು ಮಂತ್ರಿಗಿರಿಯಿಂದ ವಂಚಿರಾಗಬೇಕಾಯಿತು. ಇದು ಗೋಕಾಕದ ದುರ್ದೈವ ಮಾತ್ರವಲ್ಲ ಉ.ಕರ್ನಾಟಕದ ದುರ್ದೈವ ಕೂಡ ಹೌದು.

ರಾಜಕೀಯದಲ್ಲಿ ಯೋಗ್ಯತೆ ಪ್ರಾಮಾಣಿಕತೆಗಿಂತ ಸ್ವಾರ್ಥ ಕುಟಿಲತೆ, ಗುಂಪುಗಾರಿಕೆ ಸ್ವಜನಪಕ್ಷಪಾತ ಹಣ ಹೆಚ್ಚು ವಿಜೃಂಬಿಸುವದಿದೆ. ಪಂಚಗಾವಿ ಇಷ್ಟರ ಮಟ್ಟಿಗೆ ನಿಷ್ಪಹರಾಗಿ ನಿಸ್ವಾರ್ಥರಾಗಿ ಇದ್ದುದ್ದನ್ನು ಕಂಡಾಂಗ ಒಮ್ಮೊಮ್ಮೆ ಇಂದಿನ ರಾಜಕೀಯಕ್ಕೇ ಅವರು ತಕ್ಕವರಲ್ಲವೇನೋ ಅನ್ನಿಸುವಷ್ಟು ಸ್ವಾತಿಕ ಸಾಧು ಸ್ವಭಾವ.

ಒಮ್ಮೆಯೂ ತಮ್ಮ ರಾಜಕೀಯ ವೃತ್ತಿ ಜೀವನದಲ್ಲಿ ಸರಕಾರಿ ನೌಕರರ ವರ್ಗಾವರ್ಗಿ, ಸರ್ಕಾರದ ಸೇವೆಯಲ್ಲಿ ಸಲ್ಲದ ಹಸ್ತಕ್ಷೇಪ! ತಮಗಾಗಬೇಕಾದ ಹೌದಪ್ಪ ಅಧಿಕಾರಿಗಳನ್ನು ತಮ್ಮ ತಾಲೂಕಿಗೆ ಹಾಕಿಸಿಕೊಳ್ಳುವ ಗೋಜಿಗೆ ಹೋಗಲಿಲ್ಲ. ಅಧಿಕಾರ ಕಿತ್ತುಕೊಳ್ಳಲು ತೊಳ್ಬಲ, ಜನಬಲ ಧನ–ಬಲ ಬಳಸುವ ರಾಜಕೀಯ ಮಾಡಿದವರಲ್ಲ.

ಈ ಸಂದರ್ಭದಲ್ಲಿ ಪಂಚಗಾವಿ ವ್ಯಕ್ತಿತ್ವ ಸ್ವಭಾವ ಬಿಂಬಿಸುವ ಒಂದು ಘಟನೆ ನೆನಪಾಗುತ್ತದೆ. ಶ್ರೀ ಬಿ. ಎಂ. ಮಳಲಿ ಎನ್ನುವವರು ಪಂಚಗಾವಿ ಮನೆಯಲ್ಲಿ ಇದ್ದು ವಿದ್ಯಾಭ್ಯಾಸ ಮಾಡಿಕೊಂಡು ಸ್ವಂತ ಸಾಮರ್ಥ್ಯದಿಂದ ಸರ್ಕಾರಿ ನೌಕರಿ ಸಂಪಾದಿಸಿ ಕೊಂಡವರು. ಹೈಸ್ಕೂಲ್ ಶಿಕ್ಷಣಕ್ಕಾಗಿ ತಮ್ಮ ಆಶ್ರಯಕ್ಕೆ ಬಂದಿದ್ದ ಬಡ ವಿದ್ಯಾರ್ಥಿಯನ್ನೆಂದೂ ದುರುಪಯೋಗ ಪಡಿಸಿಕೊಂಡವರಲ್ಲ.

ಮಳಲಿಯವರಿಗೆ ಬೆಳಗಾವಿಯಿಂದ ಧಾರವಾಡಕ್ಕೆ ವರ್ಗವಾದಾಗ ಆತ ಓಡಿ ಬಂದು ಪಂಚಗಾವಿಯವರಿಗೆ ದುಂಬಾಲುಬಿದ್ದು ತಮ್ಮ ಪ್ರಭಾವ ಬೀರಿ ತನ್ನ ವರ್ಗ ರದ್ದು ಮಾಡಿಸಬೇಕೆಂದು ಅಲವತ್ತುಕೊಂಡರು. ಮಳಲಿಯವರ ಮನವಿಗೆ ಪಂಚಗಾವಿ ಮಣಿಯದಾದಾಗ ಕೊನೆ ಉಪಾಯವಾಗಿ ಅವರು ಪಂಚಗಾವಿ ಶ್ರೀಮತಿ ಮೂಲಕ ಒತ್ತಡ ತಂದು ಆಗ್ರಹಿಸಿದರು. ಆಗ ಶಾಸಕರು ಶಾಂತರಾಗಿಯೇ ಹೇಳಿದರಂತೆ 'ಭೀಮಶಿ ಸರ್ಕಾರಿ ಆಜ್ಞೆ ಪಾಲಿಸಬೇಕು ಉಲ್ಲಂಘಿಸುವವರು ತಪ್ಪಿತಸ್ಥರಾಗುತ್ತಾರೆ. ಈಗಾಗಲೇ ನೀನು 8 ವರ್ಷ ಬೆಳಗಾವಿಯಲ್ಲೇ ಸೇವೆ ಸಲ್ಲಿಸಿರುತ್ತೀ ಇನ್ನೂ ಇಲ್ಲೇ ಇರಬೇಕೆಂದು ಹಠ ಮಾಡುವದು ಅನ್ಯಾಯವಾಗುತ್ತದೆ. ಕಾನೂನಿಗೆ ವಿರುದ್ಧವಾಗಿ ನಾನು ಯಾರಿಗೂ ಹೇಳುವದಿಲ್ಲ'ವೆಂದು ಸ್ಪಷ್ಟವಾಗಿ ಬುದ್ಧಿವಾದ ಹೇಳಿಕಳಿಸಿದರು.

ಬಾಲ್ಯದಿಂದ ತಮ್ಮ ಮನೆಯಲ್ಲೇ ಇದ್ದು ಓದಿದ ಆತ್ಮೀಯ ಅಭಿಮಾನಿಗಳ ವಿಷಯದಲ್ಲಿಯೂ ಅಷ್ಟೇ ನಿಷ್ಠುರರು. ಸ್ವಜನ ಪಕ್ಷಪಾತ ವಕೀಲಿ ಶಿಪಾರಸುಗಳಿಗೆಂದೂ ಕೈಹಾಕಲಿಲ್ಲ. ಸರ್ಕಾರದ ನ್ಯಾಯೋಚಿತ ಕೆಲಸಗಳಲ್ಲಿ ಎಂದೂ ಹಸ್ತಕ್ಷೇಪ ಮಾಡಿದವರಲ್ಲ.

ಪಕ್ಷಪಾತ ಹೌದು ಎನ್ನುವದಾದಲ್ಲಿ ಪಂಚಗಾವಿ ಸತ್ಯದ ಧರ್ಮದ ನ್ಯಾಯದ ಪಕ್ಷಪಾತಿ! ಅಸಹಾಯಕ ಅಸಂಘಟಿತ – ಹಿಂದುಳಿದ ನಿರ್ಗತಿಕರ ಬಡವರ, ದೀನ ದಲಿತರ ಪಕ್ಷಪಾತಿ!

ತಮ್ಮ ಸೇವೆ ಸಾಧನೆಗಳನ್ನೆಂದೂ ಅವರು ಡಂಗುರ ಸಾರುತ್ತ ಮಾಧ್ಯಮಗಳಲ್ಲಿ ಪ್ರಚಾರ ಮಾಡಿಕೊಳ್ಳುತ್ತ ಬಂದವರಲ್ಲ.

ಎಷ್ಟೋ ಹಳ್ಳಿಯ ನಿರ್ಗತಿಕ ವಿದ್ಯಾರ್ಥಿಗಳನ್ನು ಮನೆಯಲ್ಲಿಟ್ಟುಕೊಂಡು ಶಾಲೆ ಕಲಿಯಲು ಅನುವು ಮಾಡಿಕೊಟ್ಟರು. ಎಷ್ಟೋ ಸಲ ಬೆಂಗಳೂರಿಗೆ ಬಡರೋಗಿಗಳನ್ನು ಸಂಗಡ ಕರೆದೊಯ್ದು ದೊಡ್ಡಸ್ಪತ್ರೆಯಲ್ಲಿ ಚಿಕಿತ್ಸೆ ಕೊಡಿಸಿ ಹಣದ ಸಹಾಯವನ್ನು ಮಾಡುತ್ತಿದ್ದರು. ತಮ್ಮ ಚಿಕಿತ್ಸೆ ಮಾತ್ರ ಗಾಂಧೀಜಿಯಂತೆ Nature Care ಪ್ರಕೃತಿ ಚಿಕಿತ್ಸೆಯನ್ನೇ ಅವಲಂಬಿಸುತ್ತಿದ್ದರು. ಅಸಹಾಯ ಶೋಷಿತರಿಗೆ ಅನ್ಯಾಯವಾದಾಗ ಕೈಯಿಂದ ಖರ್ಚು ಮಾಡಿ ನ್ಯಾಯಾಲಯಗಳಲ್ಲಿ ನ್ಯಾಯ ದೊರಕಿಸಿಕೊಟ್ಟಿದ್ದೂ ಇದೆ.

ರಾಮನಗೌಡಾ ಬಿ. ಪಾಟೀಲ ಎಂಬುವವರು ಇವರ ಮನೆಯಲ್ಲಿದ್ದೇ ಹೈಸ್ಕೂಲು ಶಿಕ್ಷಣ ಪೂರೈಸಿದಾಗ ಮುಂದೆ ಜೆ.ಡಿ.ಸಿ. ಕಲಿಯಲು ಧಾರವಾಡಕ್ಕೆ ಹೋಗಬೇಕೆಂದರು. ಅವರ ಮನೆಯಲ್ಲಿ ಬಡತನ ಅಸಹಾಯ ಪರಿಸ್ಥಿತಿ ಇದೆ. ಪಂಚಗಾವಿ ತಾವು ಕೈಯಿಂದ 500/– ರೂ. ಖರ್ಚು ಕೊಟ್ಟು ಕಳಿಸಿದರು.

ಅಷ್ಟೇ ಅಲ್ಲ ಸರಕಾರ ಕೊಡುವ 80/– ರೂ ಸ್ಟೈಪೆಂಡರಿ ಖರ್ಚಿಗೆ ಸಾಲುತ್ತಿರಲಿಲ್ಲ. ಮೇಲಿನ ಖರ್ಚಿಗೆ ಪ್ರತಿ ತಿಂಗಳು 200/– ರೂ ಕಳಿಸಿ ಕೊಟ್ಟು ತಮ್ಮ ಬಾಳ ಮುನ್ನಡೆಗೆ ದಾರಿದೀಪವಾದರು–ಎಂದು ರಾಮನಗೌಡ ಪಾಟೀಲ ಕೃತಜ್ಞತೆಯಿಂದ ಸಂಸ್ಮರಿಸಿಕೊಳ್ಳುವಾಗ ಅವರ ಕಣ್ಣು ತೇವಗೊಳ್ಳುತ್ತವೆ.

ಅವರ ನೆರಳಲ್ಲಿಯೇ ಅವರ ಮನೆಮಕ್ಕಳಂತೆ ಪಂಚಗಾವಿ ದಂಪತಿಗಳ ಕೈತುತ್ತು ತಿಂದು ಬೆಳೆದು ಇಂದು ವಿವಿಧ ಕ್ಷೇತ್ರಗಳಲ್ಲಿ, ಒಳ್ಳೆ ಸ್ಥಾನಗಳಲ್ಲಿ ಗುರುತಿಸಿಕೊಂಡಿರುವ ಜನ ಅಪಾರ. ಅವರಲ್ಲಿ ಡಾ॥ ಗಿರೀಶ ಉದಪುಡಿ, ಬಿ. ಎಮ್. ಮಳಲಿ, ವಿ. ಪಿ. ಬಡಗನ್ನವರ, ರಾಮನಗೌಡ ಬಿ. ಪಾಟೀಲ, ಶ್ರೀ ಭೀಮಶಿ ಮಳಲಿ ಮುಂತಾಗಿ ಹಲವರು ಆ ಋಣವನ್ನು ಇಂದಿಗೂ ನೆನಯುತ್ತಾರೆ.

# ದೇಶ ಪ್ರೇಮಿಯ ವಿದೇಶ ಪ್ರವಾಸ

## (ಪಂಚಗಾವಿ ದಿನಚರಿ ಆಧರಿಸಿ)

ಪಂಚಗಾವಿಯರ ಎರಡನೇ ಅಳಿಯಂದಿರು ವೆಂಕಣ್ಣ ಗಣಿ ಅವರು 1956ರಲ್ಲಿ ಅಮೇರಿಕೆಗೆ ವಿದ್ಯಾಭ್ಯಾಸಕ್ಕಾಗಿ ಹೋದವರು ಅಲ್ಲಿಯೇ ಉದ್ಯೋಗಗಳಿಸಿ ನೆಲೆ ನಿಂತರು. ಅವರು ತಮ್ಮ ಮಾವನವರನ್ನು ಆಗಾಗ ಅಮೇರಿಕೆಗೆ ತಾವಿರುವಲ್ಲಿ ಬಂದು ಹೋಗಬೇಕೆಂದು ಆಹ್ವಾನಿಸುತ್ತ ಆಗ್ರಹಿಸುತ್ತಲೇ ಬಂದಿದ್ದರು. ಆದರೆ ಪಂಚಗಾವಿಯವರು ನಯವಾಗಿ ನಿರಾಕರಿಸುತ್ತಾ ಮುಂದೆ ಹಾಕುತ್ತಾ ಬಂದಿದ್ದರು. ಆದರೆ 1982ರಲ್ಲಿ ಪಂಚಗಾವಿ ಕುಟುಂಬದ ಪರಮಾಪ್ತ ಬಂಧು ಪಂಚಗಾವಿಯವರ ಅಭಿಮಾನಿಗಳೂ ಆದ ಜಮಖಂಡಿಯ ಮಾನ್ಯ ಶ್ರೀ ಡಾ|| ಜಿ. ವ್ಹಿ. ಉದಪುಡಿ, ಪ್ರಸಿದ್ಧ ವೈದ್ಯರೂ, ರೋಟರಿ ಅಧ್ಯಕ್ಷರೂ ಆದ ಅವರು ತಮ್ಮ ಅಂತರಾಷ್ಟ್ರೀಯ ರೋಟರಿ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳಲು ಅಮೇರಿಕೆಗೆ ಹೊರಟು ನಿಂತಾಗ ಪಂಚಗಾವಿಯವರನ್ನು ಬಲವಂತವಾಗಿ ತಮ್ಮೊಂದಿಗೆ ಅಮೇರಿಕಾ ಪ್ರವಾಸಕ್ಕೆ ಕರೆದೊಯ್ದರು. 25-04-1982ರಿಂದ 25-8-1982ರವರೆಗೆ ಸುಮಾರು 4 ತಿಂಗಳು ಅಮೇರಿಕಾ ಪ್ರವಾಸದಲ್ಲಿದ್ದು ಒಂದು ಚಿರಂತನ ಅಭ್ಯಾಸ, ಅನ್ವೇಷಣೆ-ಅಧ್ಯಯನ ಮಾಡಿಕೊಂಡರು. ಈ ಪ್ರವಾಸ ಸಂದರ್ಭದಲ್ಲಿ ಪಂಚಗಾವಿಯವರು ಪ್ರತಿದಿನ ತಾವು ಕಂಡು ಕೇಳಿದ ಅನುಭವದ ಹೊಸ ವಿಷಯಗಳನ್ನೆಲ್ಲ ತಮ್ಮ ದಿನಚರಿಯಲ್ಲಿ ದಾಖಲಿಸುತ್ತ ಬಂದಿದ್ದರು. ಪಂಚಗಾವಿ ಅಧ್ಯಯನಶೀಲರಾಗಿದ್ದಷ್ಟೇ ಅಲ್ಲದೆ ಓರ್ವ ಉತ್ತಮ ಲೇಖಕರೂ ಆಗಿದ್ದರು.

ಅಷ್ಟೇ ಅಲ್ಲ ಅವರೊಬ್ಬ ಪ್ರಖಾಂಡ ಪಂಡಿತ - ಪ್ರಚಂಡ ವಾಗ್ಮಿಯೂ ಆಗಿದ್ದರೆಂಬುದು ಅವರ ಸಂಸದೀಯ ಭಾಷಣಗಳಿಂದ ವೇದ್ಯವಾಗುತ್ತದೆ. ಪಂಚಗಾವಿಯವರು ತಮ್ಮ ಪ್ರವಾಸದ ಅನುಭವಗಳನ್ನು ಅತ್ಯಂತ ಸಂಕ್ಷಿಪ್ತವಾಗಿ ಆದರೆ ಅಷ್ಟೇ ನಿಖರವಾಗಿ ಸುಮಾರು 70 ಪುಟಗಳಲ್ಲಿ ದಾಖಲಿಸಿದ್ದಾರೆ. ಒಂದೆರಡು ಪುಟ ಬಿಟ್ಟರೆ ಬಹುತೇಕ ಎಲ್ಲವೂ ಇಂಗ್ಲೀಷದಲ್ಲಿವೆ. ಕನ್ನಡ-ಇಂಗ್ಲೀಷ ಎರಡೂ ಭಾಷೆಗಳಲ್ಲಿಯೂ ಅವರಿಗೆ ಉತ್ತಮ ಪ್ರಭುತ್ವವಿತ್ತು. ಅವರ ದಿನಚರಿ ಬರಹಗಳಲ್ಲಿ ಓರ್ವ ಜ್ಞಾನಾಕಾಂಕ್ಷಿ ವಿದ್ಯಾರ್ಥಿಯ ವಿದೇಯತೆ, ಮಗುವಿನ ಮುಗ್ಧತೆ-ಕುತೂಹಲ, ನಿಸರ್ಗ ಸೌಂದರ್ಯೋಪಾಸನೆಯಲ್ಲಿ ಅವರಿಗಿರುವ ಉನ್ನತ ಸಂಸ್ಕಾರ ಅಭಿರುಚಿಗಳೆಲ್ಲ ವ್ಯಕ್ತವಾಗುತ್ತವೆ.

## ಅವರ ಪ್ರವಾಸದ ಸಿಂಹಾವಲೋಕನ:

25-4-1982ರಂದು ಮುಂಬೈ ಬಿಟ್ಟು ರಾತ್ರಿ 9-30ಕ್ಕೆ ನ್ಯೂಯಾರ್ಕ ತಲುಪಿದರು. 26-4-1982ರ Poupsheepsie ಎಂಬಲ್ಲಿಗೆ ಹೋಗಿ 27-4-1982 Wappingers ಎಂಬ' ದಬೆದಬೆ ಹಳ್ಳಿಯನ್ನು ಸಂದರ್ಶಿಸುತ್ತಾರೆ. 2-5-1982 ಅಮೇರಿಕಾದ ಮಾಜಿ ಅಧ್ಯಕ್ಷ ರೂಸ್‌ವೆಲ್ಟರ ನಿವಾಸಕ್ಕೆ ಭೆಟ್ಟಿಕೊಟ್ಟರು. ತಮ್ಮ ಅಳಿಯ-ಮಗಳ ಕುಟುಂಬದೊಂದಿಗೆ ಇದ್ದದ್ದು, ಇಡೀ ನ್ಯೂಯಾರ್ಕನ ಎಲ್ಲಾ ಪ್ರೇಕ್ಷಣೆಯ ಸ್ಥಳ, ಐತಿಹಾಸಿಕ ಸ್ಮಾರಕಗಳಿಗೆ ಭೆಟಿಕೊಟ್ಟದ್ದು, ಬ್ರೆಗಾನ್ ಕ್ರೇಟರಲೇಕ, ದಕ್ಷಿಣ ಕೊರೋಲಿನಾ, ದಕ್ಷಿಣ ಡೆಕೋಟಾ ಹೀಗೆ ಅಮೇರಿಕಾದ ಅನೇಕ ಕಡೆ ನಿರಂತರವಾಗಿ ಸುತ್ತಾಡಿದ್ದಾರೆ. ಅಮೇರಿಕಾ ಕನ್ನಡ ಭಾರತೀಯರನ್ನು ಸಂದರ್ಶಿಸಿದ್ದಾರೆ. ಅಲ್ಲಿ ಕಲೆ, ಶಿಲ್ಪ, ನೃತ್ಯ, ಸಂಸ್ಕೃತಿ ಎಲ್ಲವನ್ನು ಕಂಡು ಆನಂದಿಸಿದ್ದಾರೆ. ಅಲ್ಲಿಯ ಉದ್ಯೋಗ, ಮೂರ್ತಿ ಶಿಲ್ಪ, ಕೆತ್ತನೆಯ ಕೆಲಸ, ಗೃಹ ಕೈಗಾರಿಕೆ, ಮೀನುಗಾರಿಕೆ, ಕುರಿ ಸಾಗಾಣಿಕೆಗಳನ್ನು ಅಭ್ಯಸಿಸಿದ್ದಾರೆ.

ಅಲ್ಲಿಯ ಪ್ರಾಕೃತಿಕ ಚಲುವು, ನಿಸರ್ಗ, ಸೌಂದರ್ಯವನ್ನೆಲ್ಲಾ ತಮ್ಮ ಕಣ್ಣು ತುಂಬಿಕೊಂಡಿದ್ದಾರೆ. ಡಾ॥ ಗಿರೀಶ ಉದಪುಡಿಯವರೊಂದಿಗೆ ಪಂಚಗಾವಿ ಮಗಳು ಅಳಿಯ ವೆಂಕಣ್ಣ ಗಣಿ ಮತ್ತು ಮಕ್ಕಳೊಂದಿಗೆ ಅವಿಸ್ಮರಣೀಯ ಸೌಹಾರ್ದ ಭೆಟ್ಟಿಯನ್ನು ಸ್ಮರಣೀಯವಾಗಿಸಿದ್ದಾರೆ. ಇಡೀ ಪ್ರವಾಸ ವ್ಯರ್ಥ-ವ್ಯಯವಾಗದಂತೆ ಅರ್ಥಪೂರ್ಣಮಾಡಿಕೊಂಡಿದ್ದಾರೆ. ಅಲ್ಲಿನ ಕೈಗಾರಿಕೆ, ಆಸ್ಪತ್ರೆ, ಸೇವಾ ಮಂದಿರ, ಆ ಜನಗಳ ಜೀವನ ವಿಧಾನ, ಪ್ರಯೋಗ ಶೀಲತೆ, ಪರಿಶ್ರಮ ಎಲ್ಲವನ್ನು ಮೆಚ್ಚಿಕೊಂಡಿದ್ದಾರೆ.

# ಪರಿಶುದ್ಧ ಸಾತ್ವಿಕ ಜೀವನ

ಪಂಚಗಾವಿಯವರು ಬದುಕಿನಲ್ಲಿ ಉದ್ದೇಶ ಸಾಧನೆಗಿಂತ ಆದರ್ಶಗಳಿಗೆ ಹೆಚ್ಚಿನ ಆದ್ಯತೆ, ಮಹತ್ವ ನೀಡುತ್ತ ಬಂದವರು. ಕೀಳು-ಕಳಂಕಿತ ರಾಜಕೀಯದಿಂದ ಬಹುದೂರ ನಿಂತುಕೊಂಡವರು. ಭ್ರಷ್ಟಾಚಾರದಲ್ಲಿ ಎಂದೂ ತಮ್ಮ ಕೈಗಳನ್ನು ಕೊಳೆಮಾಡಿಕೊಳ್ಳಲಿಲ್ಲ. ರಾಜಕೀಯ ಕೊಳಕು ಕಳಂಕದಿಂದ ಎಂದಿಗೂ ತಮ್ಮ ಶುಭ್ರ ಖಾದಿಯಮೇಲೆ ಕಪ್ಪು ಕೊಳೆಯ ಚಿಕ್ಕ ಚುಕ್ಕೆ ಸಹ ಮೂಡಗೊಡಲಿಲ್ಲ. ಅಂತಹ ನಿಷ್ಕಳಂಕ ರಾಜಕೀಯ ಜೀವನ. ಇಪ್ಪತ್ತು ವರ್ಷ ರಾಜಕಾರಣದಲ್ಲಿ ಪರಿಶುದ್ಧತೆಯನ್ನು ಕಾಪಾಡಿಕೊಂಡು ಬರುವುದು ಅಷ್ಟು ಸುಲಭವಲ್ಲ!

ಶಾಸನ ಸಭೆಯಲ್ಲಿ ಇರುವಾಗಲೂ ಅಷ್ಟೇ ವ್ಯರ್ಥ ಕಾಲಹರಣ ಮಾಡುತ್ತ ದಿನಗಳೆಯುತ್ತ ಸ್ವಕಾರ್ಯ ಸಾಧನೆಗಳಲ್ಲಿ ವರ್ಗಾವರ್ಗಿ-ಹಣಸಂಪಾದನೆಯ ದಂಧೆಯಲ್ಲಾಗಲಿ, ಶಾಸನ ಸಭೆಯಲ್ಲಿ ಗೊರಕೆ ಹೊಡೆಯುತ್ತ, ಇಲ್ಲವೆ ಶಾಸಕರ ಭವನದಲ್ಲಿ ಇಸ್ಪೀಟು ಆಡುತ್ತ ರೋಲಕಾಲ್ ರಾಜಕೀಯ ಮಾಡಿದವರಲ್ಲ"

ತಾವು ಶಾಸಕರಾಗಿ ಇರುವಷ್ಟು ಕಾಲ ಅತ್ಯಂತ ಕ್ರೀಯಾಶೀಲರಾಗಿ, ಸಮರ್ಥರಾಗಿ ಸೇವೆ ಸಲ್ಲಿಸಿದರು. ರಾಜ್ಯ ವಿಧಾನ ಸಭೆಯ ಯಾವತ್ತೂ ಕಾರ್ಯಕಲಾಪ, ಚರ್ಚೆಗಳಲ್ಲಿ ಸಕ್ರೀಯವಾಗಿ ಭಾಗವಹಿಸಿದರು. ಶಾಸನ ಸಭೆಯ ಎಲ್ಲಾ ಆಗು-ಹೋಗು ಮುಂಗಡ ಪತ್ರ, ಯೋಜನೆಗಳು, ಬರಗಾಲ ಕಾಮಗಾರಿ, ನೀರಾವರಿ ಯೋಜನೆಗಳು, ಉದ್ಯೋಗ, ಪಾನ ನಿರೋಧ, ಕಾಯ್ದೆ ಸಂಬಂಧ ಇತ್ಯಾದಿ ಇತ್ಯಾದಿ ಚರ್ಚೆಗಳಲ್ಲಿ ಸಕಾರಾತ್ಮಕವಾಗಿ ಸ್ಪಂದಿಸುತ್ತ ತಮ್ಮ ಪ್ರತಿಭೆ ಪಾಂಡಿತ್ಯ ಅನುಭವ ಜನಪರ ಕಾಳಜಿಯ, ವಿದ್ವತ್‌ಪೂರ್ಣ ವಾಗ್ವೈಖರಿಯಿಂದ ಸದನದಲ್ಲಿ ಗೋಕಾವಿ ನಾಡನ್ನು, ಉತ್ತರ ಕರ್ನಾಟಕದ ಗಡಿ ಜಿಲ್ಲೆಗಳನ್ನು ಯಶಸ್ವಿಯಾಗಿ ಪ್ರತಿನಿಧಿಸಿದ್ದಾರೆ.

ತಾವು ಪ್ರತಿನಿಧಿಸುತ್ತ ಬಂದ ಗೋಕಾವಿ ನಾಡು, ಗಡಿ ಭಾಗದ ಬೆಳಗಾವಿ ಜಿಲ್ಲೆ, ಉತ್ತರ ಕರ್ನಾಟಕಕ್ಕೆ ಸಿಗಬೇಕಾದ ಎಲ್ಲಾ ಸವಲತ್ತು ಸಿಗುವಂತೆ ನೋಡಿಕೊಂಡರು. ಗಡಿ ಭಾಗದ ರಾಯಭಾರಿಯಾಗಿ ಕಾರ್ಯನಿರ್ವಹಿಸುತ್ತ ಬಂದದನ್ನು ಪಂಚಗಾವಿಯವರ ಶಾಸನ ಸಭೆಯ ಭಾಷಣ-ವಾದ-ಹಕ್ಕು ಮಂಡನೆಗಳೇ, ಋಜುವಾತು ಪಡಿಸುತ್ತವೆ. ಪಂಚಗಾವಿ ತನಗಾಗಿ ತನ್ನವರಿಗಾಗಿ ನಾಳೆ ಭವಿಷ್ಯಕ್ಕಾಗಿ ಏನನ್ನೂ ಕೂಡಿಡಲು ಹವಣಿಸಿದವರಲ್ಲ. ತಾವೇ ಕಟ್ಟಿ ಬೆಳೆಸಿದ ಸ್ಕೂಲ ಬೋರ್ಡು, ಬ್ಯಾಂಕು, ಸೊಸೈಟಿಗಳಲ್ಲೂ ತಾವೇ ಅಧ್ಯಕ್ಷರಾಗಿರಬೇಕು, ಅಧಿಕಾರ ಯಾವತ್ತು ತಮ್ಮ ಕೈಮುಷ್ಟಿಯಲ್ಲಿರಬೇಕು, ನಾಳೆ ತಮ್ಮ ಮಕ್ಕಳು ತಮ್ಮ ರಾಜಕೀಯ ಉತ್ತರಾಧಿಕಾರಿಯಾಗಿ ಬೆಳೆಯಬೇಕೆಂದು ಯೋಚಿಸಿದವರಲ್ಲ. ನಿಜಕ್ಕೂ ಅವರೊಬ್ಬ ಆದರ್ಶ ಸಮಾಜಜೀವಿ.

**"ಲೋಕವೇ ನನ್ನ ಮನೆ, ಮಾನವಕುಲವೇ ನನ್ನ ಕುಟುಂಬ"** ಎಂದು ಬಗೆದ ವಿಶ್ವ ಕುಟುಂಬಿ. ಕುವೆಂಪು ಹೇಳಿದಂತೆ **"ಓ ನನ್ನ ಚೇತನ ಆಗು ನೀ ಅನಿಕೇತನ"** ಎಂಬಂತೆ ವಿಶ್ವಚೇತನರೂಪಿ ಪಂಚಗಾವಿಯವರು.

## ಸಾಮಾಜಿಕ ಕಳಕಳಿ

18ನೇ ಅಕ್ಟೋಬರ್ 1957

**ಎ. ಆರ್. ಪಂಚಗಾಂವಿಯವರು ರಾಜ್ಯ ಮುಂಗಡ ಪತ್ರದ ಮೇಲೆ ತಮ್ಮ ಟೀಕೆ ಟಿಪ್ಪಣೆ ವ್ಯಕ್ತಪಡಿಸಿದ್ದಾರೆ. ಅವರ ವಸ್ತು ನಿಷ್ಠ ವಿಶ್ಲೇಷಣೆ - ನ್ಯಾಯ ನಿಷ್ಠುರ ವಿಮರ್ಶೆ, ಅವರ ಒಲವು - ನಿಲುವು ಜನಪರ ಕಾಳಜಿ ಸಾಮಾಜಿಕ ಕಳಕಳಿಯ ಪ್ರಾಮಾಣಿಕ ಅಭಿವ್ಯಕ್ತಿಯಾಗಿದೆ. ಮೈಸೂರು ರಾಜ್ಯ ರಚನೆಯೊಂದಿಗೆ , 2ನೇ ಸಲ ಆಯ್ಕೆಯಾದ ಪಂಚಗಾವಿಯವರು ಮುಂಬಯಿ ಬದಲಿಗೆ ಬೆಂಗಳೂರು ವಿಧಾನ ಸಭೆಗೆ ಪ್ರವೇಶಿಸುತ್ತಾರೆ. ಭಾಷಾವಾರು ಪ್ರಾಂತ ರಚನೆಯ ಪುನರ್ವಿಂಗಡನೆಯ ಹಿನ್ನಲೆಯಲ್ಲಿ ಮುಂಬೈ ಕರ್ನಾಟಕ ಪ್ರದೇಶದ ಹೊಸದಾಗಿ ಬೆಂಗಳೂರು ವಿಧಾನ ಸಭೆಗೆ ಸೇರ್ಪಡೆಗೊಂಡ ಸಂದರ್ಭದಲ್ಲಿ ಪಂಚಗಾವಿಯವರ ವಿಚಾರ - ಪ್ರತಿಪಾದನೆಗಳಿಗೆ ಐತಿಹಾಸಿಕ ಮಹತ್ವವಿದೆ, ಉತ್ತರ ಕರ್ನಾಟಕದ ಕೃಷಿಕ ಸಮುದಾಯದ ಮಳೆ, ಬೆಳೆ, ಬೇಸಾಯ, ಬರಗಾಲ, ಕರ - ಕಂದಾಯ , ನೀರಾವರಿ, ವಿದ್ಯುತ್, ಗ್ರಾಮೋದ್ಯೋಗ - ಗೃಹಕಾರಿಕೆ ಹೀಗೆ ಹಲವು ಹತ್ತು ಸಮಸ್ಯೆಗಳ ಮೇಲೆ 1957 – 58ರ ಮುಂಗಡ ಪತ್ರದ ಮೇಲೆ ಬೆಳಕು ಚೆಲ್ಲುತ್ತಾರೆ.**

ಅಧ್ಯಕ್ಷರೆ, ಈ ವರ್ಷ ಅಯವ್ಯಯದ ಮುಂಗಡಪತ್ರದ ಬಗ್ಗೆ ಚರ್ಚೆ ಮಾಡುವಾಗ ನಾವು ಈಗಿನ ಪರಿಸ್ಥಿತಿಯನ್ನು ಗಮನದಲ್ಲಿಟ್ಟುಕೊಳ್ಳಬೇಕು. ಸದ್ಯದ ಪರಿಸ್ಥಿತಿಯಲ್ಲಿ ರಾಜ್ಯ ಪುನರ ನಿರ್ಮಾಣವಾದ ಮೇಲೆ ಯಾವ ಯಾವ ಸಮಸ್ಯೆಗಳ ಮೇಲೆ ಏನೇನು ಅಭಿಪ್ರಾಯಗಳು ಹೊಸದಾಗಿ ಬಂದಿರುವವೋ ಅವುಗಳೆಲ್ಲವೂ ಇನ್ನೂ ಪೂರ್ಣ ಪರಿಸ್ಥಿತಿಯನ್ನು ಹೊಂದದೆ ಇರುವಾಗ, ನಮ್ಮ ಆರ್ಥಿಕ ಪರಿಸ್ಥಿತಿಯಿಂದ ಪೂರ್ಣ ಲಾಭ ಪಡೆದುಕೊಳ್ಳುವ, ಸಾಮರ್ಥ್ಯ ಇನ್ನೂ ನಮಗೆ ಉಂಟಾಗದಿರುವಾಗ

ಇದ್ದುದರಲ್ಲಿ ಉತ್ತಮವಾದ ಹಣಕಾಸಿನ ಮುಂಗಡ ಪತ್ರವನ್ನು ಅರ್ಥ ಸಚಿವರು ಸಿದ್ಧ ಪಡಿಸಿರುವದರಿಂದ ನನಗೆ ಬಹಳ ಸಂತೋಷವಾಗಿದೆ. ಇಷ್ಟೊಂದು ಅಡ್ಡಿ ಆತಂಕಗಳು ಇದ್ದರೂ ಕೂಡ ಅನೇಕ ಹೊಸ ಯೋಜನೆಗಳನ್ನು ಸಿದ್ಧಪಡಿಸಿ ಅವುಗಳನ್ನು ಆದಷ್ಟು ಜಾಗೃತೆ ಜಾರಿಗೆ ತರುವ ಬಗ್ಗೆ ಕಾರ್ಯಕ್ರಮ ತೆಗೆದುಕೊಂಡಿರುವದು ಅಭಿನಂದನೀಯವಾಗಿದೆ. ಈ ಪರಿಸ್ಥಿತಿಯಲ್ಲಿ ಕೆಲವೊಂದು ದೃಷ್ಟಿಯಿಂದ ಅನೇಕರು ಮುಂಗಡಪತ್ರದ ಮೇಲೆ ಟೀಕೆ ಮಾಡಿದ್ದಾರೆ. ಆದರೆ ನಾನು ಈ ಮುಂಗಡ ಪತ್ರದಿಂದ ನಮ್ಮ ಹಳ್ಳಿಗಳ ಮೇಲೆ, ಹಳ್ಳಿಯ ಒಕ್ಕಲಿಗರ ಮೇಲೆ ಯಾವ ತರಹ ಪರಿಣಾಮವಾಗಿದೆಯೆಂಬುದನ್ನು ನೋಡಲಿಚ್ಛಿಸುತ್ತೇನೆ. ಮುಂಬೈ ಕರ್ನಾಟಕದಿಂದ ಬಂದವರು ಹೆಚ್ಚಿಗೆ ಹಿಂದಿನಿಂದಲೂ ಒಕ್ಕಲುತನದ ಉತ್ಪನ್ನವನ್ನು ಅವಲಂಬಿಸಿದ್ದಾರೆ. ಒಕ್ಕಲುತನದ ಪರಿಸ್ಥಿತಿ ಯಾವ ರೀತಿ ಇದೆ ಎಂದು ಎಲ್ಲಾ ಭಾಗಗಳಲ್ಲಿಯೂ ವಿಚಾರಿಸುವದು ಯೋಗ್ಯ. ಮುಂಬೈ ಕರ್ನಾಟಕದಲ್ಲಿ ಭೂ ಕಂದಾಯ ಉಳಿದ ಭಾಗಗಳಿಗಿಂತ ಬಹಳ ಹೆಚ್ಚಾಗಿದೆ. ಈ ಪರಿಸ್ಥಿತಿಯಲ್ಲಿ ಮುಂಬೈ ಕರ್ನಾಟಕದ ಬಗ್ಗೆ ಸ್ವಲ್ಪ ಮಟ್ಟಿಗೆ ವಿಚಾರಿಸಿ ಕರ ಹಾಕಿದರೆ ನೆಟ್ಟಗಾಗುತ್ತದೆಂದು ನನ್ನ ಅಭಿಪ್ರಾಯವಿದೆ. ಆದರೆ ಇಷ್ಟೊಂದು ಅವಸರದ ಪರಿಸ್ಥಿತಿಯಲ್ಲಿ ಏನು ಮಾಡುವುದಕ್ಕೆ ಸಾಧ್ಯವಾಗುವದಿಲ್ಲ. ಒಂದೇ ಭಾಗದ ಮೇಲೆ ಹೆಚ್ಚಿಗೆ ಕರ ಭಾರ ಬೀಳದಂತೆ ನೋಡಿಕೊಳ್ಳುವದು, ಮತ್ತು ಎಲ್ಲಾ ಭಾಗಗಳಲ್ಲೂ ಒಂದು ಸಮನ್ವಯವಾದ ಕರಭಾರ ಹಾಕುವದು ಅವಶ್ಯಕವಾಗಿದೆ. ಈ ಪ್ರಕಾರ ಮುಂದೆಯೂ ಯೋಚನೆ ಮಾಡುವಅಭಿಪ್ರಾಯವಿದೆ. ಅದನ್ನು ನಮ್ಮ ಸರಕಾರದವರು ಜಾರಿ ಮಾಡಿಕೊಂಡು ಹೋಗಬೇಕೆಂದು ನನ್ನ ಇಚ್ಛೆ. ಹಣಕಾಸಿನ ಮಂತ್ರಿಗಳು ಒಂದು ಸಂಗತಿಯ ಬಗ್ಗೆ ಒಂದು ಆಶಾದಾಯಕವಾದ ಭರವಸೆಯನ್ನು ಕೊಟ್ಟಿದ್ದಾರೆ. ರಾಜ್ಯದ ಎಲ್ಲಾ ಭಾಗಗಳಲ್ಲೂ ನೀರಾವರಿ ವಿಷಯದಲ್ಲಿ ಒಂದು ಸಮನ್ವಯವಾದ ಕಾಯಿದೆಯನ್ನು ಮಾಡುವರು. ಅತ್ಯಂತ ಅವಶ್ಯಕವೆಂದು ಹೇಳಿ ಆ ಬಗ್ಗೆ ಹಣಕಾಸಿನ ಮಂತ್ರಿಗಳು ಶೀಘ್ರವಾಗಿ ಒಂದು ನಿಯಮವನ್ನು ಮಾಡುತ್ತಾರೆಂದು ಭರವಸೆಯನ್ನು ಕೊಟ್ಟಿದ್ದಾರೆ. ನಮ್ಮ ರಾಜ್ಯದಲ್ಲಿ ಘಟಪ್ರಭಾ ನೀರಾವರಿ ಯೋಜನೆಯ ಪರಿಸ್ಥಿತಿಯನ್ನು ನೋಡಿದರೆ, ನಮ್ಮಲ್ಲಿ ನೀರವಾರಿ ಸಾಕಷ್ಟು ಪ್ರಚಾರವಾಗಿದೆ. ಆದ್ದರಿಂದ ಲಾಭ ಬರುವುದಕ್ಕೆ ಬಹಳ ಅಡಚಣೆಗಳುಂಟು. ನೀರಾವರಿ ಕರವೂ ಬಹಳ ಹೆಚ್ಚಾಗಿರುವುದರಿಂದ, ನಿಯಮಗಳು ಬಹಳ ಬಿಗಿಯಾಗಿರುವಂತೆ ಮಾಡಿರುವದರಿಂದ ದಂಡ ಬಹಳ ಹೆಚ್ಚಾಗುತ್ತದೆ. ರೈತರಿಗೆ ನೀರಾವರಿ ದಂಡ ಬಹಳ ಭಾರವಾಗಿದೆ. ಘಟಪ್ರಭಾ ನೀರಾವರಿಯಿಂದ ಕರ ಬಹಳ ಹೆಚ್ಚಾಗಿರುವ ಕಾರಣ ಅಲ್ಲಿಯ ಜನರು ಅದರ ಬಗ್ಗೆ ಒಂದು ತರಹ ವಾದವನ್ನು

ಮೊದಲಿನಿಂದಲೂ ಮಾಡುತ್ತ ಬಂದಿದ್ದಾರೆ. ಈ ಆಡಳಿತದ ಕರ್ತವ್ಯ ನಿರ್ವಹಣೆ ಸ್ವಲ್ಪ ಸಡಿಲವಾಗಬೇಕು, ಮತ್ತು ಆ ಬಗ್ಗೆ ರೈತರಿಗೆ ದಂಡ ಹಾಕದಂತೆ ವ್ಯವಸ್ಥೆ ಮಾಡಿದರೆ ಬಹಳ ಉತ್ತಮವಾಗುತ್ತದೆ. ಅದು ಅಲ್ಲದೆ ಈಗ ಹೊಸ ಹೊಸದಾಗಿ ಇರ್ರಿಗೆಷನನ್ನಿಗೆ ಬಂದಿರುವ ಪ್ರದೇಶಗಳಲ್ಲಿ ದಂಡ ದ್ವಿಗುಣವಾಗಿ ಪರಿಣಮಿಸುವದರಿಂದ ಈಗ ರೈತರು ನೀರಾವರಿಯಿಂದ ಸಾಕಷ್ಟು ಲಾಭವನ್ನು ಪಡೆಯುತ್ತಿಲ್ಲ. ಆದ್ದರಿಂದ ಸರಕಾರದವರು ಈ ಕಷ್ಟ ಸಮಸ್ಯೆಗಳನ್ನು ಬಗೆ ಹರಿಸುವದಲ್ಲದೆ ಈ ನೀರಾವರಿಯಿಂದ ಹೆಚ್ಚು ಲಾಭವನ್ನು ಎಲ್ಲರೂ ಪಡೆಯುವಂತೆ ಹೆಚ್ಚಿಗೆ ಪ್ರಚಾರ ಮಾಡಬೇಕು. ಎಲ್ಲಾ ರೈತರೂ ಲಾಭ ಪಡೆಯಬೇಕೆಂಬುದನ್ನು ಅವರ ಮನಸ್ಸಿನಲ್ಲಿ ಪ್ರತಿಬಿಂಬಿಸಬೇಕು. ಜಮೀನ ಮೇಲೆ ಸಾಲ ಕೊಡುವ ಬಗ್ಗೆ ಒಂದು ನಿಯಮಾವಳಿಯನ್ನು ನಿರ್ಧಾರಮಾಡುವದು ಒಳ್ಳೆಯದೆಂದು ನನಗೆ ಕಾಣಿಸುತ್ತದೆ. ಇದಕ್ಕಾಗಿ ಘಟಪ್ರಭಾ ಯೋಜನೆಯಲ್ಲಿ ಆದಷ್ಟು ಕೂಡಲೇ ಕಾರ್ಯಕ್ರಮ ಕೈಕೊಳ್ಳವರೆಂದು ನಾನು ನಂಬಿದ್ದೇನೆ.

ವಿದ್ಯುಚ್ಛಕ್ತಿಯ ಪೂರೈಕೆಯ ಬಗ್ಗೆ ನಮ್ಮ ಮೈಸೂರು ಸಂಸ್ಥಾನ ವೈಶಿಷ್ಟ್ಯತೆಯಿಂದ ಕೂಡಿದೆ ಎನ್ನಬಹುದು. ಇಲ್ಲಿರುವ ಸೌಕರ್ಯಗಳು ಉಳಿದ ಯಾವ ಪ್ರಾಂತಗಳಲ್ಲಿಯೂ ಇಲ್ಲ. ಇದರಿಂದ ಪೂರ್ಣ ಲಾಭವನ್ನು ಪಡೆಯಬಹುದು. ನೀರಾವರಿ ಮತ್ತು ಇತರ ಕೈಗಾರಿಕೆಗಳಿಗೆ ಇದರ ಲಾಭ ಸಿಕ್ಕಬೇಕು. ನಮ್ಮ ಹಳ್ಳಿಗಳು ಬೆಳೆದರೆ ನಮ್ಮ ರಾಜ್ಯಕ್ಕೆ ಕಲ್ಯಾಣ. ಆದ್ದರಿಂದ ಹಳ್ಳಿಗಳು ಸಾಕಷ್ಟು ಬೆಳವಣಿಗೆಯಾಗಲಿ, ಇದರಿಂದ ಯಾವ ಒಂದು ವಿಶಿಷ್ಟ ತರದ ಸಮಾಜವನ್ನು ನಿರ್ಮಾಣ ಮಾಡಬೇಕೆಂದು ಹೇಳುತ್ತಿದ್ದೇವೆಯೋ. ಅದು ಸಾಧ್ಯವಾಗಲೆಂದು ಆಶಿಸುತ್ತೇನೆ. ಸಮತಾವಾದ ಸಮಾಜವನ್ನು ನಿರ್ಮಾಣ ಮಾಡಬೇಕಾದರೆ ಹಳ್ಳಿಗಳನ್ನು ಅಲಕ್ಷ ಮಾಡಿ ಶಹರುಗಳನ್ನು ಹೆಚ್ಚಿಸಿ ಬೆಳೆಸಿದರೆ ಸಾಲದು. ಶೇಕಡಾ 90% ಮಂದಿ ಹಳ್ಳಿಗಳಲ್ಲಿದ್ದಾರೆ. ಹಳ್ಳಿಗಳ ಕಡೆ ಹೆಚ್ಚು ಲಕ್ಷ ಕೊಡಬೇಕಾದದ್ದು ಅವಶ್ಯಕ ಹಳ್ಳಿಗಳನ್ನು ಅಲಕ್ಷ ಮಾಡಿದರೆ ದೇಶದ ಚುನಾವಣೆಗೆ ಒಂದು ಜೋಡಿ ಅಂಗವೇ ಇಲ್ಲದಂತಾಗುತ್ತದೆ. ಆದಷ್ಟು ಆ ಕಡೆ ಲಕ್ಷ ಕೊಟ್ಟು ಸರಕಾರ ಆಡಳಿತ ನಡೆಸಿಕೊಂಡು ಹೋಗಬೇಕು. ಆ ಬಗ್ಗೆ ಸಾಕಷ್ಟು ಈ ಬಜೆಟ್ಟಿನಲ್ಲಿ ಲಕ್ಷ್ಯವಿದೆ. ಆದರೆ ಕೆಲವು ಸಂದರ್ಭಗಳಲ್ಲಿ ಹೆಚ್ಚು ಗಮನ ಕೊಡಬೇಕಾಗಿದೆ. ಮುಖ್ಯವಾಗಿ ಮೊದಲು ಉದ್ಯೋಗಗಳನ್ನು ಕಲ್ಪಿಸಬೇಕು. ದೇಶದ ಆರ್ಥಿಕ ಉನ್ನತೆಯನ್ನು ಆದಷ್ಟು ಸಾಧಿಸಬೇಕೆಂದು ದೊಡ್ಡ ದೊಡ್ಡ ಕಬ್ಬಿಣದ ಕಾರಖಾನೆ, ಉಕ್ಕಿನ ಕಾರಖಾನೆ ಸ್ಥಾಪಿಸುತ್ತಿರುವಂತೆ. ಹಳ್ಳಿಗಳ ಉನ್ನತಿಯ ವಿಚಾರದಲ್ಲಿ ಸಾಕಷ್ಟು ಗಮನ ಕೊಟ್ಟು ಹಣ ಒದಗಿಸುವುದನ್ನು ಲಕ್ಷ್ಯದಲ್ಲಿಡಬೇಕು. ಈಗ ನಮ್ಮ ದೇಶದಲ್ಲಿ

ದೊಡ್ಡ ಕ್ರಾಂತಿ ನಡೆಯುತ್ತಿದೆ. ಹಳ್ಳಿಗಳ ರಾಜ್ಯ ಗ್ರಾಮ ರಾಜ್ಯ ಎಂದು ಮಹಾತ್ಮ ಗಾಂಧೀಜಿಯವರು ಹೇಳುತ್ತಿದ್ದರು. ಆ ಗ್ರಾಮ ರಾಜ್ಯದಲ್ಲಿ ಒಂದು ದೊಡ್ಡ ಕೆಲಸ ನಡೆದಿದೆ. ಶ್ರೀ ವಿನೋಬಾ ಭಾವೆಯವರು ಭೂದಾನ ಚಳುವಳಿಯನ್ನು ಪ್ರಾರಂಭಿಸಿ ಅನೇಕರಿಂದ ಭೂಮಿಯನ್ನು ಪಡೆದಿದ್ದಾರೆ. ಕರ್ನಾಟಕವೂ ಸಹ ತನ್ನ ಕರ್ತವ್ಯವನ್ನು ಆ ವಿಚಾರದಲ್ಲಿ ನಿರ್ವಹಿಸುತ್ತಿದೆ. ಇದರ ಬಗ್ಗೆ ಸರಕಾರ ಒಂದು ಯೋಜನೆಯನ್ನು ಹಾಕಿಕೊಳ್ಳುವದು ಅವಶ್ಯಕ. ಒಳ್ಳೆಯ ಆದರ್ಶನ್ನಿಟ್ಟುಕೊಂಡು ಆಡಳಿತ ನಡೆಸಿಕೊಂಡು ಬರಬೇಕು. ಅತ್ಯಂತ ಸುಲಭವಾದ ರೀತಿಯಲ್ಲಿ ಯಾವ ತರಹ ಜನರಿಗೂ ಮನಸ್ತಾಪವಾಗದಂತೆ ಅತ್ಯಂತ ಪ್ರೇಮದಿಂದ ಸಮಸ್ಯೆಯನ್ನು ಬಿಡಿಸಿ ಯೋಗ್ಯ ವಾತಾವರಣ ಯೋಗ್ಯ ಸೌಕರ್ಯ ಕಲ್ಪಿಸುವದು ಆಡಳಿತ ನಡೆಸುವವರ ಕರ್ತವ್ಯವೆಂಬುದನ್ನು ಲಕ್ಷದಲ್ಲಿಡಬೇಕು. ಗ್ರಾಮದಾನಿ ಹಳ್ಳಿಗಳಲ್ಲಿನ ಜನರು ಗ್ರಾಮೋದ್ಯೋಗ ಅಥವಾ ಗ್ರಾಮ ಕೈಗಾರಿಕೆಯನ್ನು ಸ್ಥಾಪನೆ ಮಾಡುವದಕ್ಕೆ ಅನುಕೂಲತೆ ಬೇಡಿದರೆ ಅಥವಾ ಜಮೀನು ಸಾಗುವಳಿಗೆ ಸಾಮೂಹಿಕ ವ್ಯವಸ್ಥೆಯಿಂದ ಅಥವಾ ಸಹಕಾರ ವ್ಯವಸ್ಥೆಯಿಂದ ಮುಂದೆ ಬಂದರೆ ಯೋಗ್ಯ ರೀತಿಯಿಂದ ಸಹಾಯ ಮತ್ತು ಸಲಹೆ ಕೊಡುವದು ಸರಕಾರದ ಕರ್ತವ್ಯ. ಆ ದೃಷ್ಠಿಯಿಂದ ಯಾವ ಯೋಜನೆಯೂ ಈ ಬಜೆಟ್ಟಿನಲ್ಲಿ ಕಾಣಬರುವದಿಲ್ಲ. ಆದರೂ ಸಹ ಈ ಬಗ್ಗೆ ಸಹಕಾರಿ ಸಂಘ ನಿರ್ಮಾಣ ಮಾಡುವುದಕ್ಕೆ ಮತ್ತು ಸಮಾಜ ಕಲ್ಯಾಣದ ಬಗ್ಗೆ ಹಣ ತೆಗೆದಿಟ್ಟಿದ್ದಾರೆ. ಹಳ್ಳಿಗಳಲ್ಲಿ ಹೆಚ್ಚು ಸಾಮಾಜಿಕ ಕಾರ್ಯಗಳಿಗೆ ಲಕ್ಷಕೊಟ್ಟು ಸೌಕರ್ಯವನ್ನೊದಗಿಸಿ ಸಹಾಯ ಮಾಡುತ್ತಾರೆಂದು ನಂಬಿದ್ದೇನೆ. ಇನ್ನು ಹಳ್ಳಿಗಳ ಬಗ್ಗೆ ಮತ್ತು ಒಕ್ಕಲುತನದ ಬಗ್ಗೆ ಮಾತನಾಡುವಾಗ ಹಳ್ಳಿಗಳಲ್ಲಿರುವ ಸಂಪತ್ತು ಉಪಯೋಗವಾಗುವಂತೆ ಮಾಡಲು ಮುಂಜಾಗ್ರತೆಯ ಅವಶ್ಯಕತೆಯಿದೆ. ಸಂಪತ್ತನ್ನು ಬೆಳೆಸುವದೊಂದು ಕ್ರಿಯಾವಾದರೆ ಇರುವ ಸಂಪತ್ತನ್ನು ಹಾಳಾಗದಂತೆ ನೋಡಿಕೊಳ್ಳುವದೊಂದು ಕ್ರಮ. ಹಳ್ಳಿಗಳಲ್ಲಿ ನೋಡಿದರೆ ಈ ವಿಚಾರದಲ್ಲಿ ಸಾಕಷ್ಟು ಆಲಸ್ಯವಿದೆ. ಅಲ್ಲಿನ ಸಂಪತ್ತು ಅನೇಕ ರೀತಿಯಲ್ಲಿ ಹಾಳಾಗುತ್ತಿದೆ. ದನಗಳ ಸಂಪತ್ತು ಅತ್ಯಂತ ಉತ್ಕೃಷ್ಠ ರೀತಿಯಲ್ಲಿ ಸುದಾರಿಸಬೇಕು, ಯೋಗ್ಯ ರೀತಿಯ ಔಷಧೋಪಚಾರ ದೊರೆಯಬೇಕು. ದನಗಳ ಸಂಪತ್ತನ್ನು ವೃದ್ಧಿ ಮಾಡಿ ಜನತೆಗೆ ಯೋಗ್ಯ ಬೆಲೆಗೆ ಸಿಕ್ಕುವ ಹಾಗೆ ವ್ಯವಸ್ಥೆ ಮಾಡಬೇಕು. ಹಳ್ಳಿಗಳಲ್ಲಿ ಸತ್ತ ದನಗಳಿಗೆ ಸರಿಯಾದ ಬೆಲೆಯಲ್ಲಿ ಒಕ್ಕಲಿಗರಿಗೆ ಲಾಭ ಸಿಕ್ಕುತ್ತಿಲ್ಲ. ಇದನ್ನು ಪೂರ್ಣವಾಗಿ ವಿಚಾರಮಾಡಿ ಸತ್ತ ದನಗಳಿಗೆ ನೂರು ರೂಪಾಯಿಗಳಾದರೂ ಬೆಲೆ ಬರುವಂತೆ ಅನೇಕರು ಯೋಜನೆ ಮಾಡಿದ್ದಾರೆ. ಅದರಂತೆ ನಮ್ಮ ಕೆಲವು ಹಳ್ಳಿಗಳಲ್ಲಿ ಪ್ರಯೋಗ ನಡೆಸಿ ದನ ಸತ್ತ ಮೇಲೆ ಒಕ್ಕಲಿಗರಿಗೆ

ಬೆಲೆ ಬರುವ ಹಾಗೆ ಏರ್ಪಾಡು ಮಾಡುವದು ಎಲ್ಲ ಕಡೆಯೂ ಅವಶ್ಯಕ. ಅದಲ್ಲದೆ ಪ್ರತಿ ಊರಿನಲ್ಲಿಯೂ ಗೊಬ್ಬರದ ತಯಾರಿಕೆಯ ಕಡೆ ಲಕ್ಷ ಹಾಕಿ ಕಸ ಕಡ್ಡಿ ಹಾಗೂ ಇತರ ಸಂಪತ್ತು ಹಾಳಾಗುತ್ತಿರುವುದನ್ನು ತಪ್ಪಿಸಿ ಅದು ಉಪಯೋಗ ವಾಗುವಂತೆ ವ್ಯವಸ್ಥೆ ಮಾಡಬೇಕು. ಈ ಕಡೆ ಲಕ್ಷ್ಯ ಕೊಟ್ಟ ಪಕ್ಷದಲ್ಲಿ ನಮ್ಮ ಪರಿಸ್ಥಿತಿ ಸುಧಾರಿಸುವದರಲ್ಲಿ ಸಂಶಯ ಇಲ್ಲ.

ಇನ್ನು ಒಂದೇ ಒಂದು ಹೊಸ ವಿಚಾರ ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ. ಈಚೆಗೆ ನಮ್ಮ ಭಾಗದಲ್ಲಿ ಗೋಕಾಕ ಸಮೀಪದ ಲೋಳಸೂರ ಬಳಿಯ ಪೂಲಿಗೆ ಐವತ್ತು ಸಾವಿರ ರೂಪಾಯಿಗಳಂತೆ ಹಣ ಕೊಟ್ಟಿದ್ದಾರೆ. ಅದರ ಬಗ್ಗೆ ದೊಡ್ಡ ಅಡಚಣೆಯಿತ್ತು. ಅದು ನಿವಾವರಣೆಯಾಗಿ ಸರ್ಕಾರದವರು ನಾನಾ ಸೌಲಭ್ಯಗಳನ್ನು ಕೊಟ್ಟಿರುವದಕ್ಕೆ ಅಭಿನಂದಿಸಿ ಹಣಕಾಸಿಗೆ ಮುಂಗಡಪತ್ರದ ಬಗ್ಗೆ ಬೆಂಬಲವಿತ್ತು ನನ್ನ ಭಾಷಣವನ್ನು ಮುಕ್ತಾಯ ಮಾಡುತ್ತೇನೆ.

# ಉಳುವವನೆ ಹೊಲದೊಡೆಯ

18th Oct, 1957.

**ಉಳುವವನೇ ಹೊಲದೊಡೆಯನಾಗಬೇಕು, ದೀನದಲಿತರಿಗೆ -ಭೂ ರಹಿತರಿಗೆ ವ್ಯವಸಾಯಕ್ಕೆ ಕೃಷಿ ಭೂಮಿ ಹಂಚಿಕೆ, ಭೂ ಸುಧಾರಣೆ ಕಾರ್ಯ್ದಗಳ ಜತ್ತಿ ಸಮಿತಿ ವರದಿಯ ಸಾಧಕ ಭಾದಕಗಳು, ಅದರ ಮೂಲಭೂತ ತತ್ವಗಳ ಆಶಯ-ಉದ್ದೇಶಗಳು ಅಂದಿನ ದಿನಮಾನದ ಭೂ ಮಾಲೀಕರ-ಗೇಣಿದಾರರ ಬದುಕು -ಬವಣೆ ಕುರಿತು ಪಂಚಗಾವಿಯವರ ಅನಿಸಿಕೆ ಅಭಿಪ್ರಾಯಗಳಲ್ಲಿವೆ.**

ಅಧ್ಯಕ್ಷ ಮಹಾಶಯರೇ, ಈ ಹೊತ್ತು ಒಂದು ಮಹತ್ವದ ವಿಷಯವನ್ನು ವಿಚಾರ ಮಾಡುವದಕ್ಕೆ ನಾವು ಕುಳಿತಿದ್ದೇವೆ. ಮೈಸೂರು ರಾಜ್ಯವು ಹೊಸದಾಗಿ ಸ್ಥಾಪನೆ ಯಾದ ಮೇಲೆ ಐದು ಭಾಗಗಳಿಂದ ಬಂದ ಎಲ್ಲಾ ಜನಗಳಿಗೂ ಅನ್ವಯವಾಗುವಂತೆ ಭೂ ಸುಧಾರಣಾ ಕಾರ್ಯವನ್ನು ಆದಷ್ಟು ತ್ವರಿತವಾಗಿ ಮಾಡಬೇಕು. ನಮ್ಮ ಹೊಸ ರಾಜ್ಯದಲ್ಲಿ ಆದಷ್ಟು ಬೇಗ ತೀವ್ರ ದೃಷ್ಠಿಯಿಂದ ಜತ್ತಿ ಸಮಿತಿಯನ್ನು ಸರಕಾರದವರು ನೇಮಿಸಿದರು. ಅದರ ವರದಿ ನಮ್ಮ ಮುಂದಿದೆ. ಈ ಸಮಿತಿಯ ಅಧ್ಯಕ್ಷರು ಮುಂಬೈ ರಾಜ್ಯದಲ್ಲಿ ಅತ್ಯಂತ ಪ್ರೊಗ್ರೆಸ್ಸಿವ ಲೇಜಿಸ್ಲೇಶನ್ ಇದೆ ಎಂಬುದನ್ನು ಒಪ್ಪಿದ್ದಾರೆ. ಈಗ ಅವರು ಕೊಟ್ಟ ವರದಿಯನ್ನು ನೋಡಿದರೆ ನನಗೆ ಅತ್ಯಂತ ವಿಷಾದವಾಗಿದೆ. ಮೂಲಭೂತವಾಗಿ ಕೆಲವು ವಿಚಾರಗಳಲ್ಲಿ ಮೂಲಭೂತವಾದ ತತ್ವಗಳನ್ನು ತಪ್ಪಾಗಿ ಈ ಸಮಿತಿ ತಿಳಿದುಕೊಂಡಿದೆ. **ಮೊದಲನೆಯದಾಗಿ ಸೀಲಿಂಗ ಬಗ್ಗೆ ಒಂದೆರಡು ಮಾತುಗಳನ್ನು ಹೇಳುತ್ತೇನೆ.** ಸೀಲಿಂಗ ಬಗ್ಗೆ ವಿಚಾರಮಾಡುವಾಗ ಜತ್ತಿ ಸಮಿತಿಯವರು ಕೆಲವು ಮಾತುಗಳನ್ನು ಹೇಳಿದ್ದಾರೆ. ಉತ್ಪತ್ತಿಯ ಅರ್ಧದಷ್ಟು ಖರ್ಚು ಸಾಗುವಳಿಗೆ ಬೇಕಾಗುತ್ತದೆ ಮತ್ತು ತರಿ ಬಿಟ್ಟು ಡ್ರೈ ಲ್ಯಾಂಡಿಗೆ 66 $^{3}/_{4}$ ದಷ್ಟು ಖರ್ಚಾಗುತ್ತದೆ ಎನ್ನುವ ಆಧಾರವನ್ನು ಹೇಳಿದ್ದಾರೆ. ಇದನ್ನು ಎಲ್ಲಿಂದ ತಂದರೋ ತಿಳಿಯದು. ಯಾವೊಬ್ಬ ಅನುಭವವುಳ್ಳ ಒಕ್ಕಲಿಗರೂ ಇದನ್ನು ಒಪ್ಪುವುದಿಲ್ಲ. ಸಾಧಾರಣವಾಗಿ ಮಳೆ ಕಡಿಮೆ ಇರುವ ಭಾಗದಲ್ಲಿ ಗೊಬ್ಬರ ಹಾಕುವದು ಕಡಿಮೆ. ಎರಡು ಬೆಳೆಯಾದರೆ ಬಹಳ ಕಷ್ಟವಾಗುತ್ತದೆ. ಈ

ಪ್ರಕಾರ ಬೇಸಾಯ ಮಾಡುವದರಲ್ಲಿ ತರೀ ಬೆಳೆಗೆ ಖರ್ಚು ಎಷ್ಟು ಬೀಳುತ್ತದೆ. ಭಾಗಾಯತಿ ಜಮೀನು ಮಾಡುವುದರಲ್ಲಿ ಖರ್ಚು ಎಷ್ಟಾಗುತ್ತದೆಯೆಂಬುದನ್ನು ಒಕ್ಕಲಿಗರು ಹೇಳಬಹುದು ಒಕ್ಕಲಿಗರ ಮನೆಯಲ್ಲಿ ಒಬ್ಬ ಚಿಕ್ಕ ಹುಡುಗ ಹೇಳಬಹುದು. ಸಾಧಾರಣ ನಮ್ಮ ಅನುಭವದ ಪ್ರಕಾರ ಭಾಗಾಯತ ಜಮೀನದಲ್ಲಿ ಅರ್ಧ ದಷ್ಟು ಖರ್ಚು ಬರುತ್ತದೆ. ಒಣ ತರಿಯಲ್ಲಿ ಅಷ್ಟು ಖರ್ಚು ಯಾವಾಗಲೂ ಬರುವದಿಲ್ಲ. ಈ ಮಾತನ್ನು ನಾವು ಮರೆಯುವಹಾಗಿಲ್ಲ. ಅಲ್ಲಿ ಖರ್ಚು ಕಾಲುಭಾಗ ಉಳಿತಾಯ ಮುಕ್ಕಾಲಭಾಗ ಇದನ್ನು ಬಹಳ ದೂರ ಹೋಗಿ ನಾವು ವಿಚಾರ ಮಾಡಿ ನೋಡಿದರೆ ಅದಕ್ಕೆ ಮೂಲಭೂತವಾದ ಮತ್ತು ಆಧಾರ ಭೂತವಾದ ಮಾತುಗಳು ಇವೆ. ಇದು ಅನುಭವದಿಂದ ಹೇಳಲು ಸಾಧ್ಯ. ಪ್ರತ್ಯಕ್ಷವಾಗಿ ಒಕ್ಕಲಿಗರ ಮಾತುಗಳಲ್ಲಿನ ಮೂಲಭೂತವಾದ ತತ್ವಗಳನ್ನು ತಿಳಿದು ನೋಡಬೇಕು. ಇದನ್ನೇ ಆಧಾರವಾಗಿಟ್ಟುಕೊಂಡು ಮುಂದಿನ ಹೆಜ್ಜೆಯನ್ನಿಟ್ಟಿದ್ದಾರೆ. ಒಕ್ಕಲುತನದ ಖರ್ಚು ಭಾಗಾಯತ ಜಮೀನಿನಲ್ಲಿ ಅರ್ಧದಷ್ಟಾದರೆ ನಿವ್ವಳ ಉತ್ಪನ್ನ ಸಾಧಾರಣವಾಗಿ 1,200 ರೂಪಾಯಿಗಳು. ಅದು ಒಂದು ಕುಟುಂಬಕ್ಕೆ ಫ್ಯಾಮಿಲಿ ಹೋಲ್ಡಿಂಗ್ ಎಂದು ತಿಳಿಯತಕ್ಕದ್ದು ಎಂದು ಹೇಳಿ ಪರಮಾವಧಿಯನ್ನು ಎರಡು ವಿಧವಾಗಿ ಇಟ್ಟಿದ್ದಾರೆ. ಯಾರು ಒಕ್ಕಲುತನ ಭೂಮಿಯನ್ನು ಸಾಗು ಮಾಡುತ್ತಾರೋ ಅಂತಹ ರೈತರಿಗೆ ವ್ಯವಸಾಯ ದೃಷ್ಟಿಯಿಂದ ಒಂದು ಸೀಲಿಂಗನ್ನೂ ಇಟ್ಟಿದ್ದಾರೆ. ಯಾರು ಮೊದಲಿನಿಂದಲೂ ಒಕ್ಕಲುತನವನ್ನು ಮಾಡುತ್ತಿದ್ದಾರೋ ಅವರಿಗೆ 4.5 ಯಷ್ಟು ಸೀಲಿಂಗ ಇಡಬೇಕೆಂಬ ಭೇದ ಭಾವನೆಯನ್ನು ಇಟ್ಟಿದ್ದಾರೆ. ಈ ಭೇದ ಭಾವನೆ ನನ್ನ ದೃಷ್ಟಿಯಿಂದ ಯೋಗ್ಯವಲ್ಲ. ಆದರೆ ಮೊದಲಿನಿಂದಲೂ ಮನೆಯವರೇ ಬೇಸಾಯ ಮಾಡುತ್ತಿದ್ದರೆ ಅವರಿಗೆ ಒಂದು ತರಹ ಇಟ್ಟರೆ ಅಡ್ಡಿಯಿಲ್ಲ. ಇದರಲ್ಲಿ ಕೆಲವು ಮೂಲಭೂತವಾದ ಮಾತುಗಳನ್ನು ಹೇಳುವಾಗ ಇದರ ಬಗ್ಗೆ ಲೆಕ್ಕ ಹಾಕಿ ಹೈದರಾಬಾದಿನವರ ಪರಿಸ್ಥಿತಿ ಏನಾಗಬಹುದೆಂದು ಶ್ರೀ ಕೊಲ್ಲೂರು ಮಲ್ಲಪ್ಪನವರು ಹೇಳಿದ್ದಾರೆ. **ಇದರಿಂದ ಒಕ್ಕಲಿಗರಿಗೆ ಮತ್ತು ಪ್ರತ್ಯಕ್ಷ ಬೇಸಾಯಗಾರರಿಗೆ ಒಂದು ಎಕರೆ ಭೂಮಿಯೂ ಅಲ್ಲಿ ದೊರೆಯುವ ಹಾಗಿಲ್ಲ ವೆಂಬ ಮಾತನ್ನು ಹೇಳಿದ್ದಾರೆ. ಆ ಮಾತನ್ನು ಅತ್ಯಂತ ದುಃಖದಿಂದ ಹೇಳಿದ್ದಾರೆ. ಹೀಗಾಗಿ ಮೊದಲಿನಿಂದಲೂ ಯಾರು ಸಾಗು ಮಾಡುತ್ತಿದ್ದರೋ ಅವರಿಗೆ ಭೂಮಿ ಸಿಕ್ಕುವುದು ಕಷ್ಟವಿದೆಯೆಂದು ದುಃಖದಿಂದ ಹೇಳಬೇಕಾಗಿದೆ.** ಸಾಧಾರಣವಾಗಿ ಈಗ ತಾವು ಒಂದು ಸಂಸಾರಕ್ಕೆ ಬಿಡತಕ್ಕ ಜಮೀನಿನ ವಾರ್ಷಿಕ ಉತ್ಪನ್ನ 1200 ರೂಪಾಯಿಗಿಂತ ಹೆಚ್ಚಾಗಿರಬಾರದೆಂದು ತಿಳಿಸಲಾಗಿದೆ. ಹೀಗೆ ಹೇಳುತ್ತ ಒಟ್ಟು

ಬದುಕಿನಲ್ಲಿ ಒಣ ಬೇಸಾಯಕ್ಕೆ ಆದರೆ 3600 ರೂಪಾಯಿಗಳಿರಬಹುದೆಂದೂ, ಆಪ್ಟ್ಯೂರ್ಡ್ ಇರಿಗೇಶನ್ ಸಂಬಂಧದಲ್ಲಿ ವಾರ್ಷಿಕ ಒಟ್ಟು ಉತ್ಪನ್ನ 2400 ರೂಪಾಯಿಗಳಿರಬಹುದೆಂದು ತಿಳಿಸಿದ್ದಾರೆ. ಈ ರೀತಿಯ ಉತ್ಪನ್ನ ಬರಬೇಕಾದರೆ ಹೊಸದಾಗಿ ವ್ಯವಸಾಯ ಪ್ರಾರಂಭಿಸುವ ಜಮೀನಿನ ವಿಸ್ತೀರ್ಣ ಈ ಪರಿಮಿತಿಯ ಮೂರು ಪಟ್ಟು ಮತ್ತು ನಾಲ್ಕೂವರೆ ಪಟ್ಟೇನಾದರೂ ಇರಬೇಕೆಂದು ಭೂಮಿ ಸೀಲಿಂಗನ್ನು ನಿರ್ಧರಿಸಬೇಕಾಗುವದು. ಇದಾದರೂ ಕೇವಲ ಐದು ಜನರಿರುವಂಥ ಒಂದು ಸಂಸಾರಕ್ಕೆ ಅನ್ವಯಿಸುವ ವಿಷಯ ಒಂದು ವೇಳೆ ಆರು ಜನರಿರುವ ಸಂಸಾರಕ್ಕಾದರೆ ಆಗ ಇದರ ಎರಡು ಪಟ್ಟು ಜಮೀನನ್ನು ಬಿಟ್ಟು ಕೊಡಬೇಕಾಗುತ್ತದೆ. ಐದು ಜನರಿರುವ ಒಂದು ಕುಟುಂಬದ ವಾರ್ಷಿಕ ಉತ್ಪನ್ನ 3600 ರೂಪಾಯಿಗಳಿರಬೇಕೆಂದು ಹೇಳಿರುವಾಗ ಆರು ಜನರಿರುವ ಕುಟುಂಬದ ಉತ್ಪನ್ನ 33000 ರೂಪಾಯಿಗಳಿಗೆ ಏರುತ್ತದೆ. ಆಗ ಇಷ್ಟು ಉತ್ಪನ್ನ ಬರಲು ಅವರಿಗೆ ಎಷ್ಟು ಜಮೀನ ಬೇಕಾಗುತ್ತದೆ? ಹೀಗಾದರೆ ಜಮೀನಿಲ್ಲದ ವ್ಯವಸಾಯಗಾರನಿಗೆ ಉಳಲು ಜಮೀನು ದೊರೆಯಲು ಸಾಧ್ಯವಿದೆಯೇ?

(ಈ ಹಂತದಲ್ಲಿ ಮಾನ್ಯ ಶ್ರೀ ಬಿ. ಕೆ. ಪುಟ್ಟರಾಮಯ್ಯ (ಚೆನ್ನಪಟ್ಟಣ) ಅವರು ಶ್ರೀ ಪಂಚಗಾಂವಿಯವರನ್ನು ಪ್ರಶ್ನಿಸಿದ್ದಾರೆ. ಅದು ಹೀಗೆ - 30000 ರೂಪಾಯಿಗಳೆಂದು ತಾವು ಹೇಗೆ ಲೆಕ್ಕ ಹಾಕಿದಿರಿ?)

**ಇದಕ್ಕುತ್ತರವಾಗಿ ಶ್ರೀ ಪಂಚಗಾಂವಿಯುವರು :** ನನ್ನ ಅಂದಾಜ ಪ್ರಕಾರ ಅಷ್ಟಾಗುತ್ತದೆ. ಒಂದು ಫ್ಯಾಮಿಲಿ ಹೋಲ್ಡಿಂಗ್ ಒಟ್ಟು ವಾರ್ಷಿಕ ಉತ್ಪನ್ನ 3600 ರೂಪಾಯಿಗಳಾದರೂ ಇರಬೇಕೆಂದು ಹೇಳಿದ್ದಾರೆ. ಈ ಮೊಬಲಗಿನಲ್ಲಿ ಒಟ್ಟು ಇತರ ಎಲ್ಲ ಖರ್ಚಗಳು ಕಳೆದು ಉಳಿತಕ್ಕವರಿಗೆ 1200 ರೂಪಾಯಿಗಳು ಉತ್ಪನ್ನ ಬರಬೇಕೆಂದು ಹೇಳಿದ್ದಾರೆ. ಅಂದರೆ ಒಟ್ಟು ಉತ್ಪತ್ತಿಯಲ್ಲಿ ಮೂರನೆಯ ಒಂದಂಶಕ್ಕೆ 1200 ರೂಪಾಯಿ ಆಗುತ್ತದೆ. ಅಂತೂ ಜಮೀನಿನಲ್ಲಿ ಒಟ್ಟು 3600 ರೂಪಾಯಿ ಉತ್ಪನ್ನ ಕೊಡುವ ಪೀಕ ಬರಬೇಕು. ಹೀಗೆ ಐದು ಜನರಿರುವ ಒಂದು ಸಂಸಾರಕ್ಕೆ ಈಗ ಹೇಳಿರ ತಕ್ಕ ಸೀಲಿಂಗ್ ಲಿಮಿಟ್ ಪ್ರಕಾರ ಲೆಕ್ಕಾಚಾರ ಹಾಕಿದರೆ ಐದಕ್ಕಿಂತ ಹೆಚ್ಚು ಮಂದಿ ಇರುವ ಸಂಸಾರಕ್ಕೆ ಇದರ ಒಂಬತ್ತು ಪಟ್ಟು ಜಮೀನನ್ನು ಸೀಲಿಂಗ್ ಲಿಮಿಟ್ಟನಲ್ಲಿ ಅಡಕ ಮಾಡಬೇಕಾಗುತ್ತದೆ. ಅಂದರೆ ಈ ಸೀಲಿಂಗ್ ಲಿಮಿಟ್‌ನ ಉತ್ಪನ್ನ 33000 ರೂಪಾಯಿಗಳಿಗೆ ಬರುತ್ತದೆ. ಅದನ್ನೇ ಕರಾರುವಾಕ್ಕಾಗಿ ಹೇಳುವದಾದರೆ 32400 ರೂಪಾಯಿಗಳು ಆಗುತ್ತದೆ. ಇಷ್ಟು ಪೀಕು ಬರಬೇಕಾದರೆ ಆ ಸಂಸಾರಕ್ಕೆ

ಎಷ್ಟು ಜಮೀನ ಬಿಡಬೇಕಾಗುತ್ತದೆ. ಹಾಗೆ ಒಂದೊಂದು ಸಂಸಾರಕ್ಕೆ ಅಷ್ಟೊಂದು ಜಮೀನನ್ನು ಬಿಟ್ಟು ಕೊಟ್ಟರೆ ಬಾಕಿ ಉಳಿತಕ್ಕವರೆಗೆ ಇನ್ನು ಜಮೀನಿನ್ನೆಲ್ಲಿ ಸಿಕ್ಕುತ್ತದೆ? ಹೀಗಾದರೆ ಯಾರಿಗೂ ಜಮೀನ ಉಳಿಯುವದೇ ಇಲ್ಲ. ಈಗ ಹಾಲಿ ಇರತಕ್ಕ ಮತ್ತು ಮುಂದಿನ ಅಕ್ವಿಜೇಶನ್ ಆಫ್ ಲ್ಯಾಂಡಿನ ಬಗ್ಗೆ ಸೀಲಿಂಗ್ ಲಿಮಿಟ್ ಪರಿಮಿತಿಯನ್ನು ಹೇಳುತ್ತಾ ಬಾಂಬೆ ಪ್ರಾಂತಕ್ಕೆ ಒಣ ಬೇಸಾಯದ ಬಗ್ಗೆ 48 ಎಕರೆ ಭೂಮಿ ಎಂತಲೂ ಭಾಗಾಯತ ಭೂಮಿಯಾದರೆ 12 ಎಕರೆ ಇರಬೇಕೆಂತಲೂ ಸೂಚನೆ ಮಾಡಿದ್ದಾರೆ ಮೊದಲಿನ ಬಾಂಬೆ ಶಾಸನದಲ್ಲಿ ಈ ಸೀಲಿಂಗ್ ಲಿಮಿಟ್ ಈಗಿನ ಅರ್ಧದಷ್ಟಿತ್ತು. 24 ಎಕರೆಗಳೆಂದು ನಿಗದಿ ಮಾಡಲಾಗಿತ್ತು ಹಾಗೆ 24 ಎಕರೆಗಳ ಸೀಲಿಂಗ್ ಲಿಮಿಟ್ ಇದ್ದಾಗಲೇ ಅಲ್ಲಿಯ ಗೇಣಿದಾರರಿಗೆ ಜಮೀನ ಸಿಕ್ಕುವದು ಬಹಳ ದುರ್ಲಭವಾಗಿತ್ತು. ಇನ್ನು ಈಗ ಈ ಸೀಲಿಂಗ್ ಲಿಮಿಟ್‌ನ್ನು ಒಂದಕ್ಕೆ ಎರಡರಷ್ಟು ಹೆಚ್ಚಿಸಿದಾಗ ಆ ಜನರಿಗೆ ಜಮೀನ ಸಿಕ್ಕಲು ಸಾಧ್ಯವೇ ಇಲ್ಲ. ಹೋಗಲಿ, ಇಂಥ ಒಂದು ಪ್ರಾವಿಜನ್ ಅನ್ನು ಈಗ ಯಾರ ಸಂಬಂಧವಾಗಿ ಮಾಡಿದ್ದಾರೆ? ಈ ದಿವಸ ಅನ್ನುವದನ್ನು ನೋಡಿದರೆ ಯಾರು ಹೆಚ್ಚು ಒಕ್ಕಲುಗಳಿಸಿಟ್ಟು ಕೊಂಡಿದ್ದರೋ ಅಂಥವರಿಗೆ ಮಾತ್ರ ಅನ್ವಯಿಸುವದೆಂದು ಹೇಳಿದ್ದರೆ ಅದೊಂದು ಬಹಳ ಸಂತೋಷದ ಸಂಗತಿ ಆಗುತ್ತಿತ್ತು. ಈ ದಿವಸ ಮುಂಬೈ ಪ್ರಾಂತದಲ್ಲಿ ರತಕ್ಕ ಜಮೀನಿನಲ್ಲಿ ಅಲ್ಲಿಯ ಜಮೀನ ಮಾಲಕರು ತಮ್ಮ ತಮ್ಮ ಕುಟುಂಬದಲ್ಲೇ, ಗಂಡ ಹೆಂಡತಿ ಮಕ್ಕಳು ಇತ್ಯಾದಿಯವರ ಹೆಸರುಗಳಲ್ಲಿ ಮನೆಸಹಿತ ಎಲ್ಲಾ ಆಸ್ತಿಗಳನ್ನು ಭಾಗ ಮಾಡಿಕೊಂಡಿದ್ದಾರೆ. ಹೀಗಾಗಿ ಅಲ್ಲಿ ಈ ದಿವಸ ಯಾರೊಬ್ಬರಲ್ಲೂ ಈಗ 48 ಎಕರೆ ಜಮೀನ ಇರುವದಿಲ್ಲ. ತಾವು ಈ ರೀತಿ ಲೆಕ್ಕ ಹಾಕಿ ನೋಡುವದಾದರೆ ಈಗಲೇ ಆ ಮುಂಬೈ ಪ್ರಾಂತದಲ್ಲಿ ಯಾರಿಗೂ ಜಮೀನ ಸಿಕ್ಕಲಾರದೆಂದು ಕಂಡು ಬರುತ್ತದೆ. ಈ ದೃಷ್ಟಿಯಿಂದ ನೋಡಿದರೆ ಇನ್ನು ಮುಂದೆ ಅಲ್ಲಿ ಯಾರೊಬ್ಬರಿಗೂ ಜಮೀನ ಖಂಡಿತ ಸಿಕ್ಕವದಿಲ್ಲವೆಂದು ಹೇಳುತ್ತೇನೆ. ಈ ಕಾರಣದಿಂದ ಈಗ ಆ ಸಮಿತಿಯವರು ಒಪ್ಪಿಸಿರುವ ರಿಪೋರ್ಟ ಅಲ್ಲಿಯ ಪರಿಸ್ಥಿತಿಗೆ ಪೂರ್ಣ ವಿರುದ್ಧವಾಗಿದೆ ಎಂದು ಹೇಳುತ್ತೇನೆ. ಆ ಸಮಿತಿಯವರು ಈ ಬಗ್ಗೆ ತಮ್ಮ ವರದಿಯಲ್ಲಿ ಏನು ಹೇಳಿದ್ದಾರೆಂಬುದರ ಬಗ್ಗೆ ಅವರ ಕೆಲವು ಮಾತುಗಳನ್ನೇ ನಾನೀಗ ಹೇಳಿರುತ್ತೇನೆ. **ಈ ಬಗ್ಗೆ ನನ್ನ ಸೂಚನೆ ಏನಿದೆಯೆಂದರೆ ಈಗ ಈ ಸಮಿತಿಯವರು ತಮ್ಮ ವರದಿಯಲ್ಲಿ ಏನು ಈ 48 ಎಕರೆಗಳ ಒಂದು ಫ್ಯಾಮಿಲಿ ಹೋಲ್ಡಿಂಗ್ ಲಿಮಿಟ್ ಅನ್ನು ಹೇಳಿದ್ದಾರೋ ಅದು ಸರಿ ಅಲ್ಲ.**

ಮೊದಲು ಮುಂಬೈ ಪ್ರಾಂತದಲ್ಲಿ ಏನೊಂದು ಫ್ಯಾಮಿಲಿ ಲಿಮಿಟ್ ಹಾಕಿದ್ದರೋ ಅದೇ ಯೋಗ್ಯವಾಗಿದೆ ಎಂದು ಹೇಳುತ್ತೇನೆ. ಈ ಪರಿಮಿತಿ ಏನೆಂದರೆ ಅಷ್ಯೂರ್ಡ್ ವಾಟರ್ ಸಪ್ಲಾಯ್ ಇರತಕ್ಕ ಜಮೀನಾದರೆ 4 ಎಕರೆಗಳಿರಬೇಕೆಂದೂ, ಸೀಜನಲ್ ಕಲ್ಟಿವೇಟೆಡ್ ಜಮೀನಾದರೆ 8 ಎಕರೆ ಇರಬೇಕೆಂದು ಒಣ ಬೇಸಾಯದ ಜಮೀನಾದರೆ 16 ಎಕರೆಗಳಿರಬೇಕೆಂದೂ ನಿಗದಿ ಮಾಡಲಾಗಿತ್ತು. ಈ ಪರಮಾವಧಿಗಿಂತಲೂ ಜಾಸ್ತಿ ಜಮೀನ ಯಾರಿಗೂ ಇರಬಾರದೆಂದು ಹೇಳುತ್ತೇನೆ. ಇದಕ್ಕಿಂತಲೂ ಹೆಚ್ಚಿನ ಪರಿಮಿತಿಯಲ್ಲಿ ಈ ಸೀಲಿಂಗ್ ಲಿಮಿಟ್ಟನ್ನಿಟ್ಟರೆ ಆ ಮುಂಬೈ ರಾಜ್ಯದಲ್ಲಿ ಈ ಸ್ವಂತ ಬೇಸಾಯಗಾರರಾಗಿ ಇರತಕ್ಕ ಜಮೀನದಾರರ ಬಗ್ಗೆ ಕೆಲವು ಕಂಡಿಶನ್ನುಗಳನ್ನು ಹಾಕಿರುತ್ತಾರೆ. ಗೇಣಿದಾರನಿಂದ ಜಮೀನನ್ನು ಬಿಡಿಸಿಕೊಳ್ಳಬೇಕಾಗಿದ್ದರೆ ಮಾಲೀಕರಿಗೆ ಅದೇ ಅವನ ಜೀವನಾಧಾರ ವಸ್ತುವಾಗಿರಬೇಕೆಂದು ಹೇಳಿದ್ದಾರೆ. ಇದು ಸರಿ ಅಲ್ಲ. ಇದನ್ನು ತೆಗೆಯಬೇಕು ಸ್ವಂತ ಬೇಸಾಯ ಮಾಡತಕ್ಕ ಜನರು ಆ ಬೇಸಾಯ ಮಾಡತಕ್ಕ ಜಮೀನು ಯಾವ ಗ್ರಾಮದಲ್ಲಿರುತ್ತದೋ ಆ ಗ್ರಾಮದಲ್ಲಿಯೇ ಅವರು ಇರಬೇಕು ಹಾಗೆ ವ್ಯವಸಾಯ ಮಾಡುವ ಜಮೀನು ವಾಸಮಾಡತಕ್ಕ ಹಳ್ಳಿಗೆಂಟು ಮೈಲಿ ಫಾಸಲೆಯಾಗಿದ್ದರೆ ಫ್ಯಾಮಿಲಿ ಸೀಲಿಂಗ್ ಲಿಮಿಟ್ ಎರಡರಷ್ಟು ಭೂಮಿಯನ್ನು ಇಟ್ಟುಕೊಳ್ಳಬಹುದೆಂದು ತಿಳಿಸಿದೆ. ಹೀಗೆಯೇ ಆ ಜಮೀನು ಎಷ್ಟು ದೂರವಿದ್ದರೆ ಅಷ್ಟು ಸೀಲಿಂಗ್ ಲಿಮಿಟ್ಟನಲ್ಲಿ ಕಡಿಮೆ ಮಾಡಿದ್ದಾರೆ. ಇಷ್ಟೇ ಅಲ್ಲದೇ ಬೇರೆ ಬೇರೆ ಪ್ರದೇಶಗಳಿಗೆ ಮತ್ತು ಭಾಗಗಳಿಗೆ ಅಲ್ಲಿನ ಜಮೀನಗಳ ಫಲವತ್ತು ಹೇಗಿರುತ್ತದೋ ಅದಕ್ಕನುಗುಣವಾಗಿ ಆಯಾಯ ಭಾಗಗಳಿಗೆ ಬೇರೆ ಬೇರೆ ರೀತಿಯ ಸೀಲಿಂಗ್ ಪರಿಮಿತಿಯನ್ನು ಇಡಬೇಕಾದದ್ದು ಅಗತ್ಯ. ಈಗ ಉದಾಹರಣೆಗೆ ಹೇಳುವದಾದರೆ, ಚಿಕ್ಕೋಡಿ ಪ್ರಾಂತ್ಯದಲ್ಲಿರತಕ್ಕ ಜಮೀನು ಬಹಳ ಫಲವತ್ತಾದದ್ದು, ಆ ಜಮೀನು ಬಹಳ ಉತ್ತಮವಾದುದರಿಂದ ಅಲ್ಲಿ ಜನರಿಗೆ ಜಮೀನ ಸಿಕ್ಕುವುದೇ ದುರ್ಲಭ. ಅಲ್ಲಿ ವರ್ಷಕ್ಕೆ ಎಕರೆಯಲ್ಲಿ 4000 ಸಾವಿರ ರೂಪಾಯಿಗಳ ಪೀಕನ್ನು ತೆಗೆದುಕೊಳ್ಳಲು ಬರುತ್ತದೆ. ಅಂದರೆ ಅಲ್ಲಿ 2000 ರೂ. ನಿವ್ವಳ ಆದಾಯವಿರುತ್ತದೆ. ಅಂತಹ ಪ್ರದೇಶದಲ್ಲಿ ಈ ಸೀಲಿಂಗ್ ಲಿಮಿಟ್ಟನ್ನು 48 ಎಕರೆ ಮಾಡುವದೆಂದರೆ ಬಹಳ ಜಾಸ್ತಿಯಾಯಿತು. ಅಂಥ ಪ್ರದೇಶದಲ್ಲಿ ಈ ಪರಿಮಿತಿಯನ್ನು ಕಡಿಮೆ ಮಾಡಬೇಕು. ಕಾರಣವೇನೆಂದರೆ ಆ ಜಮೀನಿನಲ್ಲಿ ಬರತಕ್ಕಂಥ ಹೆಚ್ಚಿನ ಉತ್ಪತ್ತಿ ಭಾಗದಿಂದ ಅಲ್ಲಿ ಈ ಪ್ರಮಾಣವನ್ನು ಕಡಿಮೆ ಮಾಡಬೇಕು. ಅದೇ ರೀತಿ ಇನ್ನು ದುಷ್ಕಾಲ (ಬರಗಾಲ) ಪ್ರದೇಶಗಳಲ್ಲಿರತಕ್ಕ ಭಾಗದಲ್ಲಿ ಅಂದರೆ ವಿಜಾಪೂರ, ಬೆಳಗಾಂ ಭಾಗಗಳನ್ನು ತೆಗೆದುಕೊಂಡರೆ ಅಲ್ಲಿಗೆ

ಈಗ ಆ ಬೊಂಬಾಯಿ ಪ್ರಾಂತ್ಯದಲ್ಲಿ ಇಟ್ಟುಕೊಳ್ಳಬೇಕೆಂದು ಹೇಳಿರುವ ಸೀಲಿಂಗ್ ಲಿಮಿಟ್ಟನ್ನು ಇಟ್ಟುಕೊಳ್ಳಬೇಕಾಗುತ್ತದೆ. ಇನ್ನು ಈ ಜತ್ತಿ ಕಮೀಟಿಯವರು ಜಮೀನಿನ ಮಾಲೀಕನ ದೃಷ್ಟಿಯಿಂದ ವಿಚಾರ ಮಾಡುವಾಗ ಒಕ್ಕಲಿಗನಿಂದ ಜಮೀನನ್ನು ಏಕೆ ಹಿಂದಕ್ಕೆ ತೆಗೆದುಕೊಳ್ಳಬೇಕು ಎನ್ನುವದರ ಬಗ್ಗೆ ಹೀಗೆ ಹೇಳಿದ್ದಾರೆ. ಈ ಸಮಿತಿಯ ವರದಿಯಲ್ಲಿ ಪುಟ 73 ರಲ್ಲಿ "The level of ceiling should be such as to enable persons from the better agricultural families to get the benefits of higher education to make them fit for other vocations" ಎಂದು ಇದೆ. ಇದರಲ್ಲಿ ಉತ್ತಮವಾಗಿ ಬೇಸಾಯ ಮಾಡುವವರಿಗೆ ಮತ್ತು ಒಕ್ಕಲಿಗರಲ್ಲಿ ಉನ್ನತ ವ್ಯಾಸಂಗ ಮಾಡಬೇಕಾದವರಿಗೆ ಹೆಚ್ಚು ಜಮೀನು ಬಿಡಬೇಕೆಂದು ಈ ಸಮಿತಿಯ ವರದಿಯಲ್ಲಿ ಸೂಚಿಸಲಾಗಿದೆ. ಇದರಲ್ಲಿರುವ ಉದ್ದೇಶ ಫಲವನ್ನು ಇಟ್ಟುಕೊಂಡಿರುವ ಒಕ್ಕಲಿಗನು ಆದ್ದರಿಂದ ಉತ್ಪನ್ನವನ್ನು ತೆಗೆಯಬೇಕೆನ್ನುವಾಗ ಎರಡನೆಯ ಉದ್ಯಮಕ್ಕೆ ಅವಕಾಶವಿಲ್ಲದಂತೆ ಮಾಡುವದು. ಈ ಸಮಿತಿಯ ಮನೋಭಾವನೆಯೋ ಯಾವ ತರಹದ್ದು ಎನ್ನುವದು ವಿಚಿತ್ರವಾಗಿದೆ. ಒಕ್ಕಲಿಗರು ಒಕ್ಕಲುತನ ವಿನಾ ಬೇರೆ ಉದ್ಯಮವನ್ನು ಮಾಡಬಾರದು ಎನ್ನುವದು ನನ್ನ ಅಭಿಪ್ರಾಯವಲ್ಲ. ಆದರೆ ಯಾರೇ ಒಕ್ಕಲುತನ ಮಾಡಿದರೂ, ಒಕ್ಕಲುತನ ಸುಧಾರಿಸಬೇಕಾದರೆ ವೃತ್ತಿ ಶಿಕ್ಷಣವನ್ನು ಎರಡನೆಯ ಉದ್ಯಮವನ್ನಾಗಿ ಅವರು ತೆಗೆದುಕೊಳ್ಳಬಹುದು. ಆದರೆ ಇದಕ್ಕಾಗಿ ಹೆಚ್ಚಿಗೆ ಜಮೀನನ್ನು ಉಳಿಸಿಕೊಳ್ಳಬೇಕು ಎಂದು ಇಲ್ಲಿ ಹೇಳಿರುವದು ಸರಿಯಾಗಿ ಕಾಣುವದಿಲ್ಲ. ಈಗ ನಾವು ಸೋಷಿಯಾಲಿಸ್ಟಿಕ್ ಪ್ಯಾಟರ್ನ ಆಫ್ ಸೊಸೈಟಿಯನ್ನು ಜಾರಿಗೆ ತರುವಂತೆ ಮಾಡಬೇಕೆಂದು ಹೇಳುತ್ತಿದ್ದೀರಿ. ಇದರ ಮುಖ್ಯ ಗುರಿ ಸಮತಾವಾದದಲ್ಲಿ ಎಲ್ಲರಿಗೂ ಸಮಾನವಾದ ಅವಕಾಶ ಸಿಕ್ಕಬೇಕು ಎನ್ನುವದಾಗಿದೆ. ವೃತ್ತಿ ಶಿಕ್ಷಣದ ಎರಡನೆಯ ಉದ್ದೇಶ. ಈ ರೀತಿ ವೃತ್ತಿ ಶಿಕ್ಷಣವನ್ನು ಮಾಡಿಕೊಂಡ ಯಾವ ಒಕ್ಕಲಿಗನೇ ಆಗಲಿ ಒಕ್ಕಲುತನವನ್ನು ಬಿಡುತ್ತಾನೆಂದು ಹೇಳುವದಕ್ಕಾಗುವದಿಲ್ಲ. ಆದ್ದರಿಂದ ಸೀಲಿಂಗ್‌ನ್ನು ಹಾಕಬೇಕು.

**ಶ್ರೀ ಎಸ್. ವೈ. ಪಾಟೀಲ** (ಸಿಂದಗಿ): ಸಾಧಾರಣವಾಗಿ ಜಮೀನು ಹೆಚ್ಚಾಗಿರುವದರಿಂದ ವಿದ್ಯಾಭ್ಯಾಸಕ್ಕೆ ಅನುಕೂಲವಾಗುವಂತೆ ರೈತರಿಗೆ ಈ ಜತ್ತಿ ಸಮಿತಿಯವರ ವರದಿಯಲ್ಲಿ ಹೆಚ್ಚು ಜಮೀನು ಬಿಡಬೇಕೆಂದು ಬರೆದಿದ್ದಾರೆ. ಹಾಗೆ ಮಾಡಕೂಡದೆಂದು ತಮ್ಮ ಅಭಿಪ್ರಾಯವೇ.

**ಶ್ರೀ ಎ. ಆರ್.ಪಂಚಗಾಂವಿ** - ಅದನ್ನೆಲ್ಲ ತಾವೇ ಓದಿದರೆ ತಮಗೆ ಗೊತ್ತಾಗುತ್ತದೆ. ಇದರಲ್ಲಿ "Fit for other vocations" ಎಂದಿದೆ. ಅದರ ವಿಷಯವಾಗಿ ತಮಗೆ ಒಪ್ಪಿಗೆಯಿದ್ದರೆ ಆ ಮಾತು. ಬೇರೆ ಒಕ್ಕಲುತನ ಮಾಡುವ ಒಕ್ಕಲಿಗನಿಗೆ ಆಹಾರದ ಉತ್ಪನ್ನವನ್ನು ಹೆಚ್ಚು ಮಾಡುವದಕ್ಕಾಗಿ ಶಿಕ್ಷಣದ ಸಹಾಯ ಸಿಗಬಾರದು ಎನ್ನುವ ಉದ್ದೇಶವಲ್ಲ. ಈ ರೀತಿಯಾದ ವೃತ್ತಿ ಶಿಕ್ಷಣವನ್ನು ಕೊಡುವದಕ್ಕಾಗಿ ಜಮೀನು ಕೊಡಬೇಕು ಎಂದು ಹೇಳುವದು ಸರಿಯಾಗಿರುವದಿಲ್ಲ. ಸಾಧ್ಯವಾದ ಮಟ್ಟಿಗೆ ಸ್ಟ್ಯಾಂಡರ್ಡ್ ಆಫ್ ಲಿವಿಂಗ್ ದೇಶದಲ್ಲಿ ಎಲ್ಲರಿಗೂ ಒಂದೇ ಆಗಿರಬೇಕು. ದೇಶದಲ್ಲೆಲ್ಲ ಎಷ್ಟು ಜಮೀನಿರಬಹುದು ಎನ್ನುವ ಒಂದು ಪಟ್ಟಿ ಮಾಡಬೇಕು ಕೆಲವು ಕಡೆ ಸಾವಿರಾರು ಎಕರೆಗಳಷ್ಟು ಕೂಡಾ ಸಾಗು ಮಾಡುತ್ತಿಲ್ಲ ಎನ್ನುವದನ್ನು ಲಕ್ಷ್ಯದಲ್ಲಿಟ್ಟುಕೊಳ್ಳಬೇಕು ಈ ವಿಚಾರವಾಗಿ ಇನ್ನೊಂದು ವಿಷಯವನ್ನು ಇಲ್ಲಿ ಹೇಳಿದ್ದಾರೆ.

**"Stri dhana should not be included in the ceiling."** ಎಂದು ಪ್ರತಿಯೊಂದು ಕುಟುಂಬದಲ್ಲಿಯೂ ಬೇರೆ ಬೇರೆ ಹೆಸರಿನವರು ಇದ್ದಾರೆ. ಇವರೆಲ್ಲರೂ ಸೇರಿ ಒಂದು joint family ಯಾಗುತ್ತದೆ. ಇಲ್ಲಿ "ಸ್ತ್ರೀಧನ" ದ ವಿಷಯವಾಗಿ ಹೇಳುತ್ತಾ ಇದರ ಮೇಲೆ ceiling ಇರಬಾರದೆಂದು ಸೂಚಿಸಿದ್ದಾರೆ. ಗಂಡ ಹೆಂಡತಿಯರ ಆಸ್ತಿಯೆಲ್ಲ ಒಂದೇ ಆಗಿದೆ. ಆದ ಕಾರಣ "ಸ್ತ್ರೀ ಧನ" ವನ್ನು ಸೇರಿಸಿ ಕುಟುಂಬದ ಮಿತಿ ಕಲ್ಪಿಸಬೇಕು ಇಲ್ಲದೇ ಹೋದರೆ ಇದರಿಂದ ಜಮೀನಿನ ಮಾಲೀಕರು ಅವರಲ್ಲಿರುವ ಜಮೀನನ್ನು ಅವರವರ ಹೆಂಡತಿಯರ ಇಲ್ಲವೇ ಹೆಣ್ಣು ಮಕ್ಕಳ ಹೆಸರಿನಲ್ಲಿ ಬರೆದು ಬಿಡುವ ಸಂಭವವಿದೆ. ಹೆಸರು ಬೇರೆ ಬೇರೆಯಾಗಿರುವದಾದರು ಒಂದೇ ಕುಟುಂಬಕ್ಕೆ ಸೇರಿದವರಾಗಿರುತ್ತಾರೆ. ಆದ್ದರಿಂದ ಸ್ತ್ರೀ ಧನವನ್ನು ಬೇರೆಯಾಗಿ ಭಾವಿಸುವದು ಸರಿಯಾಗಿ ಕಾಣುವದಿಲ್ಲ. ಹೀಗೆ ಮಾಡುವುದರಿಂದ ಜಮೀನು ಉಳಿಯುವದಿಲ್ಲ ಮತ್ತು ಇದರಲ್ಲಿ ceiling ಪ್ರಶ್ನೆಯೇ ಬರುವುದಿಲ್ಲ. ಇದನ್ನು ಅವರು ಅರ್ಥಮಾಡಿಕೊಳ್ಳಬೇಕಾಗಿದೆ.

ಇನ್ನೊಂದು ಮಾತನ್ನು ಈ ceiling ನ ವಿಷಯದಲ್ಲಿ ಈ ಸಮಿತಿಯವರು ಹೇಳಬೇಕಾಗಿತ್ತು. ಕಳೆದ ಆರು ವರ್ಷಗಳಲ್ಲಿ ಯಾರು ಜಮೀನನ್ನು ಒತ್ತಾಯದಿಂದ ಬಿಡಿಸಿಕೊಂಡಿರುವರೋ ಅಂಥವರಿಗೆ ಈ ಜಮೀನು ಪುನಃ ಸಿಕ್ಕುವದರಲ್ಲಿ ಅಡ್ಡಿಯಿಲ್ಲ. ಆದರೆ ಆ ರೀತಿ ರೈತರಿಗೆ ಜಮೀನು ಸಿಕ್ಕುವಂತೆ ಮಾಡಲು ಈ ವರದಿಯಲ್ಲಿ ಏನೂ ಹೇಳಿಲ್ಲ. ಇದರಲ್ಲಿ ಎರಡು ಕೋರ್ಟಿನ ವಿಷಯವಾಗಿ ಹೇಳಿದ್ದಾರೆ. ಒಂದು

Tenancy Court ಮತ್ತು ಇನ್ನೊಂದು Civil Court ಈ ಕೋರ್ಟುಗಳಿಗೆ ಹೋದ ರೈತರಿಗೆ ಎಷ್ಟು ಮುಂದಿಗೆ ಆರು ವರ್ಷದ ಹಿಂದೆ ಒತ್ತಾಯದಿಂದ ಜಮೀನು ಕಸಿದುಕೊಂಡಿದ್ದರೆ ಅವರಿಗೆ ಅದನ್ನು ವಾಪಸು ಕೊಡಲಿಕ್ಕೆ ಸಹಾಯ ಮಾಡುತ್ತಾರೆಂದು ಕೇಳಬೇಕಾಗಿದೆ. ರೈತರಿಗೆ ಸುಲಭವಾಗಿ ಜಮೀನು ಸಿಕ್ಕುವುದಕ್ಕೆ ಸಹಾಯ ಮಾಡಬೇಕು.

ಇದರಲ್ಲಿ ಇನ್ನೊಂದು ವಿಚಾರವನ್ನು ಮರೆತಿದ್ದಾರೆ. ಮುಂಬೈ ರಾಜ್ಯದ ಪರಿಸ್ಥಿತಿ ಜತ್ತಿ ಸಮಿತಿಯವರಿಗೆ ಗೊತ್ತಿರಬಹುದು. ಜಮೀನು ಮಾಲೀಕರು ಕೆಲವು ಕಡೆ ನಾಲ್ಕಾರು ವರ್ಷಗಳಿಂದ ರೈತರು ಜಮೀನು ಮಾಡುತ್ತಿದ್ದರೂ ಅದರ ಮೇಲೆ (pressure) ಒತ್ತಾಯವನ್ನು ತಂದು ಅಂತಹ ರೈತರಿಂದ ಜಮೀನನ್ನು ಕಸಿದುಕೊಂಡಿದ್ದಾರೆ. ಈ ರೀತಿಯಾಗಿ ಜಮೀನು ಮಾಲೀಕರಿಂದ ಅನೇಕ ರೀತಿಯಾದ ಕಟ್ಟು ಪಾಡುಗಳಿಗೆ ಒಳಗಾಗಿ ರೈತರಿಗೆ ಬಹಳ ಕಷ್ಟವಾಗುತ್ತದೆ. ಜಮೀನು ಮಾಲೀಕರಿಂದ ಅನೇಕ ರೀತಿಯಾದ ಒತ್ತಾಯ ದಬ್ಬಾಳಿಕೆಗಳು ಹೆಚ್ಚಾಗಿ ಅನೇಕ ಕಡೆ ರಾಜೀನಾಮೆ ತೆಗೆದುಕೊಳ್ಳುವದೂ ಆಗಿದೆ. ಕೆಲವು ಕಡೆಗಳಲ್ಲಿ ಈ ಜತ್ತಿ ಸಮಿತಿಯವರು ಹೋದಾಗ ಆಯಾ ತಾಲೂಕಿನಲ್ಲಿರುವ ಅಮಲುದಾರರಿಂದ ಅಲ್ಲಿಯ ಪರಿಸ್ಥಿತಿಯನ್ನು ವಿಚಾರಮಾಡಬೇಕಾಗಿತ್ತು. ಅದನ್ನು ವಿಚಾರ ಮಾಡಿಲ್ಲ. ಮೊದಲು ಯಾರು ಗುತ್ತೆದಾರರಿಂದ ಒತ್ತಾಯವಾಗಿ ಭೂಮಿಯನ್ನು ಕಸಿದುಕೊಂಡಿದ್ದಾರೆನ್ನುವದು ವಿಚಾರ ಮಾಡಬೇಕು ಕಳೆದ ಆರು ವರ್ಷಗಳಿಂದ ಮಾಲೀಕರು ಯಾವುದಾದರೂ ಜಮೀನನ್ನು ಒತ್ತಾಯವಾಗಿ ರೈತರಿಂದ ಬಿಡಿಸಿಕೊಂಡಿದ್ದಾರೆ ಮತ್ತು ರಾಜೀನಾಮೆಯಾಗಿದೆ. ಎಂಬುದನ್ನೆಲ್ಲ ಈ ಜತ್ತಿ ಸಮಿತಿಯವರು ವಿಚಾರ ಮಾಡಬೇಕಾಗಿತ್ತು, ಇವನ್ನು ಮಾಡಿಲ್ಲ.

ಇನ್ನು ಕೆಲವು ಮಾತುಗಳನ್ನು ನಾನು ಹೇಳುತ್ತೇನೆ. ಈ ವರದಿಯ 46 ನೇ ಪೇಜಿನಲ್ಲಿ ಒಂದು ವಿಚಾರವನ್ನು ಈ ಸಮಿತಿಯವರು ಹೇಳಿದ್ದಾರೆ. ಅದು Small Holder ವಿಚಾರ.

"This is specially true of the small holders with less than a family holding as income from land cannot give them any satisfactory standard of living these persons may not think of migration at all if they are to be compelled to part with their land before leaving the village. If leases are permitted on such cases there will be less onstance on the part of the small holder to tie his hand at avocations other than agriculture.

ಈ small holder ಎಂದರೆ ಸಣ್ಣ ಜಮೀನಿದ್ದವರು ಕೊಂಡುಕೊಳ್ಳುವುದಕ್ಕಾಗಲಿ ಮಾರಾಟ ಮಾಡುವದಾಗಲಿ ಅನುಕೂಲವಾಗುವಂತೆ ಒಂದು ವಿಚಾರವನ್ನು ಇಲ್ಲಿ ಇಟ್ಟಿದ್ದಾರೆ. ಇದರಲ್ಲಿ ಒಂದನೆಯದು, ಹೆಣ್ಣು ಮಕ್ಕಳು ಮದುವೆ ಆಗಿಲ್ಲದಿರುವದು ಅಥವಾ ಮದುವೆಯಾಗಿ ಗಂಡಿನ ಮನೆಯಲ್ಲಿ ಇರುವಂತವರಿಗೆ ಲಾವಣಿಗೆ ಕೊಡಲು ಅನುಕೂಲವನ್ನು ಕೊಡಲು ಮತ್ತು ಮುಂದೆ ಸಾಗು ಮಾಡಲು ಅವರಿಗೆ ಜಮೀನು ಸಿಕ್ಕದೇ ಇದ್ದಲ್ಲಿ ಅನುಕೂಲ ಮಾಡುವದಕ್ಕಾಗಿ ಈ ಸಮಿತಿಯವರು ಒಂದು ಸೂಚನೆಯನ್ನಿಟ್ಟಿದ್ದಾರೆ. ಅದರಲ್ಲಿ ಎಂಟು ಹತ್ತು ಎಕರೆ ಜಮೀನು ಇದ್ದರೂ ಅದನ್ನು ಸಾಗುವಳಿ ಮಾಡಬಹುದು. ಎರಡನೆಯದು ಈ ರೀತಿ ಜಮೀನನ್ನು ಸಾಗು ಮಾಡಲು ಅವರ ಮನೆಯವರೆಲ್ಲ ಸೇರಿ ಮಾಡಿದರೆ ಸಾವಿರಾರು ರೂಪಾಯಿಗಳು ಖರ್ಚು ಆದರೂ ಅದು ಕೂಡ ಉಳಿಯಬಹುದು. ಇದರಿಂದ ಅವರಿಗೂ ಪ್ರಯೋಜನವಾಗುತ್ತದೆ. ಅಲ್ಲದೇ ಲಿಮಿಟ್ಟನ್ನು 1200 ರೂಪಾಯಿಗಳೆಂದು ಬೇರೆ ಇಟ್ಟಿದೆ. ಅಷ್ಟಾದರೂ ಕೂಡ ಲಾವಣಿ ಲೆಕ್ಕ ಹಾಕಿದರೆ 1200 ರೂಪಾಯಿಗಳಷ್ಟು ಜಮೀನಿನಿಂದ ಉಳಿಯಬೇಕು, ಮುಂದೆ ಸಾಗುವಳಿಗೆ ತಕ್ಕಂತೆ ಮಿತವ್ಯಯ ತೋರಿಸಬಹುದು.

ಒಕ್ಕಲಿಗರು ಸ್ವಂತ ಜಮೀನಿದ್ದವರು ಸ್ವಂತ ಜಮೀನು ಬಿಟ್ಟು ಹೋಗಬಾರದು. ಸಾಗು ಮಾಡದಿದ್ದರೆ ಎರಡನೆಯವನಿಗೆ ಅಬಾದು ಮಾಡಲು ಕೊಡಬಹುದು ಎಂದು ಜತ್ತಿಯವರು ಹೇಳಿದರು. ಜಮೀನು ಇಲ್ಲದೆ, ಉದ್ಯೋಗವು ಇಲ್ಲದೇ ಹೊಟ್ಟೆಗೆ, ಬಟ್ಟೆಗೆ ಇಲ್ಲದವರು ಎರಡನೆಯ ಉದ್ಯೋಗ ದೊರಕುವುದಕ್ಕೆ ಪ್ರಯತ್ನ ಮಾಡುತ್ತಾರೆ. ಈಗ ಹೇಗಿದೆ ಎಂದರೆ ಜಮೀನು ಹಾಗೆಯೇ ಇರಬೇಕು, ನೌಕರಿಯೂ ಇರಬೇಕು ಇದನ್ನು ಪೂರ್ಣವಾಗಿ ವಿಚಾರ ಮಾಡಬೇಕು ಒಕ್ಕಲಿಗರು ಜಮೀನು ಬಿಟ್ಟು ಹೋಗುವದಿಲ್ಲ ಎಂದು ಮತ್ತೆ ಹೇಳುತ್ತೇನೆ. ಹೆಚ್ಚು ಲಾಭ ಇದ್ದರೆ ಬಿಟ್ಟು ಹೋಗುತ್ತಾರೆ ಹೊರತಾಗಿ ಲಾಭ ಇಲ್ಲದೆ ಹೋಗುವದಿಲ್ಲ. ಒಕ್ಕಲಿಗರು ಸಣ್ಣ ಸಣ್ಣ ಹಿಡುವಳಿದಾರರು ಭೂಮಿ ಬಿಟ್ಟು ಹೋಗುವದಿಲ್ಲ. ಶಹರದಲ್ಲಿ ಕೆಲಸ ಮಾಡಿದರೆ ನಾಲ್ಕು ಆಣೆ ಎಂಟು ಆಣೆ ಕೂಲಿ ಜಾಸ್ತಿ ಸಿಕ್ಕುತ್ತದೆಂದು ಅಂಥವರು ಪಟ್ಟಣಕ್ಕೆ ಹೋಗುತ್ತಾರೆ. ಆದರೆ ಒಕ್ಕಲಿಗರು ಜಮೀನು ಬಿಟ್ಟು ಹೋಗುವದಿಲ್ಲ. ಅಂಥವರಿಗೆ ಜಮೀನು ಕೊಡಬಾರದು ಎನ್ನುವರು ತತ್ವಕ್ಕೆ ವಿರೋಧವಾದದು ಎಂದು ಹೇಳುತ್ತೇನೆ. ಕೂಲಿಗಾರರು ಮತ್ತು ಜಮೀನು ಇಲ್ಲದವರಿಗೆ ಮೊದಲನೆಯ ಪ್ರಿಫರೆನ್ಸ್ ಕೊಟ್ಟು ಒಕ್ಕಲುತನ ಮಾಡುವವರಿಗೆ ಗೇಣಿದಾರರಿಗೆ. ಎರಡನೆಯ ಪ್ರಿಫೆರನ್ಸ್ ಕೊಡಲು ಹೊರಟಿದ್ದಾರೆ. ಅದು ತಪ್ಪು ಅದನ್ನು ತೆಗೆದು ಹಾಕಬೇಕು. ಸರಕಾರದವರು ಇದನ್ನು ಆಲೋಚನೆ ಮಾಡಬೇಕು ಎಂದು ವಿನಂತಿ ಮಾಡಿಕೊಳ್ಳುತ್ತೇನೆ. ಮುಂಬೈ

ರಾಜ್ಯದಲ್ಲಿ 1957ನೆಯ ಎಪ್ರಿಲ್ ಒಂದನೆಯ ತಾರೀಖು ಜಮೀನು ಯಾವ ರೈತರು ಮಾಡುತ್ತಾರೋ ಅವರಲ್ಲೇ ಐಕ್ಯವಾಗಬೇಕು ಎಂದು ಹೇಳಿದ್ದಾರೆ. ಅದು ಯೋಗ್ಯವಲ್ಲ ಎಂದು ಜತ್ತಿ ಸಮಿತಿಯವರು ಹೇಳಿದ್ದಾರೆ. ಅದು ಅಷ್ಟು ಸಮಂಜಸವಲ್ಲ ಎಂದು ನೋಡಿದರೆ ಗೊತ್ತಾಗುತ್ತದೆ. ವರದಿಯ 47 ನೆಯ ಪುಟದಲ್ಲಿ ಹೀಗೆ ಹೇಳಿದ್ದಾರೆ.

" It would not be correct to declare all tents holding land on a specified date as owners. Some of the lessors may belong to the categories of owners who could lease out lands even in future.

ಅಂಥವರ ಬಗ್ಗೆ ಅಪಾದನೆ ಮಾಡಿದ್ದಾರೆ. ಅವರ ಪ್ರಶ್ನೆ ಬರುವದಿಲ್ಲ. ಹೆಣ್ಣು ಮಕ್ಕಳು ವಿಧವೆಯರು ಮುಂದೆ ಭೂಮಿ ಸಾಗುವಳಿ ಮಾಡಬಹುದು ಎಂದು ಮುಂಬೈ ರಾಜ್ಯದಲ್ಲಿದೆ. ಮುಂದಕ್ಕೆ ಈ ರೀತಿ ಹೇಳಿದ್ದಾರೆ.

"Also some of the tenants may be in possession of large extents either as owners or as tenants or as both and the limit to holdings would have to apply in such cases."

ಇದು ನಿಜವಾಗಿದೆ. ಬಹಳ ರೈತರ ಹತ್ತಿರ ಬಹಳ ಜಮೀನು ಇದೆ. ಅವರಿಗೆ ಲಿಮಿಟ್ ಹಚ್ಚುವದು ನ್ಯಾಯವಾಗಿದೆ. 48 ಎಕರೆಗಳಿಗಿಂತ ಜಾಸ್ತಿ ಇರಕೂಡದು ಎಂದು ಮುಂಬೈ ರಾಜ್ಯದಲ್ಲಿ ಲಿಮಿಟ್ ಹಚ್ಚಿದ್ದಾರೆ ಇದನ್ನು ಜತ್ತಿ ಸಮಿತಿಯವರು ಮರೆಯಬಾರದಿತ್ತು.

" Future, it may not be equatable to deprive the owners who leased out their lands when there was no restriction on leases of an opportunity to make up personal cultivation within a reasonable time.

ಯಾರು ಪರ್ಸನಲ್ ಕಲ್ಟಿವೇಶನ್ ಮಾಡುತ್ತಾರೆ. ಅಂಥವರಿಗೆ ಜಮೀನ ಬಿಡಿಸಿಕೊಳ್ಳುವದಕ್ಕೆ ಮುಂಬೈ ಶಾಸನದಲ್ಲಿ ಅವಕಾಶ ಮಾಡಿದ್ದಾರೆ. ಇಂಥ ಕಡೆಗಳಲ್ಲಿಯೂ ಗೇಣಿದಾರರು ಯಾರಾದರೂ ಇದ್ದರೆ ಅವರಿಗೆ ಮಾಲಿಕತ್ವ ಪ್ರಾಪ್ತವಾಗುವದು ಯೋಗ್ಯ. ಅಲ್ಲಲ್ಲಿ ಅಲ್ಪ ಸ್ವಲ್ಪದೋಷಗಳು ಇರಬಹುದು. ಇದನ್ನು ಪಾಸು ಮಾಡಿದವರಲ್ಲಿ ಮಾನ್ಯ ಜತ್ತಿಯವರು ಒಬ್ಬರು ಅದನ್ನು ಪೂರ್ಣವಾಗಿ ವಿಚಾರ ಮಾಡಬಹುದಿತ್ತು. ಇನ್ನೂ ಮತ್ತೊಂದು ವಿಷಯದಲ್ಲಿ 52 ನೆಯ ಪೇಜಿನಲ್ಲಿ ಬಾಂಬೆ ತತ್ವ ಒಪ್ಪುತ್ತಾರೆ.

" The right of resumption should further be qualified as in the Bombay act by the condition that the income from the land to be resumed should be the main source of the land lord's income for his maintenance.

ಇದನ್ನು ಮುಂಬೈಯಲ್ಲಿ ವಿರೋಧ ಮಾಡಿದ್ದಾರೆ. ಆದರೂ ಕೂಡ ಕಾಯಿದೆಯಲ್ಲಿ ಪಾಸು ಆಗಿ ಬಂದಿದೆ. ಇದು ಆಗಬಾರದೆಂದು ನನ್ನ ಉದ್ದೇಶ. ಜಮೀನ್ದಾರ, ಒಕ್ಕಲಿಗರ ದೃಷ್ಟಿಯಿಂದ ಹೇಳುತ್ತೇನೆ. Personal Cultivation ಮಾಡುವಾಗ ಎಲ್ಲರಿಗೂ ಪ್ರಯೋಜನ ಸಿಕ್ಕಬೇಕು. ಒಕ್ಕಲಿಗರರಿಂದ ಜಮೀನು ತಾವು ಬಿಡಿಸಿಕೊಳ್ಳಬೇಕೆಂದು ಹೇಳುವಾಗ ಈ ತರಹ ರಿಸ್ಟ್ರಿಕ್ಷನ್ ಹಾಕುವಾಗ ಯಾವ ಜಮೀನು ಬಿಡಿಸಿಕೊಳ್ಳುತ್ತಾರೋ ಅದು ಮೇನ್ ಸೋರ್ಸಿನ ಆಫ್ ಇನ್ ಕಮ್ ಆಗಬೇಕು ಅನ್ನುವದು ಎಷ್ಟು ಮಟ್ಟಿಗೆ ಅಡ್ಡಿ ಬರುತ್ತದೆ ಎನ್ನುವದನ್ನು ಸಮಿತಿಯವರು ಲೆಕ್ಕ ಹಾಕಬೇಕಿತ್ತು ಈಗ ಫ್ಯಾಮಿಲಿ ಹೋಲ್ಡಿಂಗ್ 1200 ರೂಪಾಯಿ ಹಾಕಿದ್ದಾರೆ. ಒಕ್ಕಲಿಗನು 100 ರೂಪಾಯಿ ಉತ್ಪನ್ನ ಬರುವ ಜಮೀನ ಮಾಡುತ್ತಾನೆ ಎಂದು ಇಟ್ಟುಕೊಳ್ಳೋಣ. ಆಗ 200 ರೂಪಾಯಿ ಉತ್ಪನ್ನ ಬರುವ ಜಮೀನನ್ನು ಬಿಡಿಸಿಕೊಳ್ಳಬೇಕಾದರೆ ಈ ಕ್ಲಾಜ್ ಪೂರ್ಣವಾಗಿ ವಿಚಾರ ಮಾಡಿದರೆ ಬರುವದಿಲ್ಲ. ಅದು ಮೇಯನ್ ಸೋರ್ಸಿನ್ ಆಫ್ ಇನ್‌ಕಮ್ ಆಗುವದಿಲ್ಲ. ಅದು ಅವನಿಗೆ ಸಿಕ್ಕಲಾರದು ಎನ್ನುವ ಕೋರ್ಟ ನಿರ್ಣಯ ಮುಂಬೈನಲ್ಲಿ ಅನೇಕ ಸಲ ಆಗಿದೆ. ಇದನ್ನು ಜತ್ತಿ ಸಮಿತಿಯವರು ಪೂರ್ಣ ವಿಚಾರ ಮಾಡಬೇಕಾಗಿತ್ತು. ಇದನ್ನು ಮಾಡಲಿಲ್ಲ. ಮುಂಬೈನವರು ಅಕ್ಷರಶಃ ಒಪ್ಪಿದ್ದಾರೆ. ಇದು ತಪ್ಪು. ನಿಜವಾಗಿ ಒಕ್ಕಲುತನದಿಂದ ಜಮೀನು ತೆಗೆದುಕೊಂಡರೆ ಒಕ್ಕಲಿಗರಿಗೆ ಜಮೀನು ಸಿಕ್ಕುವದಿಲ್ಲ ಎನ್ನುವದನ್ನು ಮಾಲೀಕರು ಲಕ್ಷದಲ್ಲಿ ಇಟ್ಟುಕೊಳ್ಳಬೇಕು. ರಿಸ್ಟ್ರಿಕ್ಸನ್ ಹಾಕಬಾರದು ಇದಕ್ಕೆ ನನ್ನ ಒಪ್ಪಿಗೆ ಇದೆ.

ನನ್ನ ಅಭಿಪ್ರಾಯ ಸ್ವಚ್ಛವಾಗಿ ಹೇಳಿದ್ದೇನೆ. ಯಾವ ಮನುಷ್ಯ ಒಕ್ಕಲುತನ ಮಾಡುತ್ತಾನೋ ಅಂಥವನಿಗೆ ಸಾಧಾರಣವಾಗಿ ಮಿನಿಮಮ್ ಎಷ್ಟು ಜೀವನಕ್ಕೆ ಬೇಕೋ ಅಷ್ಟು ಅವನಿಗೆ ಫ್ಯಾಮಿಲಿ ಹೋಲ್ಡಿಂಗ್ ಪೂರ್ಣವಾಗಿ ಸಿಕ್ಕಬೇಕು. ಇದು ನನ್ನ ಸ್ವಚ್ಛ ಅಭಿಪ್ರಾಯ ಇದಕ್ಕೆ ಯಾವದೇ ಕಂಡೀಷನ್ ಹಾಕಬಾರದು ಒಕ್ಕಲಿಗರು ನಿಜವಾಗಿ ಒಕ್ಕಲುತನದಲ್ಲಿ ಇರಬೇಕಾದರೆ ಅವರಿಗೆ ಮಿನಿಮಮ್ ಉತ್ಪನ್ನ ಇರಬೇಕು. ಫ್ಯಾಮಿಲಿ ಹೋಲ್ಡಿಂಗ್ ಪೂರ್ಣ ಅಡ್ಡಿ ಇಲ್ಲದೇ ಸಿಕ್ಕಬೇಕು. ಇದು ನನ್ನ ಸ್ಪಷ್ಟ ಅಭಿಪ್ರಾಯ. ಜತ್ತಿ ಸಮಿತಿ ವರದಿಯಲ್ಲಿ ಸ್ವಂತ ಸಾಗುವಳಿ ಮಾಡುವದಕ್ಕೆ

ಭೂಮಿಯನ್ನು ತೆಗೆದುಕೊಳ್ಳುವಾಗ Personal labour ಇರಬೇಕೆಂಬ ವಿಚಾರದಲ್ಲಿ ಈ ರೀತಿಯಾಗಿ ಹೇಳಿದೆ. "We are of opinion that there is no need to insist on personal labour so long as the entire risk of cultivation is borne by the owner and personal supervision is exercised by the owner or a member of his family residing during the greater part of the cultivation season in the village or a near by place."

ಆದರೆ Personal labour ಸ್ವಲ್ಪ ಮಟ್ಟಿಗಾದರೂ ಇರಬೇಕು. ದುಡಿಯಲಾರದವರು ಮೇಲ್ವಿಚಾರಣೆ ಮಾತ್ರ ಮಾಡಬಹುದು. Personal Labour ಇರಬೇಕೆಂದು ಕಾನೂನದಲ್ಲಿ ಹಾಕಬೇಕು. ಯಾಕೆಂದರೆ ಸ್ವಂತ ಸಾಗುವಳಿ ಮಾಡಿದರೆ ಜಮೀನು ಸುಧಾರಿಸುತ್ತದೆ. ಬೆಳೆ ಚೆನ್ನಾಗಿ ಬರುತ್ತದೆ. ಆದ್ದರಿಂದ ದೇಶಕ್ಕೆ ಲಾಭವಾಗುತ್ತದೆ. ಸ್ವಂತ ಸಾಗುವಳಿ ಮಾಡುವದಕ್ಕೆ ಜಮೀನು 10 ಮೈಲು ಅಂತರದಲ್ಲಿ ಇರಬೇಕೆಂದು ವರದಿಯಲ್ಲಿ ಹೇಳಿದೆ. ಆದರೆ ಇಷ್ಟು ಅಂತರವಿರುವದು ಸರಿ ಅಲ್ಲ ಎಂದು ನನಗೆ ಅನಿಸುತ್ತದೆ. ಇದು ನಮ್ಮ ಸಮಾಜ ರಚನೆಗೆ ವಿರುದ್ಧ ರೈತರ ಹೆಣ್ಣು ಮಕ್ಕಳಿಗೆ ಭೂಮಿಯಲ್ಲಿ ಪಾಲು ದೊರೆಯುತ್ತದೆ. ಅವರು ಮದುವೆ ಮಾಡಿಕೊಂಡು ಹತ್ತು ಮೈಲು ಅಂತರದೊಳಗೆ ಇರುವ ಹಳ್ಳಿಗೆ ಲಗ್ನ ಮಾಡಿಕೊಂಡು ಹೋಗಬೇಕೆಂದಾಗುತ್ತದೆ. ಆದ್ದರಿಂದ ಹತ್ತು ಮೈಲು ಅಂತರ ನಿರ್ಬಂಧ ಹಾಕಲುಬಾರದೆಂದು ಅಭಿಪ್ರಾಯ ನನ್ನದು. ವಂಶಪಾರಂಪರ್ಯವಾಗಿ ಒಕ್ಕಲುತನ ಮಾಡುವವರಿಗೆ ಇದರಿಂದ ಅನ್ಯಾಯವಾಗುತ್ತದೆ. ಒಕ್ಕಲಿಗರ ಹೆಣ್ಣು ಮಕ್ಕಳಿಗೆ ಪಾಲು ದೊರೆಯಲು ಈ ನಿರ್ಬಂಧದಿಂದ ತೊಂದರೆಯಾಗುತ್ತದೆ. ಆದ ಕಾರಣ ಈ ಹತ್ತು ಮೈಲು ನಿರ್ಬಂಧ ಹಾಕಬಾರದು.

ಇನ್ನು Personal Labour ಅಂದರೆ ಏನು ಎಂಬುದು ಎಲ್ಲರಿಗೂ ಗೊತ್ತಿದೆ. ಭೂಮಿಯಲ್ಲಿ ಸ್ವತಃ ದುಡಿಯಬೇಕು. ಆಳುಗಳನ್ನು ಹಚ್ಚಿ ಕೂಲಿಯಿಂದ ಕೆಲಸ ಮಾಡಿಸುವದು ಮತ್ತು ಸ್ವತಃ ದೂರವಿದ್ದು ನೋಡುವದು ಸ್ವಂತ ಸಾಗುವಳಿ ಆಗುವದಿಲ್ಲ. ಗೇಣಿಯ ಪ್ರಮಾಣವು ಇಷ್ಟೇ ಎಂದು ನಿರ್ಧರಿಸಬೇಕು. ಗೇಣಿಯ ಪ್ರಮಾಣ ಇಂತಿಷ್ಟು ಎಂದು ಜಾಹೀರ ಮಾಡಿದ್ದು ಒಮ್ಮೆಮ್ಮೆ ರೈತನಿಗೆ ಗೊತ್ತಾಗುವದಿಲ್ಲ. ಇದರ ಲಾಭ ಮಾಲೀಕನು ತೆಗೆದುಕೊಳ್ಳತ್ತಾನೆ. ಮೊದಲಿನಿಂದ ಕೊಡುತ್ತ ಬಂದಿರುವ ಗೇಣಿಯನ್ನು ರೈತನು ಕೊಡುತ್ತ ಹೋಗುತ್ತಾನೆ. ಗೇಣಿಯ ಪ್ರಮಾಣವನ್ನು ಇಳಿದಿದ್ದು ವರದಿಯಲ್ಲಿ ಕಂಡು ಬರುವದಿಲ್ಲ. ಗೇಣಿಯ ಪ್ರಮಾಣವು

ದಾನ್ಯ ರೂಪದಲ್ಲಿ ಇರದೇ ಇಂತಿಷ್ಟು ರಕಮು ಎಂದು ಇರಬೇಕು. ಹಣದ ರೂಪದಲ್ಲಿ ಗೇಣಿಯ ಪ್ರಮಾಣವನ್ನು ನಿಶ್ಚಿತಗೊಳಿಸಬೇಕು. ನಮ್ಮ ಪ್ರದೇಶದಲ್ಲಿ ರಿವಿಜನ್ ಸೆಟ್ಲಮೆಂಟು ಆಗಿಲ್ಲವೆಂಬುದು ನಿಜ ಕಂದಾಯ ಕಡಿಮೆ ಇದೆ. ಲ್ಯಾಂಡ ಅಸೆಸ್‌ಮೆಂಟನ್ನು ಪುನಃ ವಿಮರ್ಶಿಸಬೇಕು. ಜಮೀನಿನ ಕಂದಾಯದ ಎರಡರಿಂದ ಐದರಷ್ಟನ್ನು ಮಾತ್ರ ಗೇಣಿದಾರನು ಮಾಲೀಕನಿಗೆ ಕೊಡಬೇಕೆಂದು ಮುಂಬೈ ಶಾಸನದಲ್ಲಿ ನಿಗದಿ ಮಾಡಿದ್ದು ಸೂಕ್ತವಾಗಿದೆ. ಗೇಣಿ ಎಷ್ಟು ಎಂಬುದನ್ನು ನಿಖರವಾಗಿ ಹಣ ರೂಪದಲ್ಲಿ ಗೊತ್ತು ಮಾಡಬೇಕು. ಇಲ್ಲವಾದರೆ ರೈತ ದಿನ ಪ್ರತಿ ಕೋರ್ಟಗೆ ಅಲೆಯ ಬೇಕಾಗುತ್ತದೆ. ಅದಕ್ಕೆ ಈ ದೃಷ್ಠಿಯಿಂದ ಒಂದು ನಿಶ್ಚಿತ ಮೊತ್ತವನ್ನು ಗೇಣಿದಾರರಿಗೆ ನಿರ್ದಿಷ್ಟವಾಗಿ ಕೊಡದ ಹೊರತು ರೈತರಿಗೆ ತೊಂದರೆ ತಪ್ಪಿದಲ್ಲವೆಂದು ಹೇಳುತ್ತೇನೆ. ಈ ಟೆನೆನ್ಸಿ ಕಾಯ್ದೆ ಜಾರಿಗೆ ತರುವದರಲ್ಲಿ ಮತ್ತು ಕಾರ್ಯಾಚರಣೆ ಮಾಡುವದರಲ್ಲಿ ಅನೇಕ ತೊಂದರೆಗಳು ಬಂದಿರುವದು ನಮ್ಮ ಅನುಭವದಲ್ಲಿ ಗೊತ್ತಾಗಿದೆ. ಮುಂಬೈಯಲ್ಲಿ ಈ ಕಾನೂನನ್ನು ಜಾರಿಗೆ ತರುವ ಕೆಲಸವನ್ನು ಅಧಿಕಾರಿಗಳ ಕೈಗೆ ಕೊಟ್ಟಿರುವದರಿಂದ ಈ ಗೇಣಿದಾರರ ಕಾಯಿದೆಯನ್ನು ಜಾರಿಗೆ ತರುವಾಗ ಕರಪ್ಷನ್ ಹೆಚ್ಚಾಗಿರುತ್ತದೆ. **ಆದ್ದರಿಂದ ರೆವ್ಹನ್ಯೂ ಅಧಿಕಾರಿಗಳ ಕೈಗೆ ಈ ಕಾನೂನನ್ನು ಕೊಡಬಾರದೆಂದು ಒಂದು ಮಾತನ್ನು ಹೇಳುತ್ತೇನೆ. ಜತ್ತಿ ಸಮಿತಿಯವರು ಇದನ್ನು ಪೂರ್ಣವಾಗಿ ವಿಚಾರ ಮಾಡಿಲ್ಲ.** ಇದು ಪುನಃ ರೆವ್ಹನ್ಯೂ ಅಧಿಕಾರಿಗಳ ಕಡೆಗೆ ಉಳಿಯುತ್ತದೆ. ಇದನ್ನು ಕಾರ್ಯಾಚರಣೆಗೆ ತರುವಾಗ ದಿವಾಣಿ ಕೋರ್ಟಿಗೆ ಒಪ್ಪಿಸಿದ್ದರೆ ಬಹಳ ಚೆನ್ನಾಗಿತ್ತು. ಇದನ್ನು ಪೂರ್ಣ ವಿಚಾರ ಮಾಡಿ ತರಬೇಕಾಗಿತ್ತು. ಇದನ್ನು ಸಿವ್ಹಿಲ್ ಕೋರ್ಟಿಗೆ ಒಪ್ಪಿಸಿದ್ದರೆ ಬಹಳ ನೆಟ್ಟಗಿತ್ತು ಎಂದು ನನ್ನ ನಿಶ್ಚಿತ ಅಭಿಪ್ರಾಯ.

# ಅನ್ನ-ಬಟ್ಟೆ-ವಸತಿ

ಪಂಚವಾರ್ಷಿಕ ಯೋಜನೆ ಮೇಲಿನ ಚರ್ಚೆ

**ಸಾಮಾನ್ಯ ಜನತೆಗೆ ಅನ್ನ ಬಟ್ಟೆ ವಸತಿ ವ್ಯವಸ್ಥೆ, ಶಿಕ್ಷಣ ಸೌಲಭ್ಯ, ಸೂಕ್ತ ಸಂಪರ್ಕ ಸೌಕರ್ಯ, ಕಲ್ಪಿಸಿದಾಗ ಅಷ್ಟೇ ಪಂಚವಾರ್ಷಿಕ ಯೋಜನೆ ಯಶಸ್ವಿಯಾಗುತ್ತದೆ. ಯೋಜನೆ ಮೂಲ ಸೆಕ್ಯೂಲರ್ ಸ್ಟೇಟ್ಸ್, ಜಾತ್ಯಾತೀತ ರಾಷ್ಟ್ರ ನಿರ್ಮಾಣ - ಸಮಾಜವಾದಿ ಸಮಾಜ ರಚನೆ, ದುಡಿಯುವವನಿಗೆ ಹೊರ ದೊಡೆತನ ಸಿಗದಿದ್ದಲ್ಲಿ, ಗುಡಿಸಲಲ್ಲಿರುವ ದಟ್ಟ ದರೀದ್ರರಿಗೆ ಸಹಾಯ ಮುಟ್ಟದಿದ್ದಲ್ಲಿ - ನಮ್ಮ ಯೋಜನೆ ನಿರರ್ಥಕವೆಂದು ನಂಬಿದ್ದ ಪಂಚಗಾವಿ - ನೆನೆಗುದಿಗೆ ಬಿಟ್ಟ ನೀರಾವರಿ ಯೋಜನೆಗಳು, ತೆವಳುತ್ತಿರು ಅನುಷ್ಠಾನ ಕಾರ್ಯಗಳು, ನಿರುದ್ಯೋಗ, ಶಿಕ್ಷಣ , ಸಾರಿಗೆ, ಕೃಷಿ ಅಭಿವೃದ್ಧಿ, ಘಟಪ್ರಭಾ ಮೇಲ್ದಂಡೆ ಯೋಜನೆ ಕುರಿತು ತಮ್ಮ ನಿಖರವಾದ ವಿಚಾರ ವಾದಗಳನ್ನು ಪರಿಣಾಮಕಾರಿಯಾಗಿ ಮಂಡಿಸುವರು.**

ಪಂಚವಾರ್ಷಿಕ ಯೋಜನೆ ಬಡಜನರ ಹಿತರಕ್ಷಣೆ ಸ್ವಾಮಿ, ನಾಲ್ಕನೆಯ ಪಂಚವಾರ್ಷಿಕ ಯೋಜನೆಯ ಮೊದಲನೆಯವಾರ ಈಗಾಗಲೇ ಕಳೆದು ಹೋಗಿದೆ. ಮೊದಲನೆಯ ವಾರ 500 ಕೋಟಿ ರೂಪಾಯಿ ಯೋಜನೆ ಇದ್ದದ್ದು 537 ಕೋಟಿ ರೂಪಾಯಿಗೆ ಏರಿಸಿದ ಒಂದು ವಾದವನ್ನು ಸರ್ಕಾರ ನಮ್ಮ ಮುಂದೆ ಇಟ್ಟಿದೆ. ಮೊದಲನೆಯ ವಾರದಲ್ಲಿ ಕೇಂದ್ರದಲ್ಲಿ ನಡೆಯುತ್ತ ಇರುವದನ್ನು ನೋಡಿದರೆ, ಯೋಜನೆಗಳು ಎಷ್ಟರ ಮಟ್ಟಿಗೆ ಇದೇ ಸ್ಥಿತಿಯಲ್ಲಿ ಉಳಿಯುತ್ತವೆ ಎನ್ನುವರು ಸಂಶಯದ ಮಾತಾಗಿದೆ. ಕೇಂದ್ರದ ವಿದ್ಯಾ ಇಲಾಖೆಯಲ್ಲಿ ಒಂದು ದೊಡ್ಡ ಕಡಿತ ಆಗಿರುವದನ್ನು ಈಗ ತಾನೇ ಪೇಪರಿನಲ್ಲಿ ನೋಡಿದಾಗ ಮಾಡಿದ ವ್ಯವಸ್ಥೆ ಎಷ್ಟರ ಮಟ್ಟಿಗೆ ಉಳಿಯುತ್ತದೆ. ಎನ್ನುವದು ಸಂಶಯದ ಮಾತಾಗಿದೆ. ಕೆಲವು ಮಟ್ಟಿಗೆ ಯೋಜನೆ ಮುಖ್ಯವಾಗಿ ರೈತರ ಪರಿಸ್ಥಿತಿ ಸುಧಾರಿಸುವದಕ್ಕೆ ಮಾಡಿದ್ದು ಆಗಿದೆ ಎಂದು ಹೇಳುತ್ತಾ ಇದ್ದಾರೆ ಆ ಪ್ರಕಾರ ಯೋಜನೆಗಳಲ್ಲಿ ಕೆಲವು ಬದಲಾವಣೆಗಳನ್ನು ಮಾಡಿ ಅವುಗಳನ್ನು ಸರ್ಕಾರ ನಮ್ಮ ಮುಂದೆ ಇಟ್ಟಿದೆ ಒಕ್ಕಲುತನ ನೋಡಿದರೆ 3800 ಲಕ್ಷ ಇದ್ದದ್ದು 31 $^{1}/_{2}$ ಲಕ್ಷಕ್ಕೆ ಬಂದಿದೆ ಉತ್ಪಾದನಾ ದೃಷ್ಟಿಯಿಂದ ನೋಡಿದರೆ, ಈ ಒಕ್ಕಲುತನದ ಉತ್ಪಾದನೆಗೆ ಪ್ರಾಧಾನ್ಯತೆ ಕೊಡುತ್ತಾ ಇರುವಾಗ ಈ ಬಾಬ್ತಿನಲ್ಲಿ

ಕಡಿತ ಏತಕ್ಕೆ ಆಗಬೇಕು ಎನ್ನುವದು ತಿಳಿಯದ ಮಾತು ಎರಡನೆಯ ಬಾಬ್ತು ಮೈನರ್ ಇರಿಗೇಶನ್ ತೆಗೆದುಕೊಂಡರೆ ಅದರಲ್ಲಿ ಸಾಕಷ್ಟು ಹಣ ಪೂರೈಸಲಾಗಿದೆ 29 ಕೋಟಿ ರೂಪಾಯಿಯಿಂದ 40 ಕೋಟಿ ರೂಪಾಯಿಗೆ ಏರಿಸಲಾಗಿದೆ. ಇದು ಮಹತ್ವದ ವಿಷಯ ಸಣ್ಣ ನೀರಾವರಿ ಯೋಜನೆಗಳು ಎಲ್ಲಾ ಕಡೆಗೂ ಸಾಧ್ಯವಿವೆ. ಎಲ್ಲರಿಗೂ ತ್ವರಿತವಾಗಿ ಫಲ ಕೊಡುವದು ಮೈನರ್ ಇರಿಗೇಶನ್ ಈ ಬಾಬಿಗೆ 40 ಕೋಟಿ ರೂಪಾಯಿ ಮುಂದಿನ ವರ್ಷದಲ್ಲಿ ಖರ್ಚು ಮಾಡಲು ಶಕ್ಯ ಆದ್ದರಿಂದ ಒಕ್ಕಲುತನದ ಉತ್ಪಾದನೆ ಜಾಸ್ತಿ ಆಗಿ ಕಾರ್ಖಾನೆಗಳಿಗೆ ಹತ್ತಿ ಮುಂತಾದ ಕಚ್ಚಾ ಮಾಲುಗಳು ಉತ್ಪಾದನೆಗೆ ಸಹಾಯ ಆಗುವದರಲ್ಲಿ ಸಂದೇಹವೇ ಇಲ್ಲ ಇದೇ ದೃಷ್ಟಿಯಿಂದ ನೋಡಿದರೆ ಮೇಜರ ಮತ್ತು ಮೀಡಿಯಮ್ ಇರಿಗೇಶನ್ ಬಗ್ಗೆ ಕೊಟ್ಟ ಹಣ 80 ಕೋಟಿ ರೂಪಾಯಿ ಮಾತ್ರ ಏತಕ್ಕೂ ಸಾಲದು ಎನ್ನುವ ಮಾತನ್ನು ನಾನು ಇಲ್ಲಿ ಒತ್ತಿ ಹೇಳಬಯಸುತ್ತೇನೆ. ಅನೇಕ ಯೋಜನೆಗಳು ಬಹಳ ಹಳೆಯ ಯೋಜನೆಗಳು, ಬಹಳ ದಿವಸಗಳಿಂದ ಜನತೆ ಅವುಗಳ ಮೇಲೆ ತಮ್ಮ ಜೀವನದ ಭವಿಷ್ಯವನ್ನು ಆಧಾರ ಮಾಡಿಕೊಂಡು ಅನೇಕ ರೀತಿಯ ಕನಸನ್ನು ಕಾಣುತ್ತ ಬಂದಿದ್ದಾರೆ. ನಮ್ಮ ಪಕ್ಕದಲ್ಲಿ ಘಟಪ್ರಭಾ ಯೋಜನೆಯನ್ನು ತೆಗೆದುಕೊಂಡರೆ ಅದು ಮೊದಲು ರೂಪಿತವಾದದ್ದು 1852 ರಲ್ಲಿ 1853 ರಲ್ಲಿ ಸರ್ವೆ ಆಗಿದೆ 1857 ರಲ್ಲಿ ಸಣ್ಣ ಮಟ್ಟಿಗೆ ಕಟ್ಟಿದರೂ ಖರ್ಚಾದುದು ಕೇವಲ 15 ಲಕ್ಷ ರೂಪಾಯಿಗಳು ಆದರೆ ಕಳೆದ 4-5 ವರ್ಷಗಳ ಬಜೆಟ್ ನೋಡಿದರೆ, ಘಟಪ್ರಭಾ ಕೆನಾಲ್ ಸುಮಾರು 15 ರಿಂದ 20 ಲಕ್ಷ ರೂಪಾಯಿವರೆಗೆ ಆದಾಯ ಬರುತ್ತಾ ಇದೆ. ಈ ಘಟಪ್ರಭಾ ಯೋಜನೆಯ ಕಾಲುವೆ ಅಗಿಯಲಿಕ್ಕೆ 8 ಕೋಟಿ ರೂಪಾಯಿ ಖರ್ಚು ಮಾಡಲಾಗಿದೆ. $1^1/_2$ ಲಕ್ಷ ಎಕರೆಗೆ ನೀರಿನ ಸೌಲಭ್ಯವನ್ನು ಕೊಡಲಾಗಿದೆ. ಯಾಕೆಂದರೆ ಜಮೀನು ಏರಿಳಿತ ಇದ್ದು ಅದನ್ನು ಸಮನಾಗಿ ಮಾಡಿ ಕಾಲುವೆ ವ್ಯವಸ್ಥೆ ಮಾಡಬೇಕಾದರೆ ಕೆಲವು ದಿವಸಗಳು ಹಿಡಿಯುತ್ತವೆ. ಘಟಪ್ರಭಾ ಜನರು ಲಾಭ ಪಡೆಯುತ್ತಿದ್ದಾರೆ. ದುರ್ದೈವವಶಾತ್ ಹೇಳಬೇಕಾದರೆ ಮಳೆಗಾಲದಲ್ಲಿ ನೀರನ್ನು ಹೊಳೆಯಲ್ಲಿ ಬಿಡುವದರಲ್ಲಿ ನೀರಾವರಿಗೆ ಬೇಕಾದಷ್ಟು ನೀರು ಸಂಗ್ರಹ ಮಾಡಲು ಅವಕಾಶವಾಗಿಲ್ಲ. ಇಂತಹ ಬರಗಾಲದಲ್ಲಿ ಯೂ ಕಷ್ಟಪಟ್ಟು ಅಲ್ಲಿಯ ರೈತರು ಇಡೀ ದೇಶಕ್ಕೆ ಬೇಕಾದ ಹೈಬ್ರಿಡ್ ಮೇಜ ಮುಂತಾದ ಉತ್ತಮ ತರದ ಬೆಳೆಯನ್ನು ತೆಗೆದು ಹೆಚ್ಚಿನ ಲಾಭವನ್ನು ದೇಶಕ್ಕೆ ಕೊಡುತ್ತಿದ್ದಾರೆ. ಆದರೆ ಮೊದಲನೆ ಪಂಚವಾರ್ಷಿಕ ಯೋಜನೆಯಲ್ಲಿ ಈ ಯೋಜನೆಯ ಕಾಲವೆ ತೆಗೆಯುವದು ಅಷ್ಟೇ ಇತ್ತು ಎರಡನೆಯ ಯೋಜನೆಯಲ್ಲಿ ಘಟಪ್ರಭಾ ಯೋಜನೆಯ ಸೆಕೆಂಡ ಸ್ಟೇಜ ಎಂದರೆ ಕಾಲುವೆಯನ್ನು 41 ಮೈಲಿಯಿಂದ 73 ಮೈಲಿನವರೆಗೆ ಪೂರ್ಣ ವಿಸ್ತರಿಸಿದೆ. ಐದು ಕಾಲುವೆಗಳನ್ನು ಪೂರ್ಣ

ಮುಗಿಸಿದ್ದಾರೆ. ಇನ್ನು ಒಂದು ಸ್ಟೋರೇಜ ಡ್ಯಾಂ ಕಟ್ಟಬೇಕಾಗಿತ್ತು. ಈ ಯೋಜನೆ ಹಿಂದಕ್ಕೆ ಬಿತ್ತು. ದುರ್ದೈವವಶಾತ್ ಎರಡನೆಯ ಯೋಜನೆಯ ಸಮಯದಲ್ಲಿ, **ನಮ್ಮ ಪ್ರಾಂತ್ಯ ಹೊಸ ಪ್ರಾಂತ್ಯ ಆದಕಾರಣ ಅದರಿಂದ ನಮ್ಮ ಘಟಪ್ರಭಾ ಯೋಜನೆಗೆ ಹೊಡೆತ ಬಿತ್ತು. ಘಟಪ್ರಭಾ ಯೋಜನೆಯ ಕಮಾಂಡ 11 ಲಕ್ಷ ಎಕರೆ ಇತ್ತು ಅದರಲ್ಲಿ ಒಂದು ಲಕ್ಷ ಪೂರ್ತಿ ಕಳೆದುಕೊಂಡೆವು 10 ಲಕ್ಷಕ್ಕಿಂತ ಹೆಚ್ಚು ಕಮಾಂಡ ಏರಿಯಾ ಬರಬೇಕಿತ್ತು. ಅದರಲ್ಲಿ ನಮಗೆ ಇರಿಗೇಷನ್ ಇರತಕ್ಕದ್ದು ಸುಮಾರು ಆರು ಲಕ್ಷ ಆದರೂ ಈ ಯೋಜನೆ ಪೂರ್ತಿ ಮುಗಿದರೆ ಎಲ್ಲಿ ಜಲಾಶಯ ಕಟ್ಟಬೇಕಾಗಿತ್ತೋ ಆ ಪ್ರದೇಶ ಮಹಾರಾಷ್ಟ್ರ ಸರಕಾರಕ್ಕೆ ಹೋದ ಕಾರಣ ಅವರಿಂದ ನಮಗೆ ಸರಿಯಾದ ಸ್ಥಳ ಸಿಕ್ಕಲಿಲ್ಲ. ಆದ್ದರಿಂದ ಹಿಡಕಲ್ ಡ್ಯಾಂ ಅನ್ನು ಕಟ್ಟುವ ಯೋಜನೆ ಸರ್ಕಾರ ಕೈಕೊಂಡದ್ದು ಇದು ಮೂರನೇ ಯೋಜನೆಯಲ್ಲಿ ಮುಗಿಯುತ್ತೆಂದು ಭಾವಿಸಿದ್ದೇವು. ಆದರೆ ಅದು ಒಂದು ಮಟ್ಟಕ್ಕೆ ಬರಲಿಲ್ಲ. ಅದರ ಫೌಂಡೇಶನ್ ಕೂಡ ಇದುವರೆಗೆ ಹಾಕಿಲ್ಲ ಎಂದು ಶೋಕಿಸತಕ್ಕ ಮಾತಾಗಿದೆ.** ಅದರಲ್ಲಿ ಕೆಲವು ದೋಷಗಳು ಇವೆ. ಅನೇಕ ಕಾರಣಗಳಿಂದ ಮುಂದಕ್ಕೆ ಹಾಕುತ್ತ ಬಂದಿದ್ದಾರೆ ಕಳೆದ ಸುಮಾರು 6-7 ವರ್ಷಗಳಿಂದ ಅಲ್ಲಿ ಅಸಂಖ್ಯಾತ ಸ್ಟಾಫ್ ಇಡಲಾಗಿದೆ. ಇದರಿಂದ ರೈತರಿಗೆ ಭಾರ ಹೆಚ್ಚಾಗುತ್ತದೆಯೇ ಹೊರತು ಸಾಕಾದಷ್ಟು ಪ್ರಯೋಜನೆಯಾಗುವದಿಲ್ಲ ಎಂದು ಹೇಳಬಯಸುತ್ತೇನೆ. ನಾಲ್ಕನೆಯ ಯೋಜನೆಯಲ್ಲಾದರೂ ಈ ಯೋಜನೆಯನ್ನು ಪೂರ್ಣ ಮುಗಿಸಲು ವ್ಯವಸ್ಥೆ ಮಾಡುವರೆಂಬ ನಿರೀಕ್ಷೆಯಿತ್ತು. ಆದರೆ ಇದರಲ್ಲಿ ಪ್ರತಿ ವರ್ಷಕ್ಕೆ ಕೇವಲ 2 ಕೋಟಿ 40 ಲಕ್ಷ ರೂಪಾಯಿಗಳನ್ನು ಮಾತ್ರ ಒದಗಿಸಲಾಗಿದೆ. ಮೊದಲನೆಯ ವರ್ಷ ಕೇಂದ್ರದಲ್ಲಿ ವಿದ್ಯಾಖಾತೆಗೆ ಖೋತಾ ಮಾಡಲಾಗಿದೆ. ಈ ವರ್ಷದ ಬಡಜೆಟ್‌ನಲ್ಲಿ ಬಹಳ ಕಡಿಮೆ ಅಂದರೆ 50 ಲಕ್ಷ ರೂಪಾಯಿಗಳನ್ನು ಮಾತ್ರ ಒದಗಿಸಲಾಗಿದೆ. ಪೂರ್ಣ ಹಣವನ್ನು ಕೊಟ್ಟಿಲ್ಲ ಇದೂ ಕೂಡ ಖರ್ಚಾಗುವದೋ ಇಲ್ಲವೋ ಎಂಬ ಶಂಕೆ ಇದೆ ಹೀಗಾಗಿ ಈ ಯೋಜನೆಯಿಂದ ಕೇವಲ ಸರಕಾರಿ ನೌಕರರಿಗಾಗಿ ಸಂಬಳಕ್ಕೆ ಹೆಚ್ಚು ಹೋಗುತ್ತಿದೆಯೇ ಹೊರತು ರೈತರಿಗೆ ಹೆಚ್ಚು ಭಾರ ಆಗುವ ಸಂಭವವಿದೆಯೇ ಹೊರತು ಯೋಜನೆ ತೀವ್ರವಾಗಿ ಆಗುವ ಭರವಸೆ ಇಲ್ಲ. ಮೊದಲನೆಯ ವರ್ಷ ಸುಮಾರು 18 ರಿಂದ 20 ಕೋಟಿ ರೂಪಾಯಿ ಖರ್ಚು ಮಾಡಿದರೆ ಹಿಡಕಲ್ ಜಲಾಶಯ ಒಂದು ಹಂತಕ್ಕೆ ಬಂದುದರಿಂದ ನೀರಿನ ಉಪಯೋಗ ಮಾಡಿಕೊಳ್ಳಲು ಸಾಧ್ಯವಾಗುತ್ತಿದೆ. ಇದು ಎಡದಂಡೆಯಿಂದ ಮಾತ್ರ ಇಷ್ಟಾದರೆ ಸುಮಾರು ಎರಡೂವರೆ -ಮೂರು ಲಕ್ಷ ಎಕರೆಗಳಿಗೆ ನೀರು ಸಿಕ್ಕಬಹುದು. ಮಳೆಗಾಲದಲ್ಲಿ ನೀರು ಬಿಟ್ಟರೂ ರೈತರಿಗೆ ಲಾಭವಿಲ್ಲ ಇದು ನೀರಾವರಿ

ಯೋಜನೆಯೇ ಅಲ್ಲ. ಘಟಪ್ರಭಾ ಬಗ್ಗೆ ಅನೇಕರು ಅಪಪ್ರಚಾರ ಮಾಡಿ ರೈತರಿಗೆ ಲಾಭವಿಲ್ಲದಂತಾಗಿದೆ. ಘಟಪ್ರಭಾದಿಂದ ರೈತರಿಗೆ ನೀರೇ ಬೇಕಾಗಿಲ್ಲ ಹಣ ಸುಮ್ಮನೇ ಖರ್ಚಾಗುತ್ತದೆ ಎಂದು ಅನೇಕರು ಹೊರಗಡೆ ಹೇಳುತ್ತಾರೆ. ಇಲ್ಲಿ ಕೂಡ ಹೇಳಿದ್ದಾರೆ. ಉತ್ತರ ಕರ್ನಾಟಕದಲ್ಲಿ ದೊಡ್ಡ ಯೋಜನೆಗಳಾಗಿಲ್ಲ. ರೈತರಿಗೆ ನೀರು ಬೇಕಾಗಿಲ್ಲ ಎಂದೂ ಹೇಳುತ್ತಿದ್ದಾರೆ. ಅಲ್ಲಿ ನೀರಾವರಿ ಸೌಲಭ್ಯ ಯಾವ ರೀತಿ ಇದೆ ಎಂಬುದನ್ನು ಪೂರ್ಣವಾಗಿ ತಿಳಿಯದೆ ಅನೇಕರು ಹೀಗೆ ಹೇಳುವದುಂಟು. ಇದನ್ನು ವಿಚಾರ ಮಾಡಬೇಕು ಮಳೆಗಾಲದಲ್ಲಿ ನೀರನ್ನು ಬಿಟ್ಟರೆ ನೀರಾವರಿ ಬೆಳೆ ಮಾಡಲು ಸಾಧ್ಯವೇ? ಎಂಬುದನ್ನು ನೋಡಬೇಕು ಅಲ್ಲಿ ಡ್ರೈಕ್ರಾಪ್, ಜೋಳ, ಮುಸುಕಿನ ಜೋಳ ಹತ್ತಿ ಬೆಳೆಯಬಹುದು ಒಂದು ವೇಳೆ ನೀರು ಹರಿಸಿದಾಗ, ಒಂದೆರಡು ದಿವಸ ಸತತವಾಗಿ ಪೂರ್ಣವಾಗಿ ಬೆಳೆ ನಷ್ಟವಾಗುತ್ತದೆ. ಇನ್ನೊಂದು ಬೆಳೆ ಕೂಡ ಮಾಡದೇ ಕೂಡುವ ಪರಿಸ್ಥಿತಿ ಬರುತ್ತದೆ. ಆ ಕ್ಷೇತ್ರದಲ್ಲಿ ಮುಂಗಾರು ಬೆಳೆ ಮಾಡಿದ ರೈತ ನಷ್ಟ ಹೊಂದಿ ಹಾನಿಯಾಗುವ ಸಂಭವವಿದೆ. ಯೋಜನೆ ಪೂರ್ಣವಾಗುವ ವರೆಗೆ ಹಾನಿ ಇದೆ. ಅಲ್ಲಿ ರೈತರಿಗೆ ಒಳ್ಳೆ ನೀರಾವರಿ ಅನುಭವವಿದೆ. ಮತ್ತು ಚೆನ್ನಾಗಿ ದುಡಿಯುತ್ತಿದ್ದಾರೆ. ಸಾಕಾದಷ್ಟು ಇರುವ ಅನುಕೂಲದಲ್ಲೇ ಲಾಭ ಪಡೆಯುತ್ತಿದ್ದಾರೆ. ಈಗ ಕೇವಲ 12 ಕೋಟಿ ರೂಪಾಯಿ ಯೋಜನೆಯಲ್ಲಿ ರೈತರಿಗೆ ಲಾಭವಾಗುವದಿಲ್ಲ. ಸುಮಾರು 20 ಕೋಟಿ ರೂಪಾಯಿಗಳನ್ನಾದರೂ ಖರ್ಚು ಮಾಡಿದರೆ ಒಂದು ನೀರಾವರಿ ಮಟ್ಟ ಬರಬಹುದು ಇದರ ಜೊತೆಗೆ ಯಾವ ಬಲದಂಡೆ ಯೋಜನೆ ಇತ್ತು ಅದರಲ್ಲಿ ಈಗಾಗಲೇ ಒಂದು ಲಕ್ಷ ಎಕರೆ ಕಡಿಮೆ ಆಗಿದೆ. ಇದಕ್ಕೆ ಕಾರಣ ಪ್ರಾಂತೀಕರಣ ಮಹಾರಾಷ್ಟ್ರಕ್ಕೆ ಕೆಲವು ಪ್ರದೇಶ ಹೋಗಿ ಈ ರೀತಿಯಾಗಿದೆ. ಜೊತೆಗೆ ಇನ್ನೂವರೆಗೆ ಇಷ್ಟೆಲ್ಲಾ ನೀರಾವರಿ ಸಿಕ್ಕಬೇಕಾದ್ದರಲ್ಲಿ 6-7 ವರ್ಷಗಳಿಂದ ಹಿಂದೆ ಇದ್ದೇವೆ. ಹೀಗಾಗಿ ಅಲ್ಲಿಯ ಜನರಿಗೆ ತೊಂದರೆಯಾಗುತ್ತದೆಯೇ ಹೊರತು ಲಾಭವಾಗಿಲ್ಲ ಇನ್ನೂ ಕೆಲವು ಸರಕಾರಿ ಯೋಜನೆಗಳಿಂದ ಈ ಭಾಗದವರಿಗೆ ಮತ್ತೂ ನಷ್ಟವಾಗಿದೆ. ಸರ್ಕಾರ ಅನೇಕ ಸರ್ಕ್ಯುಲರ್‌ಗಳನ್ನು ಕಳಿಸುತ್ತದೆ. ಅದರ ಪ್ರಕಾರ ದೊಡ್ಡ ನೀರಾವರಿ ಯೋಜನೆ ಕ್ಷೇತ್ರದಲ್ಲಿ ಸಣ್ಣ ನೀರಾವರಿ ಯೋಜನೆ ತೆಗೆದುಕೊಳ್ಳುವಂತಿಲ್ಲ. ಇದರಿಂದಾಗಿ ಸಣ್ಣದೂ ಇಲ್ಲ ದೊಡ್ಡದೂ ಇಲ್ಲ. ಹೀಗಾಗಿ ರೈತರಿಗೆ ನೀರಾವರಿಯಿಂದ ಯಾವ ಲಾಭವೂ ಇಲ್ಲ. ಆ ಭಾಗದಲ್ಲಿ ಜನರಿಗೆ ಇನ್ನೂ ಬರಗಾಲವೇ ಅದೇ 8-10 ವರ್ಷಗಳಾದರೂ ಯೋಜನೆಯಾಗದೆ ಬರಗಾಲದಲ್ಲೇ ಇರುವ ಪ್ರಸಂಗವಿದೆ ಹೀಗೆ ಯೋಜನೆ ವಿಳಂಬವಾಗುವದರಿಂದ ಹೆಚ್ಚು ಹಾನಿಯೇ ಹೊರತು ಲಾಭವಾಗುವದಿಲ್ಲ. ಇದೇ ಪ್ರಕಾರ ಮಲಪ್ರಭಾ ಯೋಜನೆ ವಿಷಯದಲ್ಲಿಯೂ ಆಗಿದೆ. 3-4 ವರ್ಷಗಳಿಂದ ಸಾಕಾದಷ್ಟು ಸಿಬ್ಬಂದಿ ಇದೆ

ಫೌಂಡೇಶನ್ ಸ್ಟೋನ್ ಹಾಕಿ ಬಹಳ ದಿನಗಳಾದರೂ ಕೆಲಸವಾಗಿಲ್ಲ ಈಗ ಸ್ವಲ್ಪ ಸ್ವಲ್ಪ ಕೆಲಸ ಪ್ರಾರಂಭವಾಗುವ ಸ್ಥಿತಿ ಇದೆ. ಇದರಿಂದ ರೈತರು ಹೆಚ್ಚು ಪ ಸಂಭವವಿದೆ. ಯಾವ ಯೋಜನೆಯಾಗಲಿ ಸಿಬ್ಬಂದಿಗೆ ಸಂಬಳ ಕೊಟ್ಟು ಕೊಂಡು ಹೆಚ್ಚು ಕಾಲ ತಳ್ಳುವದಕ್ಕಿಂತ ಬೇಗ ಯೋಜನೆ ಕೆಲಸ ಪೂರ್ಣ ಮಾಡಿದರೆ ಅದರಿಂದ ರೈತರಿಗೆ ಹೆಚ್ಚು ಲಾಭವಾಗುತ್ತದೆಂದು ಹೇಳುತ್ತೇನೆ.

ಪವರ್ ವಿಚಾರ ತೆಗೆದುಕೊಂಡರೆ ಅದನ್ನು ಖೋತಾ ಮಾಡಲಾಗಿದೆ. 12¹/₂ ಕೋಟಿ ರೂಪಾಯಿಗಳನ್ನು ಆ ಭಾಗದಲ್ಲಿ ಕಡಿಮೆ ಮಾಡಲಾಗಿದೆ. ಇದರಿಂದ ರೈತರಿಗೆ ಇರಿಗೇಷನ್ ಪಂಪಸೆಟ್ ಕೊಡುವದು, ಸಾಕಾದಷ್ಟು ವಿದ್ಯುತ್ ಒದಗಿಸುವದು ಇತರ ಸೌಲಭ್ಯ ಒದಗಿಸುವದು ಮುಂತಾದ ವಿಚಾರಗಳಲ್ಲಿ ತೊಂದರೆಯಾಗಬಹುದು. ಇದಲ್ಲದೆ ವ್ಹಿಲೇಜ ಇಂಡಿಸ್ಟ್ರಿ ಮತ್ತು ಸ್ಮಾಲ್ ಇಂಡಸ್ಟ್ರೀಜ್‌ಗಳಿಗೆ ಬೇಕಾಗುವ ಹಣ ಕಡಿಮೆ ಮಾಡಲಾಗಿದೆ. ಆದರೆ ರಸ್ತೆಗಳಿಗೆ ಹೆಚ್ಚು ಹಣ ಕೊಡಲಾಗಿದೆ. 2800 ಲಕ್ಷ ಕೊಡಲಾಗಿದೆ. ಇದರಿಂದ 3 ಕೋಟಿ ರೂಪಾಯಿ ಹೆಚ್ಚು ಹಣ ದೊರೆಯುವದು. ಆದರೆ ಸುಮ್ಮನೆ ಎಲ್ಲಾ ಕಡೆ ರಸ್ತೆ ಮಾಡುವದರಿಂದ ಪ್ರಯೋಜನವಿಲ್ಲವೆಂಬ ಭಾವನೆ ಕೆಲವರಲ್ಲಿದೆ. ಇಂದಿನ ಸಮಾಜದಲ್ಲಿ ಪ್ರತಿ ಹಳ್ಳಿಗೂ ರಸ್ತೆ ಮಾಡಬೇಕಾಗಿದೆ. ಪ್ರತಿ ಹಳ್ಳಿಗೂ ಒಂದಾದರೂ ರಸ್ತೆ ಇಲ್ಲದಿದ್ದರೆ ಸಾರಿಗೆ ಸಂಪರ್ಕ ಇಲ್ಲದಿದ್ದರೆ ಯಾವುದೇ ರೀತಿಯ ಸೌಕರ್ಯ ಸಿಕ್ಕುವದಿಲ್ಲ ಬೆಳೆದ ಮಾಲನ್ನು ಸಾಗಿಸುವದಕ್ಕೆ ಅಥವಾ ವ್ಯವಸಾಯ ಮುಂತಾದ ಕೆಲಸಗಳಿಗೆ ಬೇಕಾದ ಸಾಮಗ್ರಿಗಳನ್ನು ತರುವದಕ್ಕೆ ವ್ಯಾಪಾರ ಮುಂತಾದ ಕೆಲಸಗಳಿಗೆ ರಸ್ತೆ ಸೌಕರ್ಯ ಅವಶ್ಯಕ ರೈತರಿಗೆ ಸೌಲಭ್ಯ ದೊರೆಯಬೇಕಾದರೆ ರಸ್ತೆ ಅವಶ್ಯಕ. 4 ನೇಯ ಪಂಚವಾರ್ಷಿಕ ಯೋಜನೆ ಮುಗಿಯುವದರೊಳಗೆ ಪ್ರತಿಯೊಂದು ಊರಿಗೂ ಜನರಿಗೆ ಉತ್ತಮವಾದ ಸೌಲಭ್ಯ ದೊರಕಿಸಿದಂತಾಗುತ್ತದೆ. ಮದ್ರಾಸಿನಲ್ಲಿ ಪ್ರತಿಯೊಂದು ಊರಿಗೂ ಒಂದಾದರೂ ರಸ್ತೆ ಮಾಡಿದ್ದಾರೆ.

ಈ ವಿಚಾರದಲ್ಲಿ ನಾವು ಹಿಂದುಳಿದಿದ್ದೇವೆ. ನಮ್ಮ ಕಡೆ ಹಳ್ಳಿಗಳಿಗೆ ಒಂದಾದರೂ ರಸ್ತೆಯಿಲ್ಲ ಹೀಗಾಗಿ ಆ ಭಾಗಗಳು ಹಿಂದುಳಿದಿವೆ. ಆ ಊರುಗಳಿಗೆ ಯಾವ ರೀತಿಯ ಸೌಲಭ್ಯವನ್ನು ಕೊಡುವದಕ್ಕಾಗುವದಿಲ್ಲ ಈ ರೀತಿ ಯಾದರೆ ಜನರಿಗೆ ಕಷ್ಟ ಇದಕ್ಕೆಲ್ಲ ಯೋಜನೆಯಲ್ಲಿ ಅವಕಾಶ ಮಾಡದಿದ್ದರೆ ಜನರಿಗೆ ಯಾವ ಸೌಲಭ್ಯವೂ ಸಿಕ್ಕುವುದಿಲ್ಲ. **ಮುಖ್ಯವಾಗಿ ಜನರಿಗೆ ಶಿಕ್ಷಣ, ಸರಿಯಾದ, ಸಾರಿಗೆ ಸಂಪರ್ಕ ಸೌಕರ್ಯ, ಅನ್ನ ಬಟ್ಟೆ, ವಸತಿ, ಇವುಗಳ ವ್ಯವಸ್ಥೆ ಮಾಡಿದರೆ ಯೋಜನೆ ಯಶಸ್ವಿಯಾಗುತ್ತಿದೆ. ಮುಂದೆ ಪ್ರತಿ ಸಾಧ್ಯವಾಗುತ್ತದೆ ಶಿಕ್ಷಣ**

**ವಿಚಾರದಲ್ಲಿ ಸಾಕಷ್ಟು ವ್ಯವಸ್ಥೆ ಮಾಡಿಲ್ಲ ಇನ್ನೂ ಹೆಚ್ಚಿನ ವ್ಯವಸ್ಥೆ ಆಗಬೇಕಾಗಿದೆ.** ಇದಕ್ಕೆ ಹೆಚ್ಚು ಹಣ ಒದಗಿಸಲಾಗಿದೆ. ಮುಖ್ಯವಾಗಿ ಎಲ್ಲಾ ಮಕ್ಕಳಿಗೆ ಶಿಕ್ಷಣ ದೊರೆಯಬೇಕಾದರೆ ಗುರು ಇರಬೇಕು ಇದು ನಾಲ್ಕನೆಯ ಯೋಜನೆಯಲ್ಲಿ ಕಾರ್ಯಗತವಾಗುವದೆಂದು ನಾನು ಭಾವಿಸುತ್ತೇನೆ ನಮ್ಮ ರಾಜ್ಯದಲ್ಲಿ ಪುಕ್ಕಟೆ ಮಾಧ್ಯಮಿಕ ಶಿಕ್ಷಣ ದೊರೆಯುವಂತೆ ಮಾಡಿ ಒಂದು ಪ್ರಗತಿ ಪದ ಹೆಜ್ಜೆ ಇಟ್ಟಿದ್ದಾರೆ. ಇದರಿಂದ ಎಲ್ಲ ಮಕ್ಕಳಿಗೆ ಶಿಕ್ಷಣ ಸೌಲಭ್ಯವು ಸಿಕ್ಕುವಂತೆ ಆಗುತ್ತದೆಯೆಂದು ನಾನು ಭಾವಿಸುತ್ತೇನೆ. ಹೈಸ್ಕೂಲಗಳ ವಿಚಾರದಲ್ಲಿ ಹೇಳುವುದಾದರೆ ಅನೇಕ ಕಡೆ ಸಾರ್ವಜನಿಕರು ಮುಂದೆ ಬಂದು ಹೈಸ್ಕೂಲಗಳನ್ನು ತೆರೆಯುತ್ತಿದ್ದಾರೆ. ಇವುಗಳ ಆಡಳಿತ ಸುಧಾರಣೆ ಆಗದಿದ್ದರೆ ಜನರಿಗೆ ತೊಂದರೆ ಆಗುತ್ತದೆ. ಇವುಗಳಿಗೆ ಕೊಡುವ ಅನುದಾನ ಸಕಾಲಕ್ಕೆ ದೊರೆಯುವದಿಲ್ಲ. ವರ್ಷದ ಕೊನೆಗೆ ಅಂದರೆ ಮಾರ್ಚ ತಿಂಗಳ 28 ರಿಂದ 31 ನೆಯ ತಾರೀಖಿನವರೆಗೆ ಪ್ರತಿಯೊಂದು ಹೈಸ್ಕೂಲಿನ ಹೆಡ್ ಮಾಸ್ತರರು, ಕಾಲೇಜ ಪ್ರಿನ್ಸಿಪಾಲರು, ಸಂಘ ಸಂಸ್ಥೆಗಳ ಮುಖ್ಯಸ್ಥರು ಬೆಂಗಳೂರಲ್ಲಿರುವದು ಕಂಡು ಬರುತ್ತದೆ. ಈ 2-3 ದಿವಸಗಳಲ್ಲಿ ಹಣ ತೆಗೆದುಕೊಳ್ಳದಿದ್ದರೆ ಹಣ ಲ್ಯಾಪ್ಸ ಆಗುತ್ತದೆ. **ಗ್ರ್ಯಾಂಟನ್ನು ಸರಿಯಾಗಿ ಸಕಾಲದಲ್ಲಿ ಕೊಡದೆ ಇರುವದರಿಂದ ಜನರಿಗೆ ತೊಂದರೆ ಆಗುತ್ತದೆ. ಇದಲ್ಲದೆ ಹಣ ಹೆಚ್ಚಿನ ಭಾಗ ಪ್ರವಾಸಕ್ಕಾಗಿ ಖರ್ಚಾಗುತ್ತದೆ. ಅನೇಕ ಕಮೀಟಿ, ಕಾನ್ಫರನ್ಸ, ಸೆಮಿನಾರ್ಸ ಕರೆಯುತ್ತಾರೆ. ದಿನ ನಿತ್ಯ ಇದೊಂದು ಕೆಲಸವಾಗಿದೆ. ಇದರಿಂದ ಸಂಘ ಸಂಸ್ಥೆಗಳನ್ನು ನಡೆಸುವದು ಕಷ್ಟವಾಗಿದೆ. ಇದರಿಂದ ಸರ್ಕಾರದ ಕೆಲಸಕ್ಕೂ ಅಡಚಣೆ ಬರುತ್ತದೆ. ಮೇಲಿಂದ ಮೇಲೆ ಸಭೆ ಸಮ್ಮೇಳನ ಮಾಡುವದರಿಂದ ಅವರಿಗೆ ಅಷ್ಟೊಂದು ಅನುಕೂಲವಾಗುವದಿಲ್ಲ ಅವರಿಗೆ ಏನಾದರೂ ತಿಳಿಸುವದು ಇದ್ದರೆ ಒಂದು ಪರಿಪತ್ರ, ಸರ್ಕ್ಯುಲರ್ ಹೊರಡಿಸಿ ಇಂಥ ಕೆಲಸ ಮಾಡಬೇಕು ಎಂದು ಹೇಳಿದರೆ** ಸಾಕು. ಟ್ರೇನಿಂಗ್ ಕ್ಲಾಸ್ ತೆಗೆದು ಹಾಗೂ ಎಲ್ಲರೂ ಸಭೆಗೆ ಬಂದು ಕಲಿತು ಹೋಗಬೇಕು ಎಂದು ಹೇಳುವದು ಸರಿಯಲ್ಲ. ಇದು ಬೆಂಗಳೂರಿನಲ್ಲಿ ಅಷ್ಟೇ ನಡೆಯುತ್ತದೆ ಎಂದು ಅಲ್ಲ ಪ್ರತಿ ತಾಲೂಕು, ಜಿಲ್ಲೆ, ಡಿವ್ಹಿಜನ್‌ಗಳಲ್ಲಿ ಎಲ್ಲಾ ಮಟ್ಟದಲ್ಲಿ ಇಂಥ ವ್ಯವಸ್ಥೆ ಇರುತ್ತದೆ. ಇದರಿಂದ ಸಂಘ ಸಂಸ್ಥೆಗಳ ಹಣ, ಕೋ-ಆಪ್‌ರೇಟಿವ್ ಸೊಸೈಟಿಗಳ ಹಣ, ಪಂಚಾಯತಿಗಳ ಹಣ ಬಹಳಷ್ಟು ಖರ್ಚಾಗುತ್ತದೆ. ಈ ವ್ಯವಸ್ಥೆ ಆದಷ್ಟು ಬೇಗ ಸುಧಾರಣೆಯಾದರೆ ಒಳ್ಳೆಯದು ಈಗಿನ ಸಂದರ್ಭಗಳಲ್ಲಿ ಸಂಘ ಸಂಸ್ಥೆಗಳಿಗೆ ಕೋ-ಆಪ್‌ರೇಟಿವ್ ಸಂಸ್ಥೆಗಳಿಗೆ ಪಂಚಾಯತಿ ಸಂಸ್ಥೆಗಳಿಗೆ ಹೆಚ್ಚೆಚ್ಚು ಹಣ ಕೊಡಲಾಗುತ್ತದೆ. ಆದರೆ ಇವುಗಳ ಮೇಲೆ ಆಡಿಟ್ ಆಗುವುದು ಬಹಳ ಕಡಿಮೆಯಾಗಿದೆ ಎಂದು ಹೇಳಬಹುದು. ಸರಿಯಾದ ಆಡಿಟ್

ಬಿಗುವು ಇಲ್ಲದ ಮೂಲಕ ನಾಲ್ಕು ಐದು ವರ್ಷಗಳಲ್ಲಿ ಹಣ ಅಫರಾ ತಫರಾ ಆದದ್ದು ಅನೇಕ ಸಲ ಬೆಳಕಿಗೆ ಬರುವುದಿಲ್ಲ. ಈ ರೀತಿ ನಡೆಯುವುದರಿಂದ ಜನರಿಗೆ ಎಷ್ಟು ಲಾಭ ದೊರೆಯಬೇಕೋ ಅಷ್ಟು ಲಾಭ ಸಿಕ್ಕುತ್ತಿಲ್ಲ. ಈ ಯೋಜನೆಯಲ್ಲಿ ಇದರ ಬಗ್ಗೆ ಒಂದು ಸರಿಯಾದ ವ್ಯವಸ್ಥೆ ಮಾಡದೆ ಹೋದರೆ ಜನರಿಗೆ ತೊಂದರೆಯಾಗುತ್ತದೆ. ಅನೇಕ ಪಂಚಾಯತಗಳು ಒಂದು ಸಭೆಯನ್ನು ಕೂಡ ಇದುವರೆಗೆ ಕರೆದಿಲ್ಲ. ಅವರಿಗೆ ಗ್ರ್ಯಾಂಟು ಹೇಗೆ ಸಿಗುತ್ತದೆ. ಇವರಿಂದ ಯೋಜನೆ ಕೆಲಸ ಹೇಗೆ ನಡೆಯುತ್ತದೆ. ಬಹಳ ಕೆಲಸ ಮಾಡಬೇಕೆಂದು ಅಪೇಕ್ಷೆಯಿರುತ್ತದೆ. ಆದರೆ ಗ್ರ್ಯಾಂಟು ಎಷ್ಟು ಸಿಕ್ಕಿದೆ ಯಾವ ಯಾವ ಕೆಲಸ ಮಾಡಬೇಕು ಎಂಬುದನ್ನು ಚರ್ಚಿಸುವದಕ್ಕೆ ಮಿಟಿಂಗ್ ಕರೆಯದೆ ಇದ್ದರೆ ಏನು ಪ್ರಯೋಜನೆಯಾಗುತ್ತದೆ? ಹಣ ಕೊಟ್ಟ ಮೇಲೆ ಆಡಿಟ್ ಮಾಡದೆ ಇದ್ದರೆ ಸರಿಯಾದ ಸುಪರವಿಜನ್ ಇಲ್ಲದೇ ಇದ್ದರೆ ಜನರಿಗೆ ಹಾನಿಯಾಗುತ್ತದೆ, ಲಾಭವೇನೂ ಇಲ್ಲ ಇದರಿಂದ ಕೋ-ಆಪ್‌ರೇಟಿವ್ಹ ಸೊಸೈಟಿಗಳ ಮೇಲೆ, ಪಂಚಾಯತಿಗಳ, ಅನೇಕ ಸಂಘ ಸಂಸ್ಥೆಗಳ ಸರಿಯಾದ ಸುಪರವಿಜನ್ ಆಡಿಟ್, ಬಿಗುವು ಇಡುವ ಒಂದು ವ್ಯವಸ್ಥೆ ಮಾಡಬೇಕು ಇದನ್ನು ಬಹಳ ಅವಶ್ಯಕವಾಗಿ ಮಾಡಬೇಕು ಎಂಬ ಮಾತನ್ನು ಹೇಳುತ್ತೇನೆ.

ಕೊನೆಯದಾಗಿ ಒಂದು ವಿಷಯ ಹೇಳಬೇಕಿದೆ ಇದುವರೆಗೆ ಆಡಳಿತದ ಬಗ್ಗೆ ಹೇಳಿದೆ **ಮುಖ್ಯವಾಗಿ ಒಂದು ನೂರರಲ್ಲಿ ಎಂಬತ್ತು ಜನರಿಗೆ ಹಿತವಾಗಬೇಕಾದರೆ ಒಕ್ಕಲುತನಕ್ಕೆ ಪ್ರಾಧಾನ್ಯತೆ ಕೊಡಬೇಕು ಅಂದರೆ ಅವರ ಕಲ್ಯಾಣವಾಗುತ್ತದೆ. ಇದರ ಬಗ್ಗೆ ಬಹಳ ಅನ್ಯಾಯ ನಡೆದಿದೆ ಎಂದು ಹೇಳದೆ, ಗತ್ಯಂತರವಿಲ್ಲ ಯಾವ ಯೋಜನೆ ಮಾಡಲಿ, ಇವರ ಮೇಲೆ ಎಷ್ಟು ಅನ್ಯಾಯ, ಎಷ್ಟು ದ್ರೋಹವಾಗುತ್ತದೆಯೆಂಬುದನ್ನು ನಾವು ನೋಡಬೇಕು ಅನೇಕ ಅನುವಂಶಿಕ ಹುದ್ದೆಗಳನ್ನು ರದ್ದು ಮಾಡಿದ್ದಾರೆ.** ಹಳ್ಳಿಗಳಲ್ಲಿದ್ದ ಕುಲಕರ್ಣಿಯವರು ಹೊರಟು ಹೋದರು ಆ ಸ್ಥಳದಲ್ಲಿ ಸರಕಾರಿ ನೌಕರರಾದ ತಲಾಟಿಗಳು ಬಂದಿದ್ದಾರೆ. ಇನ್ನು ಪಟೇಲರು ಹೋಗುವವರು ಇದ್ದಾರೆ. ಆಡಳಿತದಲ್ಲಿ ಬಿಗಿ ಇಲ್ಲದ ಮೂಲಕ ರೈತನಿಗೆ ಬಹಳ ತೊಂದರೆಯಾಗಿದೆ. ಲೆಕ್ಕಪತ್ರದಲ್ಲಿ ರೈತನ ಹೆಸರು ಉಳಿಯುತ್ತದೆಂಬುದಕ್ಕೆ ಭರವಸೆಯನ್ನು ಈ ಹೊಸ ನವಕರರಾದ ತಲಾಟಿಗಳು ದಕ್ಷತೆಯಿಂದ ಲೆಕ್ಕಪತ್ರ ಬರೆಯದೇ ಇರುವದರಿಂದ ರೈತರು ತೊಂದರೆ ಅನುಭವಿಸಬೇಕಾಗುತ್ತದೆ. ಈ ವಿಚಾರದಲ್ಲಿ ಬಹಳ ಅವ್ಯವಸ್ಥೆಯುಂಟಾಗಿದೆ. ಇದಲ್ಲದೆ ಲಂಚಗುಳಿತನ ಹೆಚ್ಚಾಗಿರುವದನ್ನು ನೋಡಿದರೆ ರೈತನಿಗೆ ಸುಖ ಸಿಕ್ಕುವದಿಲ್ಲ. ಯೋಜನೆಯ ಪೂರ್ತಿ ಲಾಭ ರೈತನಿಗೆ ಸಿಕ್ಕುವದಿಲ್ಲ ಇದನ್ನು ಮರೆಯಬಾರದು

ಶ್ಯಾನುಭೋಗರು ಹೋದರು, ಇನ್ನು ಪಟೇಲರು ಹೋದ ಮೇಲೆ ಒಂದು ಸರಿಯಾದ ವ್ಯವಸ್ಥೆ ಮಾಡದೇ ಇದ್ದರೆ ಹೆಚ್ಚಿನ ಅನ್ಯಾಯವಾಗುತ್ತದೆ ಎಂಬುದನ್ನು ಮರೆಯಬಾರದು ಈ ಬಗ್ಗೆ ಒಂದು ಅಲ್ಟರ್‌ನೇಟಿವ್ಹ ಅರೇಜಮೆಂಟ್ (ಬದಲಿ ವ್ಯವಸ್ಥೆ) ಮಾಡದೇ ಇದ್ದರೆ ಹಳ್ಳಿಗಳಲ್ಲಿಯ ಆಡಳಿತ ವ್ಯವಸ್ಥೆ ಕೆಟ್ಟು ಹೋಗಿ ಯೋಜನೆಗಳು ತಲೆ ಕೆಳಗಾಗುವ ಪರಿಸ್ಥಿತಿ ಬರುತ್ತದೆ. **ರೈತನಿಗೆ ಪ್ರತಿಫಲ ದೊರೆಯದೇ ಇದ್ದರೆ ಯಾವ ಯೋಜನೆ ಮಾಡಿದರೂ ಪ್ರಯೋಜನೆಯಿಲ್ಲ.** ಈ ಯೋಜನೆಯಗಳಿಂದ ಕೆಲವು ಜನರು ಹೆಚ್ಚಿನ ಅಧಿಕಾರ ಪಡೆದು ಹೆಚ್ಚು ದುಡ್ಡು ಸಂಪಾದನೆ ಮಾಡಿಕೊಳ್ಳಲು ಸಾಧ್ಯವಾಗಿದೆ. ಇದು ಸರಿಯಲ್ಲ **ಈ ಯೋಜನೆಗಳ ಮೂಲಕ ನಾವು ಒಂದು ಸೆಕ್ಯುಲರ್ ಸ್ಟೇಟ ಜಾತ್ಯಾತೀತ ರಾಷ್ಟ್ರ ನಿರ್ಮಾಣ ಮಾಡಬೇಕು, ಸಮಾಜವಾದಿ ಸಮಾಜ ರಚನೆ ಮಾಡಬೇಕು ಎಂದು ಹೊರಟಿದ್ದೇವೆ.** ನಮ್ಮ ಈ ಮುಖ್ಯವಾದ ಗುರಿ ಮರೆಯಬಾರದು ಇಲ್ಲದಿದ್ದರೆ ಅಪವಾದ ಬರುತ್ತದೆ. ಸರ್ಕಾರ ಕಾಂಟ್ರ್ಯಾಕ್ಟರರನ್ನು ಬೆಳೆಸುತ್ತಿದ್ದಾರೆ. ಬಂಡವಾಳವಾಗಿ ಬೆಳೆಸುತ್ತಿದ್ದಾರೆ. ಎಂದು ಜನ ಆಡಿಕೊಳ್ಳುವದನ್ನು ತಪ್ಪಿಸಲಿಕ್ಕೆ ಪ್ರಯತ್ನ ಮಾಡಬೇಕು ಬಂಡವಾಳ ಶಾಹಿಗಳೇ ಪ್ರೋತ್ಸಾಹ ಸಿಗದಂತೆ ಮಾಡಬೇಕು ಮತ್ತು ನಮ್ಮ ಗುರಿ ಮುಟ್ಟಲು ಸಮೀಪ ದಾರಿ ಹಿಡಿಯಬೇಕು, ಮುಖ್ಯವಾಗಿ ನಾವು ಭೂ ಸುಧಾರಣೆ ಯಾಗಬೇಕಾಗಿದೆ. ಇದರಿಂದ ಒಕ್ಕಲುತನಕ್ಕೆ ಅನುಕೂಲವಾಗುತ್ತದೆ. **ಇದುವರೆಗೆ ಭೂ ಸುಧಾರಣೆಯಲ್ಲಿ ಯಾವ ಬದಲಾವಣೆ ಮಾಡಲು ಸಾಧ್ಯವಾಗಿಲ್ಲ ಯಾರು ಜಮೀನಿನಲ್ಲಿ ಕಷ್ಟ ಪಟ್ಟು ದುಡಿಯುತ್ತಾರೋ ಅವನಿಗೆ ಆ ಜಮೀನ ಒಡೆತನದ ವಿಷಯದಲ್ಲಿ ಭರವಸೆ ಇಲ್ಲದೇ ಇದ್ದರೆ ಅವನಿಗೆ ಯಾವದೇ ತರಹದ ಸೌಕರ್ಯ ಸಿಕ್ಕುವದಿಲ್ಲ ತಗಾವಿ ಸಾಲ ಸಿಕ್ಕುವದಿಲ್ಲ ಸೊಸೈಟಿಯಿಂದ ಸಾಲ ಸಿಕ್ಕುವದಿಲ್ಲ. ಯಾವತ್ತಿಗೂ ದೊಡ್ಡ ದೊಡ್ಡ ರೈತರಿಗೆ ಬಂಡವಾಳಗಾರರಿಗೆ ಈ ಸೌಕರ್ಯ ಸಿಕ್ಕುತ್ತದೆ ಅತ್ಯಂತ ಬಡವರಿಗೆ ಏನೂ ಮುಟ್ಟುವದಿಲ್ಲ ಯಾವದೇ ಯೋಜನೆಯನ್ನು ಮಾಡಲಿ, ಈ ಯೋಜನೆಯಿಂದ, ಮಹಾತ್ಮಾ ಗಾಂಧೀಜಿಯವರು ಹೇಳುತ್ತಿದ್ದ ಹಾಗೆ ಗುಡಿಸಿಲಿನಲ್ಲಿರುವ ಜನ ಅತ್ಯಂತ ದಟ್ಟ ದರಿದ್ರರಾದ ಜನರಿಗೆ ಸಹಾಯ ಮುಟ್ಟುವಂತೆ ಆಗಬೇಕು, ಅದನ್ನು ಮರೆಯಬಾರದು, ಅದನ್ನು ಮರೆತರೆ ನಮ್ಮ ಯೋಜನೆಗಳು ಯಶಸ್ವಿಯಾಗಲಾರವು ಎಂದು ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ.**

# ಪಾನ ನಿರೋಧ

10ನೇ ಜುಲೈ 1967

**ಸಾಮಾಜಿಕ ಪುರೋಭಿವೃದ್ಧಿಯ ಕನಸುಗಳನ್ನು ಕಣ್ತುಂಬಿಕೊಂಡ ಗೋಕಾಕ ಪೂರ್ವ ಭಾಗದ ಶಾಸಕ ಶ್ರೀ ಎ.ಆರ್. ಪಂಚಗಾವಿ ಗೋಕಾಕದ ಗಾಂಧೀ ಎಂದೆನಿಸಿಕೊಂಡವರು ಗಾಂಧೀ ತತ್ವಾದರ್ಶಗಳನ್ನು ಮೈಗೂಡಿಸಿಕೊಂಡ ಅವರು ಪಾನ ಪ್ರತಿಬಂಧದ ಪ್ರತಿಪಾದಕರು ರಾಜ್ಯ ವಿಧಾನ ಸಭೆಯಲ್ಲಿ ಪಾನನಿರೋಧ ರದ್ದತಿ ಕುರಿತು ಚರ್ಚೆ ಬಂದಾಗ, ನಮ್ಮ ದೇಶದ ಸಂಸ್ಕೃತಿ, ಆರ್ಥಿಕ ಪರಿಸ್ಥಿತಿಯ ಹಿನ್ನಲೆಯಲ್ಲಿ ಮದ್ಯಪಾನ ಜಾರಿಯಿಂದಾಗುವ ಸಾಮಾಜಿಕ ದುಷ್ಪರಿಣಾಮಗಳನ್ನು ಎಳೆ ಎಳೆಯಾಗಿ ಬಿಚ್ಚಿಡುತ್ತ, ಪಾನ ನಿರೋಧವನ್ನು ಖಡ್ಡಾಯವಾಗಿ ಅನುಷ್ಠಾನ ಗೊಳಿಸಲು ಆಗ್ರಹಿಸುತ್ತಾರೆ. ದೀನ - ದಲಿತ ಹಿಂದುಳಿದ ರೈತಾಪಿ ಕೂಲಿಗಳನ್ನು ಕುಡಿತಕ್ಕೆ ತೊಡಗಿಸಿ ಸುಖೀ ರಾಜ್ಯ - ಸಮಾಜ ಕಲ್ಯಾಣ ಸಾಧಿಸಲು ಸಾಧ್ಯವಿಲ್ಲವೆಂದು ಸಾರಿ ಹೇಳುತ್ತಾರೆ.**

ಸ್ವಾಮಿ ನಾನು ಈ ಬೇಡಿಕೆಗಳನ್ನು ಕುರಿತು ಅನುಮೋದಿಸುತ್ತಾ ಉಳಿದ ವಿಷಯಗಳಲ್ಲಿ ಹೆಚ್ಚಿಗೆ ಮಾತನಾಡದೆ, ಎಕ್ಸೈಜ ವಚನದಲ್ಲಿ ಅಂದರೆ ಪಾನ ನಿರೋಧದ ವಿಚಾರವಾಗಿ ನಾಲ್ಕು ಮಾತುಗಳನ್ನು ಹೇಳಬಯಸುತ್ತೇವೆ.

ನನ್ನ ಅನೇಕ ಗೆಳೆಯರು ಇಲ್ಲಿಯವರೆಗೂ ಈ ವಿಚಾರವನ್ನು ಮಾತನಾಡುತ್ತ ಪಾನ ನಿರೋಧವನ್ನು ಜಾರಿಯಲ್ಲಿಟ್ಟಿರುವದರಿಂದ ದೇಶದಲ್ಲಿ ಬಹಳ ಅನಾಹುತಗಳಾಗುತ್ತಿವೆ ಎಂಬುದಾಗಿ ಮಾತನಾಡುತ್ತ, ಕೂಡಲೇ ಅದನ್ನು ತೆಗೆದುಕೊ ಹಾಕಬೇಕು ಇದನ್ನು ಇಟ್ಟಿರುವದರಿಂದ ಅನೇಕ ಕೂಲಿಗಾರರ ಮನೆಗೆ ಭೂತ ಪ್ರವೇಶ ಮಾಡಿದಂತಾಗಿದೆ, ಇದು ಇರುವದರಿಂದ ಪ್ರತಿಯೊಂದು ಮನೆಗೂ ಭೂತ ಹೊಕ್ಕ ಹಾಗಾಗಿದೆ ಎಂಬುದಾಗಿ ಹೇಳಿದ್ದಾರೆ. ಆದರೆ ಈ ಪಾನ ನಿರೋಧವನ್ನು ಜಾರಿಗೆ ತರುವ ಮೊದಲು ಈ ಬಗ್ಗೆ ಏನು ಪರಿಸ್ಥಿತಿ ಇತ್ತು ಅದನ್ನು ಜಾರಿಗೆ ತಂದ ಬಳಿಕ ಏನು ಪರಿಸ್ಥಿತಿ ಬದಲಾಯಿಸಿದೆ ಎಂಬುದಾಗಿ ಎರಡನ್ನು ಗಮನದಲ್ಲಿಟ್ಟುಕೊಂಡು ಹೇಳುವದಾದರೆ, ಪಾನ ನಿರೋಧವನ್ನು ಜಾರಿಗೆ ತರುವ ಮೊದಲು ಇಲ್ಲಿ ಇಬಿಸಿಟ್ ಡಿಸ್ಟೈಲೇಶನ್ ನಡೆಯುತ್ತಲೇ ಇತ್ತು. ಆದರೆ ಈಗ ಅದು ಸ್ವಲ್ಪ ಮಟ್ಟಿಗೆ ಹೆಚ್ಚಾಗಿ

ರಬಹುದು. ಆದಾಗ್ಯೂ ಅದನ್ನು ಪೋಲಿಸರ ಸಹಾಯದಿಂದ ಅಕ್ರಮ ನಡುವಳಿಕೆ ನಡೆಯತಕ್ಕ ಜನರನ್ನು ಕಂಡು ಹಿಡಿದು ಅವರಿಗೆ ಶಿಕ್ಷೆಯನ್ನು ಮಾಡುತ್ತಿದ್ದಾರೆ ಅಷ್ಟು ಹೊರತು ಮೊದಲು ದೇಶದಲ್ಲಿ ಇಲಿಸಿಟ್ ಡಿಸ್ಟೈಲೇಶನ್ನೆ ಇರಲಿಲ್ಲ. ಎಂಬುದು ಅದೊಂದು ಉತ್ಪ್ರೇಕ್ಷೆ ಎಂದು ಹೇಳುತ್ತೇನೆ. ಹಾಗೆ ಇರಲಿಲ್ಲ ಎಂದು ಹೇಳುವದು ಶುದ್ಧ ತಪ್ಪು. ಇದನ್ನು ಯಶಸ್ವಿಯಾಗಿ ಜಾರಿಗೆ ಆಚರಣೆಗೆ ತರಬಹುದು ಎಂದು ಹೇಳುತ್ತೇನೆ. ಇದು ಸಾಧ್ಯವಿದೆ ಪಾನ ಪ್ರತಿ ಬಂಧದಿಂದ ನಮ್ಮ ದೇಶ ಬಹಳ ಅನುಕೂಲವಿದೆ ಇಲ್ಲಿ ನೂರಕ್ಕೆ 98 ಜನರು ಕುಡಿತಕ್ಕೆ ವಿರೋಧಿಗಳಾಗಿದ್ದಾರೆ. ಇನ್ನು ನೂರಕ್ಕೆ ಎಲ್ಲೋ ಅಲ್ಲೊಂದು ಇಲ್ಲೊಂದರಂತೆ ಒಬ್ಬಬ್ಬರು ಕುಡಿಯಬೇಕು ಅವರು ಈ ಕುಡಿತ ಇರಬೇಕು ಎಂದು ಹೇಳಬಹುದು ಆದರೆ ಅವರೂ ಸಹ ಏನೋ ಒಂದು ಚಟಕ್ಕೆ ಸಿಕ್ಕಿ ಬಿಟ್ಟು ಕುಡಿಯುತ್ತಿದ್ದರೂ ಅದನ್ನು ಕೆಟ್ಟದ್ದು ಎಂದೇ ಹೇಳುತ್ತಾರೆ. ಆದರೆ ಇನ್ನೂ ಈಗ ತಾನೇ ಕೆಲವು ಸದಸ್ಯರು ಹೇಳಿದರು ಹೆಣ್ಣು ಮಕ್ಕಳು ಕೂಡ ಈಗ ಕುಡಿಯುವದಕ್ಕೆ ಪ್ರಾರಂಭ ಮಾಡಿದ್ದಾರೆ ಎಂದು ಆದರೆ ಹಾಗೆ ಎಲ್ಲೋ ಕ್ವಚಿತ್ ಒಬ್ಬಬ್ಬರು ಅಂಥಾ ದುರ್ಮಾರ್ಗಕ್ಕೆ ಬಿದ್ದಿರಬಹುದು ಇದು ಎಲ್ಲೋ ಅಲ್ಲೊಬ್ಬರು ದುಮಾರ್ಗಕ್ಕ ಬಿದ್ದಿದ್ದರೆ ಎಲ್ಲಾ ಹೆಣ್ಣು ಮಕ್ಕಳು ಕುಡಿಯುತ್ತಿದ್ದಾರೆ ಎಂದು ಹೇಳುವದು ಶುದ್ಧ ತಪ್ಪು. ಆದರೆ ಅದನ್ನೇ ಒಂದು ಕಾರಣ ಮಾಡಿ ಪಾನ ಪ್ರತಿಬಂಧವನ್ನು ರದ್ದು ಮಾಡಿ ಎಂದು ಹೇಳುವದು ಸರಿಯಲ್ಲ. ಪಾನ ಪ್ರತಿಬಂಧವನ್ನು ರದ್ದು ಮಾಡುವದಕ್ಕೆ ಇದು ಅಂಥ ಒಂದು ಪ್ರಬಲ ಕಾರಣವಲ್ಲ. ಜನರು ಕೆಟ್ಟದ್ದನ್ನು ಪಾನ ಮಾಡುತ್ತದೆ ಆದುದರಿಂದ ಪಾನ ಪ್ರತಿಬಂಧ ಇರಕೂಡದು ಅನ್ನುವ ಕಾರಣ ಕಾರಣವೇ ಅಲ್ಲ. ಕುಡಿತದಲ್ಲಿ ವಿಷಾ ಮಾಡುವದರಲ್ಲಿ ಇದು ಒಳ್ಳೆಯದು. ಇದು ಕೆಟ್ಟದ್ದು ಎಂದು ಭೇದ ಮಾಡುವದಕ್ಕಾಗುವದಿಲ್ಲ ವಿಷಾತರತಕ್ಕ ವಸ್ತುಗಳೆಲ್ಲಾ ಕೆಟ್ಟವುಗಳೇ ಆದರೆ ಕೆಲವರು ಹೇಳಿದಂತೆ. ಇಲಿ ಸಿಟ್ ಡಿಸ್ಟಿಲೇಶನ್‌ದಲ್ಲಿ ಅಮೋನಿಯಂ ಸಲ್ಫೇಟನ್ನು ಸೇರಿಸುತ್ತಾರೆಂದು ಹೇಳಿದ್ದು ನಿಜ. ಇಲಿ ಸಿಟ್ ಡಿಸ್ಟಿಲೇಶನ್ ಪಾನವನ್ನು ಯಾವ ರೀತಿಯಲ್ಲಿ ಮಾಡಿದರೂ ಅದರಿಂದ ಕೆಟ್ಟ ಪರಿಣಾಮವಾಗುತ್ತದೆಂಬ ಅರಿವು ಕುಡಿಯತಕ್ಕವರಿಗೆ ಬರಬೇಕು. ಆ ಪರಿಜ್ಞಾನ ಬಾರದಿದ್ದರೆ ಇದನ್ನು ರದ್ದು ಮಾಡಿ ಎಂದು ಹೇಳುವದು ಸರಿಯಲ್ಲ ನಮ್ಮ ದೇಶದಲ್ಲಿ ಇಂದು ಒಂದಲ್ಲ ಒಂದು ರೀತಿಯಲ್ಲಿ ನಾನಾ ತರಹದ ಅಪರಾಧಗಳು ನಡೆಯುತ್ತಲೇ ಇರುತ್ತದೆ. ಆದುದರಿಂದ ಅವುಗಳನ್ನು ತಡೆಗಟ್ಟುವದಕ್ಕಾಗಿ ಮಾಡಿರತಕ್ಕ ಕಾಯಿದೆಗಳನ್ನು ತೆಗೆದುಹಾಕಬೇಕು ಎಂದು ಹೇಳತಕ್ಕದ್ದು ಶುದ್ಧ ತಪ್ಪು ಎಂದು ಹೇಳುತ್ತೇವೆ. ಇನ್ನು ಕೆಲವರು ಇದನ್ನು ತೆಗೆದು ಹಾಕಿದರೆ ನಮಗೆ ದುಡ್ಡನ್ನು ಗಳಿಸುವದಕ್ಕೆ ಒಂದು ದಾರಿಯಾಗುತ್ತದೆ ಎಂದು ಹೇಳಿದ

ತತ್ವಕ್ಕೆ ತದ್ವಿರುದ್ಧವಾದ ಮಾತು ನಮ್ಮದು ಪೋಲೀಸ ರಾಜ್ಯವಲ್ಲ. ಇದು ಜನರ ಕಲ್ಯಾಣ ಸಾಧಿಸುವ ಸುಖೀ ರಾಜ್ಯ. ಈ ದೇಶದಲ್ಲಿ ಕುಡಿಯುವದಕ್ಕೆ ಒಂದಲ್ಲಾ ಒಂದು ರೀತಿಯಲ್ಲಿ ಅವರಿಗೆ ಅನುಕೂಲ ಮಾಡಿಕೊಟ್ಟು ಹೆಚ್ಚಿಗೆ ಅಂಗಡಿಗಳನ್ನು ತೆರೆಯುವದಕ್ಕೆ ಸುಖೀರಾಜ್ಯದಲ್ಲಿ ಅವಕಾಶವಿಲ್ಲ ಈ ಕುಡಿಯುವದರಿಂದ ಎಷ್ಟೋ ದುಷ್ಪರಿಣಾಮಗಳಾಗುತ್ತಿವೆ. ಇದನ್ನು ಎಲ್ಲರೂ ಮನಗಂಡಿದ್ದಾರೆ ಮತ್ತು ಪಾನ ರದ್ದು ಮಾಡಲಿ ಎಂದು ಹೇಳುತ್ತಿದ್ದಾರೆ. ಇದರಿಂದ ಈ ಸಣ್ಣ ಕಾರಣಕ್ಕಾಗಿ, ದೇಹದ ಒಂದು ಭಾಗಕ್ಕೆ ಸ್ವಲ್ಪ ನೋವಾಗಿದೆ ಎಂದು ಇಡೀ ದೇಹದ ಅಂಗವನ್ನೇ ಕಡಿದು ಹಾಕುವದು ತಪ್ಪಾಗುತ್ತದೆ. ರಾಜಕೀಯವರು ಹೇಳುತ್ತಾರೆ, ಸೇಲ್ಸ್ ಟ್ಯಾಕ್ಸ್ ಇಂದು ಮೂವತ್ತು ಕೋಟಿ ರೂಪಾಯಿಗೆ ಬಂದು ಮುಟ್ಟಿದೆ. ಪಾನ ಪ್ರತಿಬಂಧ ರದ್ದು ಮಾಡಿದರೆ ಇಷ್ಟು ಟ್ಯಾಕ್ಸ ಬರಲಾರದು ಈ ಕುಡಿಯಲಿಕ್ಕೆ ಪ್ರಾರಂಭವಾದರೆ, ನಾಟಕ ನೋಡುವದು ಸಿನೀಮಾ ನೋಡುವದು ಮತ್ತು ಇತರ ವ್ಯಾಪಾರ ಸಹಿತ ಕಡಿಮೆಯಾಗುತ್ತದೆ. ಪಾನ ಪ್ರತಿಬಂಧದಿಂದ ಆರ್ಥಿಕ ಮಟ್ಟವು ಬೆಳೆಯುತ್ತದೆ ಅಲ್ಲದೇ ಕಡಿಮೆಯಾಗುವದಿಲ್ಲ ಆದ್ದರಿಂದ ಒಂದು ಊರಿನಲ್ಲಿ ಬೊಬ್ಬೆ ಹಾಕಬಹುದು ಒಂದು ಊರೊಳಗೆ ಏನಾದರೂ ಒಂದು ಸುದ್ದಿಯಾದರೆ ಅದು ಇಡೀ ಊರೊಳಗೆ ಹರಡುತ್ತದೆ. ಒಂದು ಕೊಲೆಯಾದರೆ ಅದು ಊರೆಲ್ಲಾ ಹರಡುತ್ತದೆ. ಒಬ್ಬ ಮನುಷ್ಯ ಕುಡಿದರೆ ಅದು ಕೂಡ ಊರೆಲ್ಲ ಸುದ್ದಿಯಾಗುತ್ತದೆ. ನಮ್ಮ ದೇಶದಲ್ಲಿದ್ದಷ್ಟು ಪಾನ ನಿರೋಧಕ್ಕೆ ಅನುಕೂಲ ವಾತಾವರಣ ಇನ್ನು ಯಾವ ದೇಶದಲ್ಲೂ ಇಲ್ಲ ಆದರೂ ಕೂಡ ನಾವು ಯಾವುದನ್ನು ಮಾಡಿ ತೋರಿಸಿದರೆ ಇಡೀ ಜಗತ್ತಿಗೆ ಒಂದು ಪಾಠವನ್ನು ಹಾಕಿ ಕೊಟ್ಟಂತಾಗುತ್ತದೆ. ನಾವು ಅದನ್ನು ಕೈ ಬಿಡಲಿಕ್ಕೆ ಏನೂ ಮಾಡುವದಕ್ಕಾಗುವದಿಲ್ಲ. ಅಷ್ಟು ಸುಲಭವಾಗಿ ಇದನ್ನು ಕೈ ಬಿಡಲಿಕ್ಕೆ ಮನಸ್ಸು ಮಾಡಬಾರದು ಈ ನೆವಗಳನ್ನು ಮುಂದೆ ಮಾಡಿಕೊಂಡು ಈ ವೆಲ್‌ಫೇರನ ಬುನಾದಿಯನ್ನು ಕೈ ಬಿಡಬಾರದು ಎಂದು ಹೇಳುತ್ತಿದ್ದೇನೆ. ನಾಳೆ ಪ್ರಾಹಿಬಿಶನ್ ರದ್ದು ಆದ ಮೇಲೆ ಕಾಲೇಜ ಹುಡುಗರು ಕುಡಿಯಬಹುದು. ಹಿಂದೆ ಬ್ರಿಟಿಷರು ಇದ್ದಾಗ ಏನಾಗುತ್ತಿತ್ತು ಎಂದು ನೋಡುತ್ತಿದ್ದೆವು ಒಬ್ಬ ಕಲೆಕ್ಟರ್ ಇನ್‌ಸ್ಪೆಕ್ಟನಿಗೆ ಬಂದರೆ, ಅವನಿಗೆ ಎಲ್ಲ ರೇವಿನ್ಯು ಸ್ಟಾಫಿನವರು ಪಾರ್ಟಿ ಕೊಡಬೇಕಾಗಿತ್ತು. ಅಲ್ಲಿ ಯಾರಾದರೂ ಕಂಟ್ರ್ಯಾಕ್ಟರ ಬಂದು ಅವರಿಗೆ ಕುಡಿಸಬೇಕು. ಅದೇ ರೀತಿ ಡಿ.ಎಸ್.ಪಿ. ಬಂದಾಗ ಕೂಡ ಮಾಡಬೇಕಾಗಿತ್ತು. ಇಂದು ಅದೆಲ್ಲಾ ಕಡಿಮೆಯಾಗಿದೆ. ಪೂರ್ಣವಾಗಿ ಎಲ್ಲಾ ಅಧಿಕಾರಿಗಳು ಬಿಟ್ಟಿದ್ದಾರೆಂದು ಹೇಳುವದಕ್ಕಾಗುವದಿಲ್ಲ. ಕೆಲವರು ಹೇಳುತ್ತಿದ್ದಾರೆ, ಮಾರ್ಕೆಟ್ಟಿನಲ್ಲಿ ಬೆಲ್ಲ ಕೂಡ ಮಾಯವಾಗುತ್ತಿದೆ ಎಂದು

ನಾಳೆಗೇಪ್ಪ ಮಾಯವಾಗಬಹುದು, ಹಣ್ಣು ಹಂಪಲ ಎಲ್ಲಾ ಮಾಯವಾಗಬಹುದು ಹಾಗೆ ಅನೇಕ ಕಾಡಿನ ಸಂಪತ್ತು ಕೂಡ ಈ ಸುಂಕಿಗೆ, ಅದರ ತಯಾರಿಕೆಗೆ ಹೋಗುತ್ತದೆ ಆ ಮೇಲೆ ಅಕ್ಕಿ ಕೂಡ ಹೋಗುತ್ತದೆ. ಈ ಪಾನವನ್ನು ಬೆಳೆಸುವದರಿಂದ ಲಾಭವೇನೂ ಇಲ್ಲ.

ಇನ್ನೊಂದು ಮಾತನ್ನು ಹೇಳ ಬಯಸುತ್ತೇನೆ. 1962 ರ ಮುಂಚೆ ಪಾನಪ್ರತಿಬಂಧ ಸ್ವಲ್ಪ ಬಿಗಿಯಾಗಿ ಜಾರಿಯಲ್ಲಿತ್ತು. ಅದರ ನಂತರ ಸಡಿಲವಾಗುತ್ತ ಬಂದಿದೆ ಇದಕ್ಕೆ ಕಾರಣ ಇಡೀ ದೇಶದ ವಾತಾವರಣ ಇದ್ದರೂ ಇರಬಹುದು ಮಹಾರಾಷ್ಟ್ರದೊಳಗೆ, ಕೇಂದ್ರ ಸರ್ಕಾರದೊಳಗೆ, ಸಡಿಲ ಮಾಡುತ್ತೇವೆಂದು ಮಾತನಾಡಿದನೆ, ಜನರು ಏನು ಇದು ಒಂದು ಬೇಗ ಹೋಗುತ್ತದೆ ಎಂದು ಸಂತೋಷಪಡುತ್ತಿದ್ದಾರೆ. ಅದರಿಂದ ಕಂಟ್ರ್ಯಾಕ್ಟರು ಗುತ್ತಿಗೆದಾರರು ಅದರ ದಾರಿಯನ್ನು ನೋಡುತ್ತಿದ್ದಾರೆ. ಎಂದು ನಾವು ಇದರಿಂದ ಹಣ ಸಂಪಾದನೆ ಮಾಡಿ ಶ್ರೀಮಂತರಾದೆವು. ಉಪ್ಪರಿಗೆ ಮನೆ ಕಟ್ಟೇವು ಎಂಬುದನ್ನೆಲ್ಲಾ ಕನಸು ಕಾಣುತ್ತಿದ್ದಾರೆ ಅದೇ ರೀತಿ ತಾತ್ಸಾರ ರೀತಿಯಿಂದ ನೋಡುವವರೂ ಇದ್ದಾರೆ. ದುರ್ದೈವದಿಂದ ಯಾವ ಸಮಾಜ ಕುಡಿಯುತ್ತದೆಯೋ ಆ ಸಮಾಜ ರದ್ದು ಮಾಡಲಿ ಎಂದು ಕೇಳುತ್ತಿದೆ ಆ ಸಮಾಜ ಪಾನ ಪ್ರತಿಬಂಧಕದಿಂದ ಎಷ್ಟು ಜನ ಸುಖ ಪಡೆದಿದ್ದಾರೆ, ಎಷ್ಟು ಜನ ಅನೇಕ ರೀತಿಯ ಸಂಪಾದನೆ ಮಾಡಿದ್ದಾರೆ , ಅದರಿಂದ ಲಾಭ ಪಡೆದಿದ್ದಾರೆ ಎಂಬುದನ್ನು ಯೋಚಿಸಬೇಕು. ಇದನ್ನೆಲ್ಲ ಕಂಡುಕೊಂಡು ಎಲ್ಲವನ್ನು ಯೋಚಿಸಬೇಕು. ನಾಲ್ಕು ಮಂದಿ ಕುಡಿಯುತ್ತಾರೆ. ಅದಕ್ಕೆ ಪಾನ ನಿರೋಧವನ್ನು ರದ್ದು ಮಾಡಿ ಎಂದು ಹೇಳಿದರೆ ಅದು ಒಳ್ಳೆಯದಲ್ಲ ಇವತ್ತು ನಾಲ್ಕು ಕೋಟಿ ರೂಪಾಯಿ ಹೆಚ್ಚು ಸಿಗಬಹುದು ಅದರಿಂದ ಜನತೆಯ ದುಡ್ಡು ಬೊಕ್ಕಸಕ್ಕೆ ಎಷ್ಟು ಹೋಗುತ್ತದೆ, ಗುತ್ತಿಗೆದಾರರಿಗೆ ಎಷ್ಟು, ತಯಾರಕರಿಗೆ ಎಷ್ಟು ಕೊಡಬೇಕು, ಸಿಬ್ಬಂದಿಯವರಿಗೆ ಎಷ್ಟು ಕೊಡಬೇಕೆಂದನ್ನೆಲ್ಲಾ ತಿಳಿದುಕೊಳ್ಳಬೇಕು ಏನೋ ನಾಲ್ಕು ದುಡ್ಡು ಸಿಗುತ್ತದೆಂದು ಅದಕ್ಕೆ ಕೈ ಹಾಕುವದು ತಪ್ಪು ಇನ್ನು ಈ ಭೂ ಕಂದಾಯವನ್ನು ರದ್ದು ಮಾಡುವದಾಗಿ ಹೇಳುತ್ತಿದ್ದಾರೆ. ಆದರೆ ಅದನ್ನು ಮಾಡುವಾಗ ಮಾತ್ರ ಯಾರಿಗೂ ನೋವಾಗದೆ ಹಾಗೆ ಮಾಡಬೇಕೆಂದು ಹೇಳುತ್ತೇನೆ. ನಾವು ಇವೊತ್ತಿನ ದಿವಸ ಏನೊಂದು ಕಲ್ಯಾಣ ಕೆಲಸ ಮಾಡಲಿಕ್ಕೆ ಹೋಗುತ್ತೇವೆ. ಅದರಿಂದ ಜನತೆಯ ಕುಡಿಯಲಿಕ್ಕೆ ಹಚ್ಚಿ ಆ ತರದ ಒಂದು ನೀತಿಯನ್ನು ಮಾಡುವದು ಬೇಡ ಇದನ್ನು ನಾವು ಪೂರ್ಣ ವಿಚಾರ ಮಾಡಬೇಕೆಂದು ಹೇಳಿ ಅಧ್ಯಕ್ಷರಿಗೆ ವಂದಿಸಿ, ನನ್ನ ಮಾತುಗಳನ್ನು ಮುಗಿಸುತ್ತೇನೆ.

# ಶಿಕ್ಷಣ ಮತ್ತು ಕೃಷಿ : ಅಭಿವೃದ್ಧಿಯ ಬುನಾದಿ

15ನೇ ಜುಲೈ 1967

**ಶಿಕ್ಷಣ ಸಾಮಾಜಿಕ ಪುರೋಭಿವೃದ್ಧಿಯ ಬುನಾದಿ ಎಂದು ನಂಬಿದವರು ಪಂಚಗಾವಿ ಪ್ರಾಥಮಿಕ ಶಿಕ್ಷಣ ಅಗತ್ಯ ಮಹತ್ವ ಕುರಿತು ಅವರದ್ದೇ ಆದ ಚಿಂತನೆ ದೂರದೃಷ್ಟಿ ಹೊಂದಿದವರು.**

ಸ್ವಾಮಿ, ಈ ಹೊತ್ತು ಈ ಸಭೆಯ ಮುಂದೆ ಸರ್ಕಾರದವರು ಇಟ್ಟಿರತಕ್ಕ ಶಿಕ್ಷಣ ಬೇಡಿಕೆಗಳನ್ನು ಅನುಮೋದಿಸುತ್ತಾ ನಾನು ಕೆಲವು ಸೂಚನೆಗಳನ್ನು ನೀಡ ಬಯಸುತ್ತೇನೆ. ಮೊದಲನೆಯದಾಗಿ ಪ್ರಿ - ಪ್ರೈಮರಿ ವಿದ್ಯಾಭ್ಯಾಸದ ಬಗ್ಗೆ ಹೇಳುವದಾದರೆ, ಚಿಕ್ಕ ಮಕ್ಕಳಿಗೆ ಅಂದರೆ ಆರು ವರ್ಷದೊಳಗೆ ಮಕ್ಕಳಿಗೆ ಈ ಶಿಕ್ಷಣ ಪ್ರಾರಂಭವಾಗುತ್ತದೆ ಇದರಲ್ಲಿ ಅನೇಕ ವ್ಯತ್ಯಾಸಗಳು ಕಂಡು ಬರುತ್ತವೆ. ಮುಖ್ಯವಾಗಿ ಶಹರಗಳಲ್ಲಿ ಇರತಕ್ಕ ಜನಗಳಿಗೆ ಇದರ ಲಾಭ ಸಿಕ್ಕುವದಿಲ್ಲ. ಅದಕ್ಕಾಗಿ ಸರ್ಕಾರದವರು ವಿಶೇಷವಾಗಿ ಇದಕ್ಕೆ ಹಣವನ್ನು ಖರ್ಚು ಮಾಡದೆ ಇದರ ಜವಾಬ್ದಾರಿಯನ್ನು ಸಾರ್ವಜನಿಕರಿಗೇ ಬಿಡಬೇಕು ಅವರು ತಮ್ಮ ಹಣದಿಂದ ಅದನ್ನು ನಡೆಸಿಕೊಂಡು ಹೋಗಲಿ ಅದಕ್ಕಾಗಿ ಸರ್ಕಾರದವರು ಹೆಚ್ಚು ಹಣವನ್ನು ಖರ್ಚು ಮಾಡಬಾರದು ಈ ಪ್ರಿ ಪ್ರೈಮರಿ ವಿದ್ಯಾಭ್ಯಾಸದಲ್ಲಿ ಹಳ್ಳಿಹಳ್ಳಿಗೂ ಮತ್ತು ಶಹರಗಳಿಗೂ ವ್ಯತ್ಯಾಸ ಇರುವ ಕಾರಣ ಶಹರಗಳಲ್ಲಿಯೇ ಎಲ್ಲಾ ಹಣವು ಉಳಿಯುತ್ತದೆ.

ಇನ್ನೂ ಎರಡನೇಯ ಪ್ರಾಥಮಿಕ ಶಿಕ್ಷಣ ಇದರಲ್ಲಿ ಬಹಳ ವ್ಯತ್ಯಾಸಗಳು ಆಗಿವೆ. ಕೆಲವು ಕಡೆ ಸಾಕಾಣಿ ಶಾಲೆಗಳು ನಡೆಯುತ್ತವೆ. ಕೆಲವು ಸ್ಕೂಲ ಬೋರ್ಡ, ಖಾಸಗೀ ಶಾಲೆಗಳು ನಡೆಯುತ್ತವೆ. ಕೆಲವು ಜಾತಿಯ ಮಿಶನರಿ ಶಾಲೆಗಳು ನಡೆಯುತ್ತವೆ ಈ ತರಹ ವ್ಯತ್ಯಾಸಗಳು ಹೋಗಬೇಕು. ಎಲ್ಲಾ ಕಡೆಗೂ ಇಡೀ ಮೈಸೂರು ರಾಜ್ಯಕ್ಕೆ ಏಕರೂಪವಾದ ಆಡಳಿತ ಜಾರಿಗೆ ಬರಬೇಕು. ಬಳ್ಳಾರಿ ಮತ್ತು ಉತ್ತರ ಕರ್ನಾಟಕದಲ್ಲಿ ಸ್ಕೂಲು ಬೋರ್ಡುಗಳನ್ನು ನಡೆಸುವ ಶಾಲೆಗಳನ್ನು ಶೀಘ್ರವಾಗಿ ರದ್ದು ಮಾಡಬೇಕು ಎನ್ನುವ ಮಾತನ್ನು ಕೆಲವು ಜನಗಳು ಹೇಳುತ್ತಿದ್ದಾರೆ. ಆದ್ದರಿಂದ ನಾನು ಒತ್ತಾಯವಾಗಿ ಹೇಳುತ್ತೇನೆ ಈ ಸ್ಕೂಲ ಬೋರ್ಡ ಶಾಲೆಗಳನ್ನು ತೀವ್ರವಾಗಿ ರದ್ದು ಮಾಡಬೇಕು ಇದರಲ್ಲಿ ಬಹಳ ಅನ್ಯಾಯಗಳು ನಡೆಯುತ್ತಿದೆ ಎನ್ನುವ ಮಾತು ಮನೆ ಮಾತಾಗಿದೆ. ಒಂದು ವರ್ಗ ಆಗಬೇಕಾದರೆ 100-200 ರೂಪಾಯಿಗಳು ಒಂದು

ಹೊಸ ನೇಮಕ ಆಗಬೇಕಾದರೆ 300-500 ರೂಪಾಯಿಗಳನ್ನು ಕೊಡುವಂತಹ ಒಂದು ಪದ್ಧತಿ ಇದೆ ಇದನ್ನು ತಪ್ಪಿಸಬೇಕು. ಎಲ್ಲರೂ ಇದನ್ನು ವಿಚಾರಮಾಡಬೇಕಾಗಿದೆ. ಪವಿತ್ರವಾದ ಶಿಕ್ಷಣ ಕಾರ್ಯದಲ್ಲಿ ಲಂಚಗುಳಿತನ ಎಷ್ಟು ಮಟ್ಟಿಗೆ ಇದೆ ಎಂದರೆ ಹಣವನ್ನು ಕೊಡದೇ ಯಾವ ನೇಮಕವೂ ಆಗುವದಿಲ್ಲ ಎನ್ನುವ ಮಾತನ್ನು ತಮ್ಮ ಲಕ್ಷಕ್ಕೆ ತರಬಯಸುತ್ತೇನೆ. ಶಿಕ್ಷಕರಿಗೆ ಎಲ್ಲಿ ತೊಂದರೆಯಾಗುವದಿಲ್ಲವೋ, ಎಲ್ಲಿ ಅನುಕೂಲವಾಗಿದೆಯೇ ಅಂಥಾ ಕಡೆಗಳಲ್ಲಿ ಅವರು ಹೆಚ್ಚು ಉತ್ಸಾಹದಿಂದ ಕೆಲಸ ಮಾಡುತ್ತಾರೆ. ಆದ್ದರಿಂದ ಉಪಾಧ್ಯಾಯರು ಹೆಚ್ಚು ಉತ್ಸಾಹದಿಂದ ಕೆಲಸ ಮಾಡಲು ಅಪೇಕ್ಷೆ ಮಾಡುತ್ತಾರೆಯೋ ಅಂಥಾ ಕಡೆ ಅವರನ್ನು ಹಾಕುವದಕ್ಕೆ ವ್ಯವಸ್ಥೆ ಮಾಡಬೇಕು. ಆ ವ್ಯವಸ್ಥೆ ಮಾಡುವದಕ್ಕೆ ಒಂದು ತಿದ್ದುಪಡಿ ನಿಯಮಾವಳಿಯನ್ನು ಮಾಡಿಕೊಂಡರೆ ಅನುಕೂಲವಾಗುತ್ತದೆ. ಶಿಕ್ಷಕರನ್ನು ಅವರ ಹಳ್ಳಿಗಳಲ್ಲಿ ಇಡಬಾರದು ಅವರ ಊರ ಸಮೀಪದಲ್ಲಿ ಇಡಬಾರದು ಎಂದು ಹೇಳುವದನ್ನು ನಾನು ಒಪ್ಪುವದಿಲ್ಲ. ಶಿಕ್ಷಕರು ಬಹಳ ಕಡಿಮೆ ಸಂಬಳವನ್ನು ಪಡೆಯತಕ್ಕ ಜನ ಹಾಗೆ ಸಿಪಾಯಿಗಳು ಕೂಡ ಕಡಿಮೆ ಸಂಬಳ ಪಡೆಯತಕ್ಕ ಜನ ಅವರಿಗೆ ಇರತಕ್ಕ ಸಂಬಳದಲ್ಲಿ ಅವರು ತಮ್ಮ ಸಂಸಾರವನ್ನು ತಾಪತ್ರಯವಿಲ್ಲದೆ ಹೇಗೆ ನಡೆಸಿಕೊಂಡು ಹೋಗಬೇಕು ಈ ದೃಷ್ಟಿಯಿಂದ ಅದನ್ನು ಹೇಳ ಬಯಸುತ್ತೇನೆ. ಊರಿನಲ್ಲಿಟ್ಟರೆ ಅವರು ಶಾಲೆಯ ಕಡೆ ಲಕ್ಷ್ಯ ಕೊಡುವದಿಲ್ಲ. ಎಂದು ಕೆಲವರು ಹೇಳಿದರೂ ಅದು ಹಾಗಾಗುವದಿಲ್ಲ ಅವರಿಗೂ ತಮ್ಮ ಊರು ಬೆಳೆಯಬೇಕು ತಮ್ಮ ಶಾಲೆ ಬೆಳೆಯಬೇಕು, ತಮ್ಮ ಶಾಲೆಗೆ ಒಳ್ಳೆಯ ಹೆಸರು ಬರಬೇಕು ಎನ್ನುವ ಅಭಿಮಾನವಿರುತ್ತದೆ. ಯಾರಾದರೂ ತಪ್ಪು ಮಾಡಿದರೆ ಅಂಥವರನ್ನು ಬೇರೆ ಕಡೆಗೆ ಹಾಕಿ, ಕಡಿಮೆ ಸಂಬಳವನ್ನು ಪಡೆಯುವ ಜನರಿಗೆ ಅನುಕೂಲ ಮಾಡಿಕೊಡಬೇಕಲ್ಲದೆ ಹೊರತಾಗಿ ಅವರಿಗೆ ತೊಂದರೆಯನ್ನು ಕೊಡಕೂಡದೂ ಎನ್ನುವ ಮಾತನ್ನು ನಾನು ಹೇಳ ಬಯಸುತ್ತೇನೆ ಶಿಕ್ಷಣವು ಬಹಳ ಪವಿತ್ರವಾದ ಕೆಲಸ ಆದ್ದರಿಂದ ಈ ಕೆಲಸವನ್ನು ಮಾಡತಕ್ಕ ಜನಗಳಿಗೆ ಅನಾನುಕೂಲವಾಗದಂತೆ ಅವರನ್ನು ಆಯಾ ಊರುಗಳಲ್ಲಿ ಹಾಕುವದು ಒಳ್ಳೆಯದು ಇದರಿಂದ ಅವರು ತಮ್ಮ ಶಾಲೆಯ ಕೆಲಸದ ಜೊತೆಗೆ ಇತರೇ ಕೆಲಸವನ್ನು ಮಾಡುವದಕ್ಕೆ ಅನುಕೂಲವಾಗುತ್ತದೆ. ಊರಿನ ಪ್ರಗತಿ ಮತ್ತು ಶಿಕ್ಷಣದ ಕಡೆಗೆ ಹೆಚ್ಚು ಗಮನ ಕೊಡುವದಕ್ಕೆ ಅನುಕೂಲವಾಗುತ್ತದೆ. ಎನ್ನುವ ಮಾತನ್ನು ನಾನು ಹೇಳಬಯಸುತ್ತೇನೆ. ಇದು ಶಾಲೆಗಳ ಕಟ್ಟಡದ ಜವಾಬ್ದಾರಿಕೆಯನ್ನು ತಾಲೂಕು ಬೋರ್ಡುಗಳಿಗೆ ವಹಿಸುವದರಿಂದ ಸಮರ್ಪಕವಾಗುವದಿಲ್ಲವೆಂದು ಕಾಣುತ್ತದೆ. ಏತಕ್ಕೆಂದರೆ ಅವರಲ್ಲಿ ಸಾಕಷ್ಟು ದುಡ್ಡು

ಇರುವುದಿಲ್ಲ ಆದ್ದರಿಂದ ಸರ್ಕಾದವರು ಶಾಲೆಗಳ ಕಟ್ಟಡವನ್ನು ಕಟ್ಟುವುದಕ್ಕೆ ಹೆಚ್ಚು ಹಣವನ್ನು ಒದಗಿಸಬೇಕು ಇನ್ನು ಕೆಲವು ಹಳ್ಳಿಗಳಲ್ಲಿ ಜನಗಳು ಉತ್ಸಾಹದಿಂದ ಶಾಲೆಯ ಕಟ್ಟಡಕ್ಕೆ ಹಣವನ್ನು ಕೊಡುತ್ತಾರೆ. ಇನ್ನು ಕೆಲವೆಡೆ ಯಾರೂ ಮುಂದೆ ಬರುವುದಿಲ್ಲ. ಅಂಥ ಕಡೆ ಆ ಕೆಲಸ ಮಾಡುವದು ಕಠಿಣವಾಗುತ್ತದೆ. ಅಸಾಧ್ಯವೇ ಆಗುತ್ತದೆ. ಸರ್ಕಾರದವರು ಒಂದು ಸಾವಿರ ರೂಪಾಯಿ ಕೊಟ್ಟರೆ ಸ್ಕೂಲ ಬೋರ್ಡದವರು ತಮ್ಮ ಹಣವನ್ನು ಕೊಡುವದಕ್ಕೆ ಪ್ರಯತ್ನ ಮಾಡುತ್ತಾರೆ. ಅದೂ ಕೂಡ ಈಗ ಸ್ಕೂಲ ಬೋರ್ಡಿನವರಲ್ಲಿ ಈಗ ಫಂಡ ಬಹಳ ಕಡಿಮೆ ಇರುವದು ಈಗ ಅವರಿಗೆ ಸಾಕಷ್ಟು ಈ ಕೆಲಸವನ್ನು ಕೈಗೊಳ್ಳುವರು ಆಗುವದಿಲ್ಲ. ಆದ್ದರಿಂದ ಶಾಲೆಯ ಕಟ್ಟಡಕ್ಕೆ ಸರ್ಕಾರದವರೇ ಹಣವನ್ನು ಕೊಡುವದಕ್ಕೆ ಪ್ರಯತ್ನ ಮಾಡಬೇಕು ಈಗ ಸರ್ಕಾರದವರು ಕಡ್ಡಾಯ ಶಿಕ್ಷಣವನ್ನು ಜಾರಿಗೆ ತಂದಿದ್ದಾರೆ. ಆದರೂ ಕೂಡ ನಮ್ಮ ದೇಶದಲ್ಲಿ ಸಾಕ್ಷರತೆಯ ಪ್ರಮಾಣ 30 % (ಪರ್ಸೆಂಟ) ಮುಟ್ಟಿಲ್ಲ ಎಂದು ಅಂಕಿಅಂಶಗಳ ವರದಿಯಲ್ಲಿ ಕೊಟ್ಟಿದ್ದಾರೆ 1961 ನೇ ಇಸ್ವಿಯಲ್ಲಿ ನಮ್ಮ ದೇಶದಲ್ಲಿ ಸಾಕ್ಷರತೆಯ ಪ್ರಮಾಣವು ಬೃಹದಾಕಾರವಾಗಿ ಬೆಳೆಯ ಬೇಕಾಗಿದೆ. ಇದಕ್ಕೆ ಹೆಚ್ಚು ಲಕ್ಷ್ಯ ಕೊಡಬೇಕೆಂದು ಹೇಳುತ್ತೇನೆ. ನಮ್ಮ ರಾಜ್ಯದಲ್ಲಿಯೇ ಕನ್ನಡ ಶಾಲೆಗಳಲ್ಲಿ ಸುಮಾರು ಮೂರುಲಕ್ಷ ವಿದ್ಯಾರ್ಥಿಗಳ ಸಂಖ್ಯೆ ಇದೆ. ಇದಲ್ಲದೆ 5 ರಿಂದ 9 ವರ್ಷದೊಳಗಿನ ಹುಡುಗರ ಸಂಖ್ಯೆ 30 ಲಕ್ಷ ಆಗುತ್ತದೆ. ಇದನ್ನು ನೋಡಿದರೆ ಈಗ ಕೊಡುತ್ತಿರುವ ಶಿಕ್ಷಣವು ಇನ್ನೂ ಬಹಳ ಬೆಳೆಯುಬೇಕಾಗಿದೆ ಇದು ಪೂರ್ತಿಯಾಗಬೇಕಾದರೆ ಶಿಕ್ಷಕರು ಎಷ್ಟು ಬೇಕು, ಶಾಲೆಗಳು ಎಷ್ಟು ಬೇಕು ಇದಕ್ಕೆ ಎಷ್ಟು ದುಡ್ಡು ಖರ್ಚು ಮಾಡಬೇಕು ಎಂಬುದನ್ನು ಯೋಚನೆ ಮಾಡಬೇಕು. ಮೊದಲು ಪ್ರತಿಯೊಬ್ಬರಿಗೆ ಒಂದರಿಂದ ನಾಲ್ಕನೇಯ ವರ್ಗದವರಿಗೆ ಶಿಕ್ಷಣ ಸಿಗಲೇ ಬೇಕು ಎಂಬುದನ್ನು ನಾವು ಒಪ್ಪಿಕೊಂಡಿದ್ದೇವೆ ಆದರೆ ಪ್ರತ್ಯಕ್ಷ ನಡೆದದ್ದನ್ನು ನೋಡಿದರೆ ಇನ್ನೂ ಕೆಳ ಮಟ್ಟದಲ್ಲಿದ್ದೇವೆ. ಪ್ರಾಥಮಿಕ ಶಿಕ್ಷಣಕ್ಕೆ ಇನ್ನೂ ಹೆಚ್ಚು ಹಣ ಖರ್ಚು ಮಾಡುವ ಯತ್ನ ಆಗಬೇಕು. ಎಸ್.ಎಸ್.ಎಲ್.ಸಿ. ಪಾಸು ಮಾಡಿದ ಹುಡುಗರು ಉದ್ಯೋಗವಿಲ್ಲದೆ ತಿರುಗುತ್ತಿದ್ದಾರೆ. ಅವರ ಸೇವೆಯನ್ನು ಈ ದೆಸೆಯಲ್ಲಿ ಹೇಗೆ ಉಪಯೋಗಮಾಡಿಕೊಳ್ಳಬೇಕು ಎಂಬುದನ್ನು ವಿಚಾರ ಮಾಡಿ ಒಂದು ಯೋಜನೆ ಮಾಡಿದರೆ ಒಳ್ಳೆಯದಾಗುತ್ತದೆ ಎಂದು ನನಗೆ ಅನ್ನಿಸುತ್ತದೆ ಸಮಾಜದಲ್ಲಿ ಅನೇಕರು ಮಕ್ಕಳನ್ನು ಶಾಲೆಗೆ ಕಳಿಸುವದಿಲ್ಲ ಮುಂದುವರಿದ ವರ್ಗದವರು, ವ್ಯಾಪಾರಿ ನೌಕರಿ ಮಾಡತಕ್ಕವರು ಧಾರ್ಮಿಕ ವಿಚಾರದವರು ಮಕ್ಕಳನ್ನು ಶಾಲೆಗೆ ಕಳಿಸುತ್ತಾರೆ. **ಶಿಕ್ಷಣ ಬೇಕೇ ಬೇಕು. ಒಕ್ಕಲುತನ ಮಾಡುವವರು, ದನ ಕಾಯತಕ್ಕಂಥವರ**

-

**ಮಕ್ಕಳನ್ನು ಶಾಲೆಗೆ ಕಳಿಸುವದಿಲ್ಲ. ಮುಂದುವರಿದವರು ಮುಂದುವರಿದಿದ್ದಾರೆ. ಮೊದಲಿನಿಂದಲೂ ಹಿಂದುಳಿದವರು ಈಗಲೂ ಸಹ ಹಿಂದುಳಿದಿದ್ದಾರೆ ಗ್ರಾಮೀಣ ಪ್ರದೇಶದಲ್ಲಿ ಇಂಥ ಜನ ಹೆಚ್ಚಿಗಿದ್ದಾರೆ. ಇಂಥವರಿಗೆ ಶಿಕ್ಷಣ ಕೊಟ್ಟು ಒಳ್ಳೇ ನಾಗರಿಕ ಮಟ್ಟಕ್ಕೆ ತರಲು ಬಹಳ ಲಕ್ಷ್ಯ ಕೊಟ್ಟು ಪ್ರಯತ್ನ ಮಾಡಬೇಕಾದುದು ಅತ್ಯಗತ್ಯವಾಗಿದೆ.** ಇದನ್ನು ತರಬೇತು ಮಾಡುವದಕ್ಕೆ ಎಸ್. ಎಸ್. ಎಲ್.ಸಿ. ಪಾಸು ಮಾಡಿಕೊಂಡು ನಿರದ್ಯೋಗಿಗಳಾದವರ ಸೇವೆ ದೊರಕಿಸಿಕೊಂಡರೆ ಒಂದು ಒಳ್ಳೆಯ ಉಪಯುಕ್ತವಾದ ಕೆಲಸ ಮಾಡಿದಂತಾಗುತ್ತದೆಂದು ಹೇಳ ಬಯಸುತ್ತೇನೆ. ಇಂದು ನಾವು ಅಣು ಯುಗದಲ್ಲಿದ್ದೇವೆ ಆದರೆ ನಮ್ಮ ಭಾರತ ಇನ್ನೂ ಸೈಕಲ್ ಯುಗದಲ್ಲಿದೆ ಪರದೇಶಗಳ ಮಟ್ಟಕ್ಕೆ ನಾವು ಬರಬೇಕಾಗಿದೆ ಇಂದು ಇಲ್ಲಿ ಏನು ನಡೆದಿದೆ ಎಂಬುದನ್ನು ತಿಳಿದುಕೊಳ್ಳಲು ಓದು ಬರದ ಎಲ್ಲರಿಗೂ ಬರಬೇಕು ಜಗತ್ತಿನಲ್ಲಿ ಇಂದು ಏನೇನು ನಡೆದಿದೆ ತಿಳಿಯದೇ ಯಾವ ಪ್ರಗತಿಯೂ ಕಂಡು ಬರುವದಕ್ಕೆ ಸಾದ್ಯವಿಲ್ಲ. **ಒಕ್ಕಲುತನ ಮಾಡತಕ್ಕಂಥವರಿಗೂ ಓದು -ಬರಹ ಬರಬೇಕು ಓದು ಬರಹ ಬಾರದೇಯಿದ್ದರೆ ಸಂಶೋಧನೆ ಮಾಡಿದ್ದನ್ನು ಜಾರಿಗೆ ತರಲು, ಅಸಾಧ್ಯವಾಗುತ್ತದೆ.** ಇತ್ತೀಚೆಗೆ ಒಕ್ಕಲುತನದಲ್ಲಿ ಪ್ರಗತಿಯು ಭರದಿಂದ ನಡೆಯುತ್ತದೆ. ಸಂಶೋಧನೆಯ ಮೂಲಕ ಸುಧಾರಿಸಿದ ಬೀಜ, ಗೊಬ್ಬರ ಉಪಯೋಗಿಸಿಕೊಂಡು ಒಂದು ಎಕರೆ ಭೂಮಿಯಲ್ಲಿ 5-6 ಎಕರೆಗಳಲ್ಲಿ ಉತ್ಪತ್ತಿಯಾಗತಕ್ಕಂಥ ಬೆಳೆ ಉತ್ಪಾದನೆ ಮಾಡುತ್ತಿದ್ದಾರೆ. ಇದೆಲ್ಲವನ್ನು ತಿಳಿದುಕೊಂಡು ಸುಧಾರಿಸಿದ ಪದ್ದತಿಯನ್ನು ಅನುಸರಿಸಬೇಕು. ಬೆಳೆಗಳ ನಾಶವನ್ನು ತಡೆಗಟ್ಟುವದಕ್ಕೆ ಔಷಧ ಉಪಯೋಗ ಮಾಡಿಕೊಳ್ಳಲು ಶಿಕ್ಷಣ ಅತ್ಯಂತ ಅವಶ್ಯವಾಗಿದೆ. ಅಶಿಕ್ಷಿತರು ಈ ರೀತಿ ವ್ಯವಸಾಯ ಬೆಳೆಸಲು ಸಾಧ್ಯವಿಲ್ಲ. ಅಂಥವರು ಕೆಳಮಟ್ಟಕ್ಕೆ ಇಳಿಯುತ್ತಿದ್ದಾರೆ. ಆದುದರಿಂದ ಅವರ ವಿಚಾರದಲ್ಲಿ ಶಿಕ್ಷಣ ಮಟ್ಟ ಹೆಚ್ಚು ಬೆಳೆಸುವದು ಅತ್ಯಂತ ಅವಶ್ಯವಿದೆ.

ಇನ್ನೊಂದು ಮಾತನ್ನು ಹೇಳ ಬಯಸುತ್ತೇನೆ. ನಮ್ಮ ರಾಜ್ಯದಲ್ಲಿ ಅಗ್ರಿಕಲ್ಚರಲ್ ಯುನಿವರ್ಸಿಟಿ ಆದ ಮೇಲೆ, ರೀಸರ್ಚ್ ಇನ್‌ಸ್ಟಿಟ್ಯೂಟ್ಸ್ ರೀಸರ್ಚ ಫಾರ್ಮ್ಸ್ ಆದ ಮೇಲೆ ಇವುಗಳನ್ನು ಸರ್ಕಾರದವರು ಈ ಯುನಿವರ್ಸಿಟಿಗೆ ಒಪ್ಪಿಸಿದ್ದಾರೆ. ರಿಸರ್ಚ ಯುನಿವರ್ಸಿಟಿಗಳಲ್ಲಿ ನಡೆಯುತ್ತಿರುವ ಸಂಶೋಧನೆಗಳನ್ನು ಉಪಯೋಗವನ್ನು ಒಕ್ಕಲಿಗರಿಗೆ ಮಾಡಿಕೊಡಬೇಕಾಗುವದು ಅವಶ್ಯಕ. ಸುತ್ತ ಮುತ್ತ

ಇರತಕ್ಕಂಥವರಿಗೆ ತರಬೇತಿ ಸಿಕ್ಕುವದು ಅವಶ್ಯಕ. ಅವರಿಂದ ಉಳಿದವರಿಗೆ ತರಬೇತಿ ಸಿಕ್ಕಬೇಕು ಇದಕ್ಕಾಗಿ ಸಂಶೋಧನೆ ಕೇಂದ್ರಗಳಿಗೆ ಜನತೆಯ ಸಂಪರ್ಕ ಬರುವಂತೆ ಇರಬೇಕು. ಆದರೆ ಯುನಿವರ್ಸಿಟಿ ಆದ ಮೇಲೆ, ಅವರು ಬೇರೆ ಸಂಶೋಧನೆ ಕೆಲಸ ಬೇರೆ ಎಂಬ ಮನೋಭಾವನೆ ಇಂದು ಉಂಟಾಗಿದೆ. ಸೀಡ ಪ್ರೊಡಕ್ಷನ್ ಕಾರ್ಯಕ್ರಮದಲ್ಲಿ ಸರ್ಕಾರದವರು ಅತ್ಯಂತ ಎಚ್ಚರಿಕೆಯಿಂದ ಕ್ರಮ ತೆಗೆದುಕೊಂಡು ಅನೇಕ ರಿಸರ್ಚ ಇನ್‌ಸ್ಟಿಟ್ಯೂಟ್ಸ್ ಮಾಡಿದ್ದಾರೆ. ಆದರೆ ಅವರು ರೈತರಿಗೆ ಸಲಹೆ ಕೊಡುವದನ್ನು ಬಿಟ್ಟು ಕೊಟ್ಟಿದ್ದಾರೆ. ಅವರು ರೈತರು ಕೂಡ ಪಾಲುಗಾರಿಕೆಯಿಂದ ವ್ಯವಸಾಯ ಮಾಡುವದಕ್ಕೆ ಜಮೀನು ಖರೀದಿ ಮಾಡಿಕೊಂಡು ರೈತರ ಜಮೀನಿನಲ್ಲಿ ಕೂಡ ಸೀಡ ಪ್ರೊಡಕ್ಷನ್‌ದಲ್ಲಿ ಹಿಸ್ಸೆ ಇಟ್ಟುಕೊಂಡಿದ್ದು ಅದಕ್ಕೆ ಸೂಕ್ತ ಕಾಗದ ಪತ್ರ ಸಹ ಬರೆಸಿಕೊಂಡಿದ್ದಾರೆ. ಇವರು ದುಡ್ಡಿನ ಆರೋಪ ಎಷ್ಟರ ಮಟ್ಟಿಗೆ ಬೆಳೆಯುತ್ತಿದೆ ಎಂಬದನ್ನು ನೋಡಬೇಕು ರೈತರಿಗೆ ಸಲಹೆ ಕೊಡಬೇಕೆಂದು ಈ ಸಂಶೋಧನೆಗಳು ಇರುತ್ತವೆ. ಆದರೆ ಈ ರೀತಿ ರೈತರನ್ನು ಶೋಷಣೆ ಮಾಡುವದು ಒಳ್ಳೆಯದಲ್ಲ. ಇದರಿಂದ ಬಹಳ ಅನ್ಯಾಯವಾಗುತ್ತಿದೆ. ಇದನ್ನು ಯುನಿವರ್ಸಿಟಿ ಲಕ್ಷಕ್ಕೆ ತರುತ್ತೇನೆ. ಈ ಅನ್ಯಾಯ ತಿದ್ದಿಕೊಳ್ಳಬೇಕೆಂದು ಸರ್ಕಾರದ ಮೂಲಕ ಅವರಿಗೆ ತಿಳಿಸಬಯಸುತ್ತೇನೆ. ಕಾಲೇಜ ಶಿಕ್ಷಣ ಪ್ರಮಾಣ ಬೆಳೆಯಬೇಕು ಅಂದರೆ ಕಲ್ಯಾಣವಾಗುತ್ತದೆ. ಸರಿಯಾದ ಶಿಕ್ಷಣ ಸಿಕ್ಕರೆ ಹಳ್ಳಿಗಾಡಿನ ರೈತರು ಮುಂದುವರಿಯಲು ಸಾಧ್ಯವಾಗುತ್ತದೆಂದು ಹೇಳಿ ನನ್ನ ಭಾಷಣ ಮುಗಿಸುತ್ತೇನೆ.

# ಜನಪರ ಕಾಳಜಿ

## 1967-68 ರ ಆಯ-ವ್ಯಯ

**ಶ್ರೀ ಎ. ಆರ್. ಪಂಚಗಾವಿ ಅವರ ಪೌರನೀತಿಯ ಪರಿಜ್ಞಾನ, ಕೃಷಿ ಕ್ಷೇತ್ರ ಎದುರಿಸುತ್ತಿರುವ ಸಮಸ್ಯೆ ಸವಾಲುಗಳ ಕುರಿತು ಅವರ ಅಧ್ಯಯನ - ಅನುಭವಗಳು, ಅಗಾಧ! ಪ್ರಸ್ತುತ ಇಲ್ಲಿ ಭೂಕಂದಾಯ, ಭೂಮಿ ದಾಖಲಾತಿ, ವತನದಾರಿ ರದ್ಧತಿ; ಗಡಿ ಜಿಲ್ಲೆಗಳು ಎದುರಿಸುತ್ತಿರುವ ಬರಗಾಲ ನೆನೆಗುದಿಗೆ ಬಿದ್ದ ನೀರಾವರಿ ಯೋಜನೆ ಕುರಿತು ಗಮನ ಸೆಳೆಯುತ್ತಾರೆ.**

**ಶ್ರೀ ಎ. ಆರ್. ಪಂಚಗಾವಿ :** ಸ್ವಾಮಿ, ಈ ಸಲದ 1967 -68 ನೇ ಸಾಲಿನ ಬಡ್ಜೆಟ್ಟಿನ ಬಗ್ಗೆ ನಾನು ಸರ್ಕಾರದ ಗಮನವನ್ನು ಸೆಳೆಯ ಬಯಸುತ್ತೇನೆ. ಮೊಟ್ಟ ಮೊದಲನೆಯದಾಗಿ ಎಲ್ಲರಿಗೂ ಅತ್ಯಂತ ಮಹತ್ವದ ಪ್ರಶ್ನೆ ಎಂದರೆ, ಭೂಕಂದಾಯದ ರಿಯಾಯತಿಯ ಬಗ್ಗೆ ನಮ್ಮ ರಾಜ್ಯದಲ್ಲಿ ಅನೇಕ ಕಡೆ ಊಹಾಪೋಹಗಳು ನಡೆಯುತ್ತಿವೆ. ಸರ್ಕಾರದವರು ಕೂಡ ಭೂಕಂದಾಯ ರದ್ದಿಯಾತಿಯ ಬಗ್ಗೆ ಘೋಷಣೆಯನ್ನು ಮಾಡಿದರು, ಆದರೆ ಇದರ ಬಗ್ಗೆ ಮುಂದೆ ಯಾವ ಕ್ರಮ ವನ್ನು ತೆಗೆದುಕೊಳ್ಳುತ್ತಾರೆ. ಅಥವಾ ಅದು ಯಾವ ಮಟ್ಟಿಗೆ ಬಂದಿದೆ ಎಂಬುದು ಇಲ್ಲಿಯವರೆಗೂ ಯಾವುದೇ ವಿಚಾರ ಗೊತ್ತಾಗಲಿಲ್ಲ. ಆದರಲ್ಲಿ ಅನೇಕ ತೊಂದರೆಗಳೂ ಇವೆ. ಆ ತೊಂದರೆಗಳನ್ನೆಲ್ಲಾ ನಿವಾರಣೆ ಮಾಡಬೇಕೆಂದು ಒಂದು ಮಂತ್ರಿಮಂಡಲದ ಉಪಸಮಿತಿಯನ್ನು ನೇಮಿಸಿದರು. ಆ ಮಂತ್ರಿಮಂಡಲದ ಉಪಸಮಿತಿಯವರ ವರದಿ ಇಷ್ಟರಲ್ಲೇ ಸರ್ಕಾರಕ್ಕೆ ಬರಬಹುದು. ಅದರ ಮೇಲೆ ಸರ್ಕಾರದವರು ಯಾವ ನಿರ್ಣಯವನ್ನು ತೆಗೆದುಕೊಳ್ಳುತ್ತಾರೆಯೋ ಅದು ಒಂದ ಮಸೂದೆಯ ರೂಪದಲ್ಲಿ ಈ ಸಭೆಯ ಮುಂದೆ ಬರಬೇಕಾಗುತ್ತದೆ. ಭೂಕಂದಾಯ ಮತ್ತು ಭೂಮಿಯ ದಾಖಲಾತಿ ಇತ್ಯಾದಿಗಳ ಬಗ್ಗೆ ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ನಮ್ಮ ಕಡೆ ವಿಶೇಷವಾಗಿ ಜನರ ಒಂದು ಗಮನವನ್ನು ಸೆಳೆಯತಕ್ಕದ್ದು ವತನದಾರಿ ರದ್ದಿಯಾತಿಯ ವಿಷಯ. ಸರ್ಕಾರ ಎಲ್ಲಾ ಇನಾಮತಿಗಳನ್ನು ರದ್ದು ಮಾಡಲು ಹೊರಟಿದೆ. ಈಗ ಇದರಲ್ಲಿ ಕೆಲವು ಮಾತ್ರ ಉಳಿದುಕೊಂಡಿವೆ. ದೇವಸ್ಥಾನಗಳ ವತನಗಳು, ಮತ್ತೆ ಕೆಲವು ವತನಗಳು ಉಳಿದುಕೊಂಡಿವೆ. ಉಳಿದ ಅನುವಂಶಿಕ ಗ್ರಾಮಾಧಿಕಾಗರಿಗಳ ವತನದಾರಿ ಪದ್ಧತಿ ಈಗಾಗಲೇ ರದ್ದಾಗಿದೆ. ಇದರಲ್ಲಿ ಬಿಜಾಪುರ, ಬೆಳಗಾವಿ ಮತ್ತು ಧಾರವಾಡ

ಜಿಲ್ಲೆಗಳಲ್ಲಿ ಬಹಳ ಮಟ್ಟಿಗೆ ಪುರಗಣ ಮತ್ತು ಕುಲಕರ್ಣಿ ವತನದಾರರು ತಮ್ಮ ಜಮೀನು ಸಂಬಂಧದಲ್ಲಿ ಆರುಪಟ್ಟು, ಹತ್ತು ಪಟ್ಟು ಇಪ್ಪತ್ತು ಪಟ್ಟು ಹಣವನ್ನು ಸರ್ಕಾರಕ್ಕೆ ತುಂಬಿ ಅದನ್ನು ವಿಲೇವಾರಿ ಮಾಡುವುದಕ್ಕೆ ಬರುವ ಹಾಗೆ ಮಾಡಿಕೊಂಡಿದ್ದಾರೆ. ಯಾವ ಜಮೀನಿನಲ್ಲಿ ತಮ್ಮ ಹಿತಾಸಕ್ತಿ ಇತ್ತೋ ಅಂಥಾದ್ದಕ್ಕೆ ಹಣವನ್ನು ತುಂಬಿ ತಮ್ಮ ಹಕ್ಕನ್ನು ಉಳಿಸಿಕೊಂಡಿದ್ದಾರೆ. ಯಾವ ಜಮೀನಿನಲ್ಲಿ ತಮ್ಮ ಹಿತಾಸಕ್ತಿ ಇರಲಿಲ್ಲವೋ ಅಂಥಾದಕ್ಕೆ ಹಣವನ್ನು ತುಂಬದೆ ಹಾಗೆಯೇ ಬಿಟ್ಟು ಅದರ ಹಕ್ಕು ನಷ್ಟವಾಗಿದೆ. ಅನೇಕ ಕಡೆ ಹೀಗಾಗುತ್ತದೆ ಎಂದು ಈ ಬಗ್ಗೆ ಹೈಕೋರ್ಟಿನಲ್ಲಿ ಕೆಲವು ಕೇಸುಗಳೂ ಸಹ ಇವೆ. ಈಗಲೂ ಸಹ ವತನದಾರರು ಅರ್ಜಿಯನ್ನು ಕೊಟ್ಟರೆ ಅಂಥವುಗಳನ್ನು ಉಳಿಸಿಕೊಳ್ಳಬಹುದು ಎನ್ನುವ ಬಗ್ಗೆ ಹೈಕೋರ್ಟಿನಲ್ಲಿ ಕೆಲವು ತೀರ್ಮಾನವಾಗಿವೆ. ಅಂತೂ ಒಟ್ಟಿನಲ್ಲಿ ಈ ವಿಚಾರದಲ್ಲಿ ಒಂದು ಅನಿಶ್ಚಿತ ಪರಿಸ್ಥಿತಿ ಉಂಟಾಗಿದೆ. ಈ ಇನಾಮ್ ರದ್ದಿಯಾತಿಯ ಬಗ್ಗೆ ಸರ್ಕಾರದವರು ಒಂದು ಹುಕುಂ ಹೊರಡಿಸಿ ಇನಾಮುದಾರರು ರೈತರು ಎಲ್ಲರೂ ಜುಲೈ ತಿಂಗಳು 26 ನೇ ತಾರೀಖಿನೊಳಗಾಗಿ ಹಣವನ್ನು ತುಂಬಬೇಕು ಎಂದು ಹೇಳಿದ್ದಾರೆ. ನಮ್ಮ ಭಾಗದ ಸುಮಾರು 20 ಎಂ. ಎಲ್.ಎ ಗಳಾದ ನಮಗೆಲ್ಲವೂ ಇದರ ಬಗ್ಗೆ ಬಹಳ ತೊಂದರೆಗಳಿವೆ, ಈ ತೊಂದರೆಗಳನ್ನು ನಿವೇದನೆ ಮಾಡುವುದಕ್ಕೆ ಅವಕಾಶವನ್ನು ಕೊಡಬೇಕು, ಇದರ ಬಗ್ಗೆ ಹೆಚ್ಚಿನ ಕಾಲಾವಕಾಶವನ್ನು ಕೊಡಬೇಕೆಂದು ಒಂದು ಮನವಿಯನ್ನು ಮಾನ್ಯ ಕಂದಾಯ ಮಂತ್ರಿಗಳಿಗೆ ಒಪ್ಪಿಸಿದ್ದೇವೆ. ಇದರ ಬಗ್ಗೆ ಇಲ್ಲಿಯವರೆಗೆ ಅವರಿಂದ ಯಾವ ಉತ್ತರವೂ ಬಂದಿಲ್ಲ. ಈ ಪರಗಣಿ ವತನ ಜಮೀನಿನ ಬಗ್ಗೆ ಒಂದೊಂದು ಊರಿನವರು ಲಕ್ಷಾಂತರ ರೂಪಾಯಿಗಳನ್ನು ಸರ್ಕಾರಕ್ಕೆ ತುಂಬಬೇಕಾಗುತ್ತದೆ. ಈ ಅನಿಶ್ಚಿತ ಪರಿಸ್ಥಿತಿ ಬಗ್ಗೆ ಏನಾಗಿದೆ ಎಂಬುದನ್ನು ನಾವು ತಿಳಿಯುವಂತಿಲ್ಲವಾಗಿದೆ. ಈ ಜಮೀನಿನ ಬಗ್ಗೆ ಕೆಲವರು 20 ಪಟ್ಟು, 30 ಪಟ್ಟು, ಕೆಲವರು 100-200 ಪಟ್ಟು ಹಣವನ್ನು ಸರ್ಕಾರಕ್ಕೆ ತುಂಬಬೇಕಾಗಿದೆ. ಇದರ ಜೊತೆಗೆ ಕೆಲವು ಹಿಂದಿನ ಗೇಣಿಯನ್ನು ತುಂಬಬೇಕು. ಇಂಥಾ ಒಂದು ಸಂದಿಗ್ಧ ಪರಿಸ್ಥಿತಿ ಉಂಟಾಗಿದೆ. ಇದನ್ನು ನೋಡಿದರೆ ಇನಾಮ್ ಹಳ್ಳಿಗಳಲ್ಲಿರತಕ್ಕ ರೈತರು ಕಂಗಾಲಾಗುವ ಪರಿಸ್ಥಿತಿ ಉಂಟಾಗಿದೆ. ಇನಾಂ ಹಳ್ಳಿಗಳಲ್ಲಿ ಹುಟ್ಟಿದಂಥ ರೈತ ನಾಯಿ ಬಾಳುವೆ ಬಾಳುವಂತಹ ಪರಿಸ್ಥಿತಿ ಇದೆ. ಇನಾಂದಾರರು ರೈತರನ್ನು ಅನೇಕ ವರ್ಷಗಳಿಂದ ಗೋಳಾಡಿಸುತ್ತಿದ್ದಾರೆ. ಇನಾಂದಾರರು ರೈತರ ಮೇಲೆ ಅನೇಕ ರೀತಿಯ ಹೊರೆಯನ್ನು ಹೊರಿಸಿದ್ದಾರೆ. ಹೀಗಾಗಿ ಈಗ ಇನಾಂ ರದ್ದು ಮಾಡುವುದಾದರೆ ರೈತನಿಗೆ ಯಾವ ಸುಖವೂ ಆಗಿಲ್ಲ. ಇನಾಂ ಹಳ್ಳಿಗಳಲ್ಲಿ ರೈತರು ವಂಶಪಾರಂಪಾರ್ಯವಾಗಿ ಬಂದಂಥ ತಮ್ಮ ಜಮೀನುಗಳ ಬಗ್ಗೆ ತಮ್ಮ ಮಕ್ಕಳ ಹೆಸರಿನಲ್ಲಿ

ದಾಖಲೆಗಳನ್ನು ತೆಗೆದುಕೊಂಡು , ತಮ್ಮ ತಮ್ಮ ಜಮೀನುಗಳನ್ನು ಬೇರೆಯವರಿಗೆ ಮಾರಾಟ ಮಾಡಿದ್ದಾರೆ. ಸರ್ಕಾರದವರು ಖಾಯಂ ಆಗಿ ವಂಶಪಾರಂಪರವಾಗಿ ಬಂದಂಥ ರೈತವಾರಿ ಹಳ್ಳಿಗಳ ಖಾತೇದಾರ ರೈತರನ್ನು ಇನಾಂದಾರ ಒಂದು ವಿಧವಾಗಿ ನೋಡಿಕೊಳ್ಳುತ್ತಿದ್ದಾರೆ. ಈ ರೀತಿಯ ಭೇದ ಭಾವವನ್ನು ಮಾಡುವುದರಲ್ಲಿ ಯಾವ ಅರ್ಥವೂ ಇಲ್ಲ. ಎಂದು ನಾನು ಸ್ಪಷ್ಟವಾಗಿ ಹೇಳಬಯಸುತ್ತೇನೆ. ಮೊದಲು ರೈತರು ಇನಾಂದಾರ ಹಿಡಿತದಲ್ಲಿ ನರಳುತ್ತಿದ್ದರು. ಈಗ ಸರ್ಕಾರದ ವಸೂಲ ವಿಧಾನದಲ್ಲಿ ನರಳುತ್ತಿದ್ದಾರೆ. ಈ ಇನಾಂ ಗ್ರಾಮಗಳು ಏನಿವೆಯೋ ಅವುಗಳಲ್ಲಿ ಜಮೀನುಗಳು ವಂಶಪಾರಂಪರ್ಯವಾಗಿ ಬಂದ ಹಕ್ಕುಗಳಾಗಿವೆ ಎಂಬುದನ್ನು ಗ್ರಾಮದ ದಾಖಲಾತಿಗಳು ತೋರಿಸಿ ಕೊಡುತ್ತವೆ. ಅಂಥ ಹಳ್ಳಿಗಳಲ್ಲಿ ಅನೇ ಜನ ಖಾತೇದಾರ (ಕಾಯಂಕುಳ) ರೈತರು ಇದ್ದಾರೆ. ಆ ಹಳ್ಳಿಗಳಲ್ಲಿ ರತಕ್ಕ ರೈತರು ಪೂರ್ಣವಾಗಿ ಮಾಲಕಿ ಪ್ರಕಾರ ವಹಿವಾಟುಗಳನ್ನು ನಡೆಸುತ್ತಿದ್ದಾರೆ. ದುರ್ದೈವವಶಾತ್ ಯಾರೋ ರಾಜರುಗಳು, ಆಡಳಿತಗಾರರು, ಇನಾಂದಾರರಿಗೆ ಆ ಇನಾಂ ಗ್ರಾಮಗಳನ್ನು ಯಾವುದೋ ಒಂದು ಉದ್ದೇಶಕ್ಕೋಸ್ಕರ ಕೊಟ್ಟಾಕ್ಷಣಕ್ಕೆ ಅಲ್ಲಿಯ ರೈತರು ಇನಾಂದಾರರಿಗೆ ಗುಲಾಮರಾಗಿ ಬಾಳುವಂತಹ ಒಂದು ಪರಿಸ್ಥಿತಿ ಒದಗಿತ್ತು. ಆ ಜನರು ಆ ಇನಾಂ ಗ್ರಾಮದ ಜಮೀನುಗಳಲ್ಲಿ ರೈತರಿಗೆ ಎಲ್ಲ ಹಕ್ಕುಗಳು ಇದ್ದವು. ಅದರಿಂದ ಇನಾಂದಾರರಿಗೆ ಕೆಲವು ಮಾತ್ರ ಲಾಭ ಇತ್ತು. ಆ ಇನಾಂದಾರರು ರೈತರು ಕಡೆಯಿಂದ ಕೇವಲ ಭೂ ಕಂದಾಯವನ್ನಷ್ಟೇ ವಸೂಲು ಮಾಡುತ್ತಿದ್ದರು. ಆ ರೀತಿ ಅವರು ಕಂದಾಯದ ರೂಪದಲ್ಲಿ ವಸೂಲು ಮಾಡಿದಂತಹ ಹಣದಲ್ಲಿ ಕೆಲವು ಭಾಗ ಹಣವನ್ನು ಜೂಡಿ ಸರ್ಕಾರಕ್ಕೆ ತುಂಬುತ್ತಿದ್ದರು. ಉಳಿದ ಹಣ ಅವರಿಗೆ ನಫೆಯಾಗಿ ಉಳಿಯುತ್ತಿತ್ತು. ಇಂಥಾ ಒಂದು ಹಕ್ಕನ್ನು ನಾಶ ಮಾಡುವುದರಿಂದ , ಇನಾಂಮ್ತಿಗಳನ್ನು ರದ್ದು ಮಾಡುವುದರಿಂದ ಇನಾಂದಾರರಿಗೆ ಏನು ಲಾಭ ಇದೆಯೋ ಇಂಥಾದ್ದು ಹೊರಟು ಹೋಗುತ್ತದೆ. ರೈತರಿಗೆ ಮಾತ್ರ ಇದರಿಂದ ಯಾವ ಲಾಭವೂ ಇರಲಿಲ್ಲ. ಹಾನಿಯೂ ಇರಲಿಲ್ಲ. ಮೊದಲು ಎಷ್ಟು ಕಂದಾಯ ಕೊಡುತ್ತಿದ್ದರು ಈಗಲೂ ಕೊಡುತ್ತಿದ್ದಾರೆ. ಇನಾಮ್‌ದಾರರೂ ತಮಗೆ ಏನಾದರೂ ಲಾಭ ಬರುತ್ತಿದೆಯೋ ಅದನ್ನು ಪಡೆದುಕೊಳ್ಳಬಹುದು. ಇದನ್ನೆಲ್ಲಾ ಸರ್ಕಾರದವರು ಕೂಲಂಕುಷವಾಗಿ ಪರಿಶೀಲನೆ ಮಾಡಬೇಕು. ರೈತರಿಗೆ ಪೂರ್ಣ ಪರಿಹಾರವನ್ನು ಒದಗಿಸಬೇಕು. ಏಕೆಂದರೆ ಇದರಿಂದ ಒಂದು ಕಡೆ ರೈತರಿಗೆ ಒಂದು ರೀತಿ ಮಾಡಿದಂತಾಗುತ್ತದೆ. ಇನ್ನೊಂದು ಕಡೆಯವರಿಗೆ ಇನ್ನೊಂದು ರೀತಿ ಪಕ್ಷಪಾತ ಮಾಡಿದಂತಾಗಬಹುದು. ಇನಾಂ ಹಳ್ಳಿಗಳ ರೈತರು ಬೇರೆ, ಇತರ ರೈತವಾರಿ ಹಳ್ಳಿಗಳ ರೈತರು ಬೇರೆ ಎಂದು ಹೇಳುವುದಕ್ಕಾಗುವುದಿಲ್ಲ. ಸಾಲ ಸವಲತ್ತುಗಳು ಇನಾಮ

ಹಳ್ಳಿಯ ರೈತರಿಗೆ ಸರಿಯಾಗಿ ಸಿಗುತ್ತಾ ಇಲ್ಲ. ಇಷ್ಟೊಂದು ವಿಧವಾದ ಕಷ್ಟನಷ್ಟಗಳನ್ನು ಅನುಭವಿಸಿ ಬಂದಿದ್ದಾರೆ. ಯಾವಾಗ ಸರ್ಕಾರದವರು ಕಂದಾಯವನ್ನು ರದ್ದು ಮಾಡುವುದಕ್ಕೆ ಹೊರಟಿದ್ದಾರೆಯೋ, ಅದರಿಂದ ಸಣ್ಣ ಸಣ್ಣ ರೈತರಿಗೆ ಒಂದು ಲಾಭ ಸಿಗಬಹುದು, ಮತ್ತು ಭೂಮಿ ಸಾಗುವಳಿ ಮಾಡುವುದಕ್ಕೆ ಯೋಗ್ಯವಾಗಬಹುದು. ಅವರಿಗೆಲ್ಲಾ ಒಂದು ಪರಿಹಾರ ಸಿಗಲಿ ಎನ್ನುವ ಕಾಲಕ್ಕೆ ನಾವು ಈಗ ಇನ್ನೊಂದು ರೀತಿಯ ಹೊರೆಯನ್ನು ಹೇರುವುದು ಸರಿಯಲ್ಲ. ಒಂದು ಕಡೆ ಪರಿಹಾರ ಕೊಡುತ್ತೇವೆ ಎಂದು ಹೇಳುವದು. ಇನ್ನೊಂದು ಕಡೆ ಬೇರೆ ರೀತಿಯ ಹೊರೆಯನ್ನು ಹೊರಿಸುವುದು, ಇದನ್ನೆಲ್ಲಾ ಸರ್ಕಾರವರು ಪೂರ್ಣವಾಗಿ ವಿಚಾರ ಮಾಡಬೇಕು. ಇದು ನಮ್ಮ ಮೂರು ಜಿಲ್ಲೆಯಲ್ಲಿ ಇರುವುದನ್ನು ಹೇಳುತ್ತಿದ್ದೇನೆ. ಇನ್ನು ಇತರ ಬೇರೆ ಕಡೆಗಳಲ್ಲೂ ಇರಬಹುದು. ಈಗಾಗಲೇ ಕೆಲವು ರೈತರು ತಮ್ಮ ಜಮೀನನ್ನು ಮಾರಾಟ ಮಾಡುವುದಕ್ಕೆ ಸಣದು ತುಂಬಿದ್ದಾರೆ. ಅಂಥವರ ಹಣವನ್ನು ವಾಪಸ್ಸು ಕೊಡುವುದು ಒಂದೇ ದಾರಿ. ಆದ್ದರಿಂದ ಎಲ್ಲಾ ರೈತರಿಗೂ ಒಂದೇ ರೀತಿಯ ಸವಲತ್ತುಗಳನ್ನು ಕೊಡುವುದಕ್ಕೆ ಸರ್ಕಾರದವರು ಯೋಗ್ಯ ಕಾರ್ಯಕ್ರಮಗಳನ್ನು ತೆಗೆದುಕೊಳ್ಳಬೇಕೆಂದು ಹೇಳುತ್ತಿದ್ದೇನೆ. ಜುಲೈ ತಿಂಗಳು 26 ರರೊಳಗೆ ಏನು ತುಂಬಬೇಕಾಗಿದೆ ಅಷ್ಟು ತುಂಬುವದು ರೈತರಿಗೆ ಅಸಾಧ್ಯದ ಮಾತು. ಈಗಾಗಲೇ ಹೆಚ್ಚಿನ ಕಂದಾಯವನ್ನು ವಸೂಲು ಮಾಡುತ್ತಿದ್ದಾರೆ. ರೈತರು ಸಾಕಷ್ಟು ಕಂದಾಯ ತುಂಬಿದ್ದಾರೆ. ಅದರ ಜೊತೆಗೆ ಇದನ್ನು 26 ಪಟ್ಟು ತುಂಬುವುದು ಎಂದರೆ ಅದು ಬಹಳ ಕಷ್ಟದ ಮಾತು. ಇದನ್ನು ಕೂಡಲೇ ವಿಚಾರ ಮಾಡಬೇಕೆಂದು ಕೇಳಿಕೊಳ್ಳುತ್ತೇನೆ. ಆದ್ದರಿಂದ ಜುಲೈ 26ರ ರೊಳಗೆ ತುಂಬಬೇಕೆನ್ನುವ ಹುಕುಂನ್ನು ತಡೆ ಹಿಡಿಯಬೇಕೆಂದು ಕೇಳಿಕೊಳ್ಳುತ್ತೇನೆ.

ಇನ್ನೂ ಅನೇಕ ಮಾತುಗಳನ್ನು ಹೇಳುವುದಾದರೆ, ಇಂದು **ಘಟಪ್ರಭಾ ಯೋಜನೆಯನ್ನು ತೆಗೆದುಕೊಳ್ಳೋಣ. ಇದು ನಮ್ಮ ಉತ್ತರ ಕರ್ನಾಟಕದ ಅತಿ ಹಳೆಯ ಯೋಜನೆಯಾಗಿದೆ. ಇದು ಅತ್ಯಂತ ಲಾಭದಾಯಕವಾದ ಯೋಜನೆ. ದುರಾದೃಷ್ಟವಶಾತ್ ಅನೇಕ ತೊಂದರೆಗಳನ್ನು ಎದುರಿಸಿ ಹಿಂದೆ ಬಿದ್ದಿದೆ. ಇದು ಅನೇಕ ಕಷ್ಟ ನಷ್ಟಗಳನ್ನು ಎದುರಿಸಬೇಕಾಯಿತು.** ಅದರಿಂದ ಇಲ್ಲಿಯವರೆಗೆ ಸುಮಾರು ಏಳು ಲಕ್ಷ ಎಕರೆ ನೀರಾವರಿಯಾಗುತ್ತಿಲ್ಲ. ನಮಗೆ ಏಳರಿಂದ 14 ಟನ್ನಿನಷ್ಟು ಆಹಾರ ಧಾನ್ಯ ಸಿಗುತ್ತಿತ್ತು. ಅದೆಲ್ಲಾ ಹೋಗಿ, ಇವತ್ತಿನ ದಿವಸ ನಮ್ಮ ಯೋಜನೆ ಕೇವಲ ಅಡಿಪಾಯದಲ್ಲೇ ಇದೆ. ಅದರ ಜೊತೆಗೆ ರಾಜ್ಯ ಪುನರಚನೆಯಲ್ಲಿ ಸಿಕ್ಕ ಹಡಲ್ಗಿ ಶೆಟ್ಟಿಸಹಳ್ಳಿ ಕಡೆಗಳಲ್ಲಿ ಅಣೆಕಟ್ಟು ಕಟ್ಟುವುದಕ್ಕೆ ಆಯ್ಕೆಯಾದ ಸ್ಥಳ ಮಹಾರಾಷ್ಟ್ರಕೆ ಹೋಗುತ್ತದೆ. ಆದ್ದರಿಂದ ನಾವು ಇನ್ನೂ ಕೆಳಗೆ,

100-150 ಅಡಿ ಕೆಳಗೆ ಬರಬೇಕಾಯ್ತು. ಇದರಿಂದ ಒಂದುವರೆ ಲಕ್ಷ ಎಕರೆ ಸವದತ್ತಿ, ಬಾದಾಮಿ, ರಾಮದುರ್ಗ ನೀರಾವರಿ ಕ್ಷೇತ್ರದ ಭಾಗವು ಕಾಯಂ ನೀರಿನ ಲಾಭವನ್ನು ಕಳೆದುಕೊಳ್ಳುವ ಹಾಗಾಯ್ತು. ಇದೇನೂ ಸಣ್ಣ ಮಾತಲ್ಲ. ನಮ್ಮ ರಾಷ್ಟ್ರದ ಆಡಳಿತದ ಲೋಪ ತೋರಿಸುವ ಮಾತಾಗಿದೆ. ಈಗಾಗಲೇ ನಮಗೆ ಸಾಕಷ್ಟು ನೀರು ಸಿಗುತ್ತಾ ಇಲ್ಲ. ಈಗಿನ ಪರಿಸ್ಥಿತಿ ನೋಡಿದರೆ ಇಂದು ನದಿಯಲ್ಲಿ ಒಂದು ತೊಟ್ಟು ನೀರೂ ಇಲ್ಲದೆ ನೀರಾವರಿಗೆ ಬೇಕಾದಷ್ಟು ನೀರು ಸೀಗುತ್ತಾ ಇಲ್ಲ. ಇದಲ್ಲದೆ ಅನೇಕ ತರದ ಹೊರೆಗಳನ್ನು ಹೊರಬೇಕಾಗುತ್ತದೆ. ಗೋಕಾಕ ಗಿರಣಿಯವರೆಗೆ, ಅವರು ಕೊಡುವುದು 15,000 ರೂಪಾಯಿಯಾದರೂ, ಇಡೀ ವರ್ಷ ನೀರು ಒದಗಿಸಬೇಕಾಗುತ್ತದೆ. ನಿತ್ಯ ಅವರು 65 ಕ್ಯೂಸೆಕ್ಸ್ ನೀರನ್ನು ಉಪಯೋಗಿಸುತ್ತಿದ್ದಾರೆ. ಇದರಿಂದಾಗಿ ಎಂಟು ತಿಂಗಳು ರೈತರಿಗೆ ಪೂರ್ತಿಯಾಗಿ ನೀರು ಸಿಗುತ್ತಾ ಇಲ್ಲ. ರೈತರಿಗೆ ಎಂಟು ತಿಂಗಳು 118 Quescs ನಂತೆ ನೀರು ಕೊಟ್ಟರೂ ಅವರಿಂದ 15 ರಿಂದ 20 ಲಕ್ಷ ರೂಪಾಯಿಯವರೆಗೆ ವಸೂಲಾಗುತ್ತಿದೆ. ಇದರ ಬಗ್ಗೆ ಬಹಳ ದಿವಸಗಳಿಂದ ಹೋರಾಟ ಕೂಡ ಆಗಿದೆ. ಸರ್ಕಾರದವರು ಸಾಕಷ್ಟು ಸವಲತ್ತುಗಳನ್ನು ಕೊಟ್ಟರೆ ಈ ನೀರಿನ ತೊಂದರೆಯು ತಪ್ಪುತ್ತದೆ. ರೈತರಿಗೆ ಜಮೀನನಲ್ಲಿ ಬೀಜ ಬಿತ್ತಲಿಕ್ಕೂ ನೀರು ಸಿಗುತ್ತಾ ಲ್ಲ. ಆದರೆ ಗಿರಣಿಯವರಿಗೆ ಮಾತ್ರ ಮೊದಲಿನ ರೀತಿಯಲ್ಲೇ ಕೊಡುತ್ತಿರಬೇಕು. ಇದನ್ನು ತಪ್ಪಿಸಿ, ನಮ್ಮ ರೆತ್ಯರಿಗೆ ಸಾಗುವಳಿಗೆ ಸರಿಯಾದ ನೀರು ಸಿಗುವಂತೆ ಮಾಡಿದರೆ , ಅದರಿಂದ ಎಲ್ಲರಿಗೂ ಹೆಚ್ಚಿನ ಪ್ರಯೋಜನವಾಗುತ್ತದೆ. ಇದನ್ನು ನಾವು ಅನೇಕ ಸಲ ಸರ್ಕಾರದ ಗಮನಕ್ಕೆ ತಂದಿದ್ದೇನೆ. ಅದಕ್ಕೆ ಸರ್ಕಾರದವರು ತೀವ್ರ ಗಮನವನ್ನು ಕೊಡಬೇಕೆಂದು ಕೇಳಿಕೊಳ್ಳುತ್ತೇನೆ. ಅಲ್ಲಿ ಸರಿಯಾದ ನೀರು ಸಿಕ್ಕಿದರೆ, ಅಲ್ಲಿ ಎಲ್ಲಾ ತರಪ ಬೆಳೆ, ಮೆಕ್ಕೆಜೋಳ, ಹೈಬ್ರಿಡ್ ಉಪಯೋಗ ಮಾಡಿ ಅತ್ಯಂತ ಉತ್ತಮ ಬೆಳೆಯನ್ನು ಬೆಳೆಸುವುದರಲ್ಲಿ ಅಲ್ಲಿನ ರೈತರು ಬಹಳ ನಿಸ್ಸೀಮರು. ಅಲ್ಲಿಂದ ಲಕ್ಷಾಂತರ ಚೀಲ ಮುಸುಕಿನ ಜೋಳ ಬೆಂಗಳೂರಿಗೆ ಬರುತ್ತಿದೆ. ಬೇರೆ ದೇಶಕ್ಕೂ ಸಹ ಕಳುಹಿಸುತ್ತಿದ್ದಾರೆ. ಆದ್ದರಿಂದ ಅಲ್ಲಿಯ ರೈತರಿಗೆ ಹೆಚ್ಚು ಹೆಚ್ಚು ನೀರನ್ನು ಮತ್ತು ಉಳಿದ ಸೌಲಭ್ಯಗಳನ್ನು ಒದಗಿಸಬೇಕು. ಈ ಸೌಕರ್ಯಗಳನ್ನೆಲ್ಲಾ ಸರ್ಕಾರದವರು ಅಲ್ಲಿಯ ರೈತರಿಗೆ ಮಾಡಿಕೊಟ್ಟರೆ ಆಹಾರದ ತೊಂದರೆ ತಪ್ಪೀತು ಎಂದು ಸರ್ಕಾರದ ಲಕ್ಷಕ್ಕೆ ತರಬಯಸುತ್ತೇನೆ. ನೀರಾವರಿ ಬಾವಿಗಳಿಗೆ ಸರ್ಕಾರದವರು ಹೆಚ್ಚು ಹಣವನ್ನು ಒದಗಿಸಬೇಕೆಂದು ತೀರ್ಮಾನ ಮಾಡಿದ್ದಾರೆ. ಈ ವಿಚಾರದಲ್ಲಿ ಮೊನ್ನೆ ಒಂದು ಹೇಳಿಕೆಯನ್ನು ಸಹ ಕೊಟ್ಟಿದ್ದಾರೆ. ಹೊಸ ಸಣ್ಣ ನೀರಾವರಿ ಯೋಜನೆಗಳನ್ನು ತೆಗೆದುಕೊಳ್ಳುವುದಿಲ್ಲ, ಹಳೆಯದನ್ನೇ ಮುಗಿಸುತ್ತೇವೆಂದು ಹೇಳಿಕೆ ಕೊಟ್ಟಿದ್ದಾರೆ. ಆದರೆ ಇದರಿಂದ ರೈತರಿಗೆ ಸ್ವಲ್ಪ ತೊಂದರೆಯಾಗುತ್ತದೆ. ಇಂದು

ಪ್ರಾರಂಭವಾಗಿರುವ ಯೋಜನೆಗಳನ್ನು ಮುಗಿಸುವುದಲ್ಲದೆ, ಹೊಸ ಸಣ್ಣ ನೀರಾವರಿ ಯೋಜನೆಯನ್ನು ಸಹ ಕೈಕೊಳ್ಳಬೇಕು, ಕೈ ಬಿಡಬಾರದು ಎಂದು ಹೇಳುತ್ತೇನೆ. ಬಾದಾಮಿ, ಯರಗಟ್ಟಿ ಮುಂತಾದ ಕಡೆ ಸಣ್ಣ ನೀರಾವರಿ ಕೆಲಸವನ್ನು ತಡೆಹಿಡಿಯಲಾಗಿದೆ. ಆ ಭಾಗಕ್ಕೆ ಸೂಕ್ತ ಪರಿಹಾರವನ್ನು ಕಂಡು ಹಿಡಿಯದಿದ್ದರೆ ಮತ್ತೆ ಬರಗಾಲಕ್ಕೆ ಅಲ್ಲಿಯ ಜನರು ಸಿಕ್ಕುತ್ತಾರೆ, ಸರ್ಕಾರವನ್ನು ಶಪಿಸುತ್ತಾ ಹೋಗುತ್ತಾರೆ. ಉಳಿದ ಭಾಗಕ್ಕಿಂತ ಇಲ್ಲಿಗೆ ಹೆಚ್ಚಿನ ಲಕ್ಷ್ಯವನ್ನು ಕೊಡಬೇಕು. ಕೆಲವು ನೀರಾವರಿ ಯೋಜನೆಗಳನ್ನು ಹಿಂದಕ್ಕೆ ತಳ್ಳುವದು ಸರಿಯಲ್ಲ. ಎಲ್ಲಾ ಭಾಗಗಳಿಗೂ ನೀರಾವರಿ ಸೌಕರ್ಯವನ್ನು ಒದಗಿಸಬೇಕು. ಅಲ್ಲಿಯ ಜನರು ತಮ್ಮ ಭಾಗದಲ್ಲಿ ಹೆಚ್ಚು ನೀರಾವರಿ ಸೌಕರ್ಯವನ್ನು ಸರ್ಕಾರದವರು ಒದಗಿಸುತ್ತಾರೆಂದು ಆಶೆ ಇಟ್ಟುಕೊಂಡಿದ್ದರು. ಆ ಆಶೆ ತಪ್ಪಿದ್ದರಿಂದ, ಈ ವರ್ಷದಲ್ಲೂ ಆ ಭಾಗದಲ್ಲಿ ಬರಗಾಲ ಬರಬಹುದು. ಹೆಚ್ಚಿನ ಆಹಾರವನ್ನು ಬೆಳೆಯುವುದಕ್ಕೆ ಅವಕಾಶ ಮಾಡಿಕೊಡಬೇಕು. ಅಲ್ಲದೇ ಸರ್ಕಾರದವರು ರೈತರಿಗೆ ಕೆಲವೊಂದು ಸೌಕರ್ಯವನ್ನು ಕಡಿಮೆ ಮಾಡುತ್ತಿದ್ದಾರೆ. ಗೊಬ್ಬರವನ್ನು ಸರಿಯಾಗಿ ಒದಗಿಸುತ್ತಿಲ್ಲ. ಸಬ್ಸಿಡಿ ರೂಪದಲ್ಲಿ ಗೊಬ್ಬರವನ್ನು ರೈತರಿಗೆ ಕೊಡಬಹುದು. ಈ ವರ್ಷ ಸಾಕಷ್ಟು ಪ್ರಮಾಣದಲ್ಲಿ ಗೊಬ್ಬರವನ್ನು ಸರ್ಕಾರದವರು ಆ ಭಾಗಕ್ಕೆ ಒದಗಿಸಿದ್ದಾರೆ. ಯಾವುದೇ ಭಾಗಕ್ಕೆ ತೊಂದರೆಯಾಗದಂತೆ ಕಾಲಕ್ಕೆ ಸರಿಯಾಗಿ ಗೊಬ್ಬರವನ್ನು ಒದಗಿಸಬೇಕು. ಏಕೆಂದರೆ ಈ ವಿಚಾರದಲ್ಲಿ ಅನೇಕ ದೂರುಗಳು ಬರುತ್ತಿವೆ. ಬಿತ್ತುವ ಕಾಲಕ್ಕೆ ಗೊಬ್ಬರ ಸಿಗುವಂತೆ ನೋಡಿಕೊಳ್ಳುವುದು ನಮ್ಮ ಕರ್ತವ್ಯ. ಆಹಾರ ವಿಚಾರದಲ್ಲಿ ಹೇಳುವುದಾದರೆ ನಮ್ಮ ದೇಶದಲ್ಲಿ ಬೀಕರ ಪರಿಸ್ಥಿತಿ ತಲೆದೋರುತ್ತದೆ. ನಮ್ಮಲ್ಲಿ ಅನೇಕ ಪ್ರದೇಶಗಳು ಬರಗಾಲಕ್ಕೆ ತುತ್ತಾಗುವ ಸಂಭವವಿದೆಯೆಂದು ತಿಳಿದುಕೊಳ್ಳಬೇಕು. **ಗೋಕಾಕದ ಪೂರ್ವ ಭಾಗದಲ್ಲಿ ಮತ್ತು ರಾಯಭಾಗ ಮುಂತಾದ ಕಡೆಗಳಲ್ಲಿ ಮಳೆಯಿಲ್ಲ. ಇನ್ನು ಮೇಲೆ ಮಳೆಯಾದರೂ ಸಹ ಬೆಳೆ ಬರುವುದಿಲ್ಲ. ಈಗ ಅರ್ಧ ಬೆಳೆ ಹಾಳಾಗಿದೆ. ಇಂತಹ ಭಾಗಗಳಲ್ಲಿ ಪರಿಹಾರ ಕಾರ್‍ಯವನ್ನು ಕೈಕೊಳ್ಳಬೇಕು. ಇದನ್ನು ಸರ್ಕಾರ ತೀವ್ರವಾಗಿ ಪರಿಶೀಲಿಸಬೇಕು. ಈಗ ಮಳೆಯಾದರೆ ಸ್ವಲ್ಪ ಭಾಗ ಬೆಳೆಯಾಗಬಹುದು, ಆದರೆ ಬರಗಾಲ ತಪ್ಪಿದ್ದಲ್ಲ. ಮಳೆ ಬಂದರೂ ಸಹ ಮಸಾರಿ, ಮರಡಿ ಜಮೀನುಗಳಲ್ಲಿ ಬೆಳೆ ಸರಿಯಾಗಿ ಬರುವುದಿಲ್ಲ. ಈಗಿನಿಂದಲೇ ಪರಿಹಾರ ಕಾರ್ಯಗಳ ಬಗ್ಗೆ ಸರಿಯಾದ ಲಕ್ಷ್ಯವನ್ನು ಕೊಡಬೇಕು.**

ಇನ್ನು ನಮ್ಮ ದೇಶದ ಒಂದು ಸೌಭಾಗ್ಯವೆಂದರೆ ಶರಾವತಿ ಯೋಜನೆ ನಮಗೆ ಒಂದು ಆಶಾದಾಯಕವಾಗಿದೆ. ಶರಾವತಿಯಿಂದ ನಮಗೆ ವಿದ್ಯುತ್

ದೊರಕುತ್ತಿದೆ. ಆದರೂ ಸಹ ನೀರಾವರಿ ಪಂಪ್ ಸೆಟ್ಟುಗಳನ್ನು ಹೆಚ್ಚು ಹೆಚ್ಚಾಗಿ ನೀರಾವರಿ ಪ್ರದೇಶಗಳಲ್ಲಿ ಅಳವಡಿಸಿಲ್ಲ. ಹೆಚ್ಚಾಗಿ ಒದಗಿಸಬೇಕು. ಕೆಲವು ನದಿಗಳು ಹರಿಯುವ ಜಾಗದಲ್ಲಿ ಇರಿಗೇಷನ್ ಪಂಪ್‌ಸೆಟ್ಟುಗಳನ್ನು ಒದಗಿಸಬೇಕು. ಶರಾವತಿಯಿಂದ ಉತ್ಪತ್ತಿಯಾಗುವ ವಿದ್ಯುತ್ತಿನ ಪೂರ್ಣ ಲಾಭ ರೈತರಿಗೆ ಸಿಗುವಂತೆ ನೋಡಿಕೊಳ್ಳಬೇಕು. ಬರಗಾಲದಿಂದ ನರಳುತ್ತಿರುವ ರೈತರಿಗೆ ಅನುಕೂಲ ಮಾಡಬೇಕೆಂದು ತಿಳಿಸುತ್ತೇನೆ. ಕೃಷ್ಣಾ, ಘಟಪ್ರಭಾ ನದಿಗಳ ನೀರು ವ್ಯರ್ಥವಾಗಿ ಹರಿದು ಹೋಗುತ್ತದೆ. ಮಹಾರಾಷ್ಟ್ರದವರು ನಮಗೆ ಹೆದರಿಕೆ ಹಾಕುತ್ತಿದ್ದಾರೆ. ಭೀಮಾ ನದಿಯ ನೀರನ್ನು ಬೇರೆ ಕಡೆಗೆ ತಿರುಗಿಸುತ್ತಿದ್ದಾರೆ. 20 ಸಾವಿರ ಕ್ಯೂಸೆಕ್ಸ್ ನೀರು ಕೊಯಿನಾ ನದಿಯಿಂದ ಸಮುದ್ರಕ್ಕೆ ಬಿಡುತ್ತಾ ಇದ್ದಾರೆ. ಕಣ್ಣಲ್ಲಿ ಕಣ್ಣಿಟ್ಟು ನಾವು ನೋಡಿಕೊಳ್ಳದಿದ್ದರೆ ಘಟಪ್ರಭಾ ನದಿಯ ನೀರು ನಮಗೆ ಯಾವ ರೀತಿ ಸಿಗಲಿಲ್ಲವೋ ಅದೇ ರೀತಿ ಕೊಯಿನಾ ನದಿಯ ನೀರು ಸಹ ಸಿಗುವುದಿಲ್ಲ. ಬೇಸಿಗೆ ಕಾಲದಲ್ಲಿ ಸಂಕೇಶ್ವರದಲ್ಲಿ ನೀರು ಸಿಗುವುದಿಲ್ಲ. ಅವರು ಪ್ರತಿ ವರ್ಷವೂ ಭೀಕರ ಪರಿಸ್ಥಿತಿಯನ್ನು ಎದುರಿಸಬೇಕಾಗುತ್ತದೆ. ಇದನ್ನು ತಪ್ಪಿಸಬೇಕಾದರೆ ಈಗಿನಿಂದಲೇ ಎಚ್ಚರಿಕೆ ವಹಿಸಬೇಕು. ಮಹಾರಾಷ್ಟ್ರದವರು ಮೇಲಿಂದ ಮೇಲೆ ಅಣೆಕಟ್ಟುಗಳನ್ನು ಕಟ್ಟಿಕೊಂಡು ನಮಗೆ ಬೇಸಿಗೆಯಲ್ಲಿ ನೀರು ಇಲ್ಲದಂತೆ ಮಾಡುತ್ತಿದ್ದಾರೆ. ನಾವು ಮೊದಲೇ ನೀರಿನ ಸಂಗ್ರಹ ಮಾಡಿಕೊಳ್ಳದಿದ್ದರೆ ಬರಗಾಲ ತಪ್ಪಿದ್ದಲ್ಲ. ಮುಂದಿನ ಪೀಳಿಗೆಯವರು ಸಹ ನಮ್ಮನ್ನು ಶಪಿಸುತ್ತಾರೆ.

ಇನ್ನು ವಿದ್ಯುತ್ತು ಎಲ್ಲಾ ಕಡೆಯಲ್ಲೂ ಬರುತ್ತಿದೆ. ಆದ್ದರಿಂದ ನದಿ ದಂಡೆಯಲ್ಲಿ ನೀರು ವ್ಯರ್ಥವಾಗಿ ಹೋಗದಂತೆ ವಿದ್ಯುತ್ ಪಂಪ್‌ಸೆಟ್ಟುಗಳನ್ನು ಹಾಕಿಸಿಕೊಡಬೇಕು. ಸರ್ಕಾರದವರು ಹೆಚ್ಚು ಹೆಚ್ಚು ಪಂಪ್‌ಸೆಟ್ಟುಗಳನ್ನು ರೈತರಿಗೆ ಒದಗಿಸಬೇಕು.

ಇನ್ನು ಶಿಕ್ಷಣದ ಬಗ್ಗೆ ಕೆಲವು ಮಾತುಗಳನ್ನು ಸರಕಾರಕ್ಕೆ ಹೇಳಲು ಬಯಸುತ್ತೇನೆ. ಶಿಕ್ಷಣದ ಬಗ್ಗೆ 33 ಕೋಟಿಗೆ ಮೇಲ್ಪಟ್ಟು ಹಣವನ್ನು ಸರಕಾರ ಖರ್ಚು ಮಾಡುತ್ತಿದೆ. ಮಾಧ್ಯಮಿಕ ಶಿಕ್ಷಣ ಪುಕ್ಕಟೆ ಸಿಕ್ಕುವ ಹಾಗೆ ಸರಕಾರ ವ್ಯವಸ್ಥೆ ಮಾಡಿದೆ. ಆದರೆ ಶಿಕ್ಷಣ ಸಂಸ್ಥೆಗಳಲ್ಲಿ ಒಂದು ರೀತಿಯ ಪರಿಸ್ಥಿತಿ ನಿರ್ಮಾಣವಾಗುತ್ತಿರುವುದನ್ನು ತಪ್ಪಿಸಲಿಕ್ಕೆ ಮುಂಜಾಗ್ರತೆ ಕ್ರಮ ಸರಕಾರ ತೆಗೆದುಕೊಳ್ಳುವುದು ಅವಶ್ಯಕವಾಗಿದೆ. ಅದೇನೆಂದರೆ, ಶಿಕ್ಷಣದಲ್ಲಿ ಜಾತೀಯತೆ ಪ್ರವೇಶವಾಗುತ್ತಿದೆ. ಜಾತೀಯತೆಯ ಮೇಲೆ ಶಿಕ್ಷಣ ಸಂಸ್ಥೆಗಳು ನಿರ್ಮಾಣವಾಗುತ್ತಿವೆ, ಜಾತೀಯತೆಯ ತಳಹದಿಯ ಮೇಲೆ ಹಾಸ್ಟೆಲುಗಳನ್ನು ಹೈಸ್ಕೂಲುಗಳನ್ನು ಪ್ರಾರಂಭ

ಮಾಡಲಾಗುತ್ತಿದೆ. ಆದನ್ನು ತಪ್ಪಿಸಿ ಜಾತಿಯತೆ ಶಿಕ್ಷಣರಂಗದಲ್ಲಿ ಪ್ರವೇಶವಾಗದಂತೆ ನೋಡಿಕೊಳ್ಳಬೇಕು. ಜಾತ್ಯಾತೀತ ಭಾವನೆಯನ್ನು ಕಾಯ್ದುಕೊಂಡು ಹೋಗುವದು ಅವಶ್ಯಕ. ಜಾತಿಯ ತಳಹದಿಯ ಮೇಲೆ ಇರತಕ್ಕ ಸಂಸ್ಥೆಗಳನ್ನು ತೆಗೆದು ಹಾಕಿ ಅವುಗಳನ್ನು ಸರಕಾರದವರೇ ನಡೆಸಿಕೊಂಡು ಹೋಗುವದು ಅಗತ್ಯ. ಕೆಲವು ಸಂಸ್ಥೆಗಳು ಜಾತಿಯತೆಯ ಹೆಸರನ್ನು ಸಹ ಬದಲು ಮಾಡಿಕೊಂಡಿವೆ. ಕರ್ನಾಟಕದಲ್ಲಿ ಲಿಂಗರಾಜ ಕಾಲೇಜ ಎಂದು ಇದ್ದುದ್ದನ್ನು ಲೆಬರಲ್ ಸೊಸೈಟಿ ಎಂದು ಮಾರ್ಪಾಟು ಮಾಡಿಕೊಂಡಿದೆ. ಆದರೆ ದುರ್ದೈವದಿಂದ ಇಂದು ಕೆಲವು ಜಾತಿಯ ಸಂಸ್ಥೆಗಳು ಹುಟ್ಟಿಕೊಂಡು ಶಿಕ್ಷಣ ರಂಗದಲ್ಲಿ ಜಾತಿಯ ಭಾವನೆ ಹುಟ್ಟಿಕೊಂಡಿದೆ. ಈ ರೀತಿ ಆಗಬಾರದಾಗಿತ್ತು. ಒಂದು ಜಾತಿಯ ಬಗ್ಗೆ ಮಠ ಧಾರ್ಮಿಕ ಸಂಸ್ಥೆಗಳು ಪ್ರತ್ಯೇಕವಾಗಿ ಇರುತ್ತವೆ. ಅಂದಲ್ಲಿ ವೈಯಕ್ತಿಕವಾಗಿ ತಮ್ಮ ಧರ್ಮದ ಪ್ರಕಾರ ಅನುಸರಣೆ ಮಾಡಲಿ. ಆದುದರಿಂದ ಜಾತಿಯ ಭಾವನೆಯುಳ್ಳ ಶಿಕ್ಷಣ ಸಂಸ್ಥೆಗಳಿಗೆ ಸರಕಾರ ಗ್ರ್ಯಾಂಟು ಕೊಡಬಾರದು. ಇಂದು ಹಳ್ಳಿಗಳಲ್ಲಿ ಜನರಿಗೆ ಸಾಕಷ್ಟು ಶಿಕ್ಷಣ ಸೌಲಭ್ಯವಿಲ್ಲ. ಕೆಲವು ಕಡೆ ಕನ್ನಡ ಶಾಲೆಗಳನ್ನು ಮಿಷನರಿಗಳು ನಡೆಸುತ್ತಿದ್ದಾರೆ. ಒಂದೆರಡು ವರ್ಗಗಳಿಗೆ ಹುಡುಗರು ಬರುತ್ತಾರೆ. ಮುಂದೆ ಶಿಕ್ಷಣ ನಿಂತು ಹೋಗುತ್ತದೆ. ಇಷ್ಟು ಪ್ರಗತಿ ಸಾಲದು. ಇದಲ್ಲದೆ ಕೆಲವು ಕಡೆ ಉರ್ದು ಶಾಲೆಗಳನ್ನು ಪ್ರಾರಂಭ ಮಾಡಲಾಗುತ್ತಿದೆ. ಅಂಥ ಶಾಲೆಗಳಿಗೆ ಬರತಕ್ಕ ವಿದ್ಯಾರ್ಥಿಗಳ ಮಾತೃಭಾಷೆ ಉರ್ದು ಇರುವುದಿಲ್ಲ. ಉರ್ದು ಭಾಷೆ ಅವರಿಗೆ ಬರುವದಿಲ್ಲ. ಆದರೂ ಕೂಡ ಸಂಸ್ಥೆಗಳನ್ನು ಸ್ಥಾಪನೆ ಮಾಡುತ್ತಾರೆ. ಅಂಥ ಶಿಕ್ಷಣ ಸಂಸ್ಥೆಗಳಲ್ಲಿ ಹುಡುಗರಿಗೆ ಉರ್ದು ಭಾಷೆಯೂ ಬರುವುದಿಲ್ಲ. ಕನ್ನಡ ಭಾಷೆಯೂ ಬರುವುದಿಲ್ಲ. ಈ ರೀತಿ ಆಗಬಾರದು. ಮಕ್ಕಳಿಗೆ ಒಳ್ಳೆ ಶಿಕ್ಷಣ ದೊರೆತರೆ ಅವರ ಭವಿಷ್ಯ ಉಜ್ವಲವಾಗುತ್ತದೆ. ಆದುದರಿಂದ ಅಂಥ ಶಾಲೆಗಳಿಗೆ ಸರಕಾರ ಗ್ರ್ಯಾಂಟು ಕೊಡುವುದನ್ನು ನಿಲ್ಲಿಸಬೇಕು. ಮತ್ತು ಅಂಥ ಶಾಲೆಗಳನ್ನು ಸರಕಾರದವರೇ ನಡೆಸಬೇಕು ಎಂದು ಒತ್ತಿ ಹೇಳುತ್ತೇನೆ.

ಇನ್ನೂ ಅನೇಕ ವಿಷಯಗಳನ್ನು ಹೇಳುವುದು ಇದೆ. ಆದರೆ ಕಾಲಾವಕಾಶವಿಲ್ಲ. ಇದಲ್ಲದೆ ಇದು ಬಜೆಟ್ ಮೇಲಿನ ಸಾಮಾನ್ಯ ಚರ್ಚೆ ಆಗಿರುವುದರಿಂದ ಎರಡು ಮೂರು ಮಾತುಗಳನ್ನು ಸರಕಾರದ ಲಕ್ಷ್ಯಕ್ಕೆ ತಂದಿದ್ದೇನೆ. ನನ್ನ ಸಲಹೆ ಸೂಚನೆಗಳನ್ನು ಸರಕಾರ ಯೋಗ್ಯ ರೀತಿಯಲ್ಲಿ ವಿಚಾರ ಮಾಡಿ ಸೂಕ್ತ ವ್ಯವಸ್ಥೆ ಮಾಡಬೇಕೆಂದು ಇಷ್ಟು ಹೇಳಿ ನನ್ನ ಭಾಷಣ ಮುಗಿಸುತ್ತೇನೆ.

# ಅನುಪೂರಕ ಬೇಡಿಕೆಗಳು

18ನೇ ಸೆಪ್ಟೆಂಬರ್ 1968

(ಸಪ್ಲಿಮೆಂಟರಿ ಡಿಮ್ಯಾಂಡ) :

**ಪಂಚಗಾವಿ ನಿಜಕ್ಕೂ ಸಾಮಾಜಿಕ ಜವಾಬ್ದಾರಿಯುಳ್ಳ ಜನಪ್ರತಿನಿಧಿ ನ್ಯಾಯವಾದಿ ಮಾತ್ರವಲ್ಲ. ನ್ಯಾಯ ನಿಷ್ಠುರಿ ಇಲ್ಲಿ ಅವರು ಪರಿಹಾರಕಾಮಗಿರಿ, ಪಾನನಿರೋಧ ರದ್ದತಿ, ಲಾಟರಿ ಯೋಜನೆ ಜಾರಿ ಸರ್ಕಾರದ ದುಂದುವೆಚ್ಚಗಳು ಸಹಕಾರಿ ಸಂಸ್ಥೆಗಳ ದುರ್ಬಲಿಕೆ ಹೀಗೆ ಅನೇಕ ಸಮಸ್ಯೆಗಳ ಕುರಿತು - ತಮ್ಮ ಪ್ರಾಮಾಣಿಕ ಅಭಿಪ್ರಾಯಗಳನ್ನು ದಿಟ್ಟತನದಿಂದ ಪ್ರತಿಪಾದಿಸುತ್ತಾರೆ.**

ಸ್ವಾಮೀ, ಅಧ್ಯಕ್ಷರೇ, ಈ ಅನುಪೂರಕ ಸಪ್ಲಿಮೆಂಟರಿ ಡಿಮ್ಯಾಂಡು ಇದು ಒಂದು ವೈಶಿಷ್ಟ್ಯ ಪರಿಸ್ಥಿತಿಯಲ್ಲಿ ಈ ಮನೆಯ ಮುಂದೆ ಬಂದಿದೆ. ದೇಶಾದ್ಯಂತ ಎಲ್ಲಾ ಜಿಲ್ಲೆಗಳಲ್ಲೂ ಜನತೆ ಅತ್ಯಂತ ಕಷ್ಟ ಪರಿಸ್ಥಿತಿಯಲ್ಲಿ ತೊಳಲಾಡುತ್ತಿದ್ದಾರೆ. ಅಲ್ಲದೇ ಇಡೀ ಭಾರತದಲ್ಲಿ ಅತ್ಯಂತ ಕಷ್ಟ ಪರಿಸ್ಥಿತಿಯಲ್ಲಿ ಸಿಕ್ಕಿರುವಾಗ ಈ ಅನುಪೂರಕ ಬೇಡಿಕೆಗಳಿಗಾಗಿ ಸುಮಾರು 14 ಕೋಟಿ ರೂಪಾಯಿ ಹೆಚ್ಚು ಹಣವನ್ನು ಇಲ್ಲಿ ಮಂಡಿಸುತ್ತಿದ್ದೀರಿ. ಇದರಲ್ಲಿ ನಿಜವಾಗಿ ಜನತೆಗೆ ಪ್ರೋತ್ಸಾಹ ಸಿಕ್ಕಬೇಕಾದ್ದು ಎಷ್ಟು? ಅದರಲ್ಲಿ ಎಷ್ಟು ಕೊಡುತ್ತಾರೆ? ಈ ಪರಿಸ್ಥಿತಿ ಬಹಳ ಗಂಭೀರವಾಗಿ ನಡೆದಿದೆ. ಜನತೆಗೆ ಎಲ್ಲಿ ನೋಡಿದರೂ ಅಲ್ಲಿ ನೀರು ಸಿಕ್ಕುವುದಿಲ್ಲ. ಕೆಲಸ ಇರುವದಿಲ್ಲ. ಈ ಪರಿಸ್ಥಿತಿ ಬಂದಾಗ ಈಗ ರಿಲೀಫ್ ವರ್ಕ್ಸ್‌ಗೆ ಕೊಡತಕ್ಕಂಥ ಹಣ 5 ಕೋಟಿ 60 ಲಕ್ಷ ರೂಪಾಯಿ ಏತಕ್ಕೂ ಸಾಲದು ಎಂದು ನಾನು ಹೇಳಬಯಸುತ್ತೇನೆ. ನಾನು ಮೊನ್ನೆ ಅಥವಾ ಪರಿಸ್ಥಿತಿ ಬಗ್ಗೆ ಚರ್ಚೆ ಮಾಡತಕ್ಕಂಥ ಸಂದರ್ಭದಲ್ಲಿ ಸುಮಾರು 20 ಕೋಟಿಗಿಂತ ಹೆಚ್ಚು ಹಣ ನಮ್ಮ ರಾಜ್ಯಕ್ಕೆ ಬೇಕು ಎನ್ನುವ ಮಾತನ್ನು ಹೇಳಿದ್ದೇನೆ. ಬೇರೆ ಯೋಜನೆಗಳನ್ನು ಅಳವಡಿಸಬೇಕಾದ್ದು ಅಲ್ಲದೇ ಜನರಿಗೆ ಹೆಚ್ಚು ಹೆಚ್ಚು ಉಪಯೋಗವಾಗತಕ್ಕಂಥ ಯೋಜನೆಯನ್ನು ಹಾಕಿಕೊಂಡು ಎಲ್ಲಿ ಕಷ್ಟ ಪರಿಸ್ಥಿತಿ ಇದೆ ಇದನ್ನು ನೋಡಿಕೊಂಡು ಹಣ ಸರಿಯಾಗಿ ವಿನಿಯೋಗಿಸಬೇಕು. ಭಾರಿ ಭಾರಿ ಯೋಜನೆಗಳಿಗೆ ಹಣ ಸರಿಯಾಗಿ ಒದಗಿಸುತ್ತಾ ಇಲ್ಲ. ನೀವು ಇದರಲ್ಲಿ 23 ಲಕ್ಷ ರೂಪಾಯಿಗಳನ್ನು ಮೆಷಿನರಿ ಕೊಂಡುಕೊಳ್ಳುವುದಕ್ಕೆ ಒಂದೂ ಹೇಳಿಲ್ಲ. ಕುಡಿಯುವ ನೀರಿನ ಸೌಕರ್ಯ ಸಿಕ್ಕಬೇಕು. ಬಾವಿಗಳನ್ನು ಹೆಚ್ಚು ಹೆಚ್ಚು ತೆಗೆಯಬೇಕು. ಇಷ್ಟೊಂದು ಕೆಲಸ ಮಾಡುವಾಗ 23 ಲಕ್ಷ ರೂಪಾಯಿ ಏತಕ್ಕೂ ಸಾಲದು. ಒಂದು ಜಿಲ್ಲೆಗೆ ಒಂದು

ಲಕ್ಷ ರೂಪಾಯಿ ಕೂಡ ದೊರಕುವದಿಲ್ಲ. ಇನ್ನೂ ಅನೇಕ ರೀತಿಯಿಂದ ಜನಗಳಿಗೆ ಕೆಲಸ ಒದಗಿಸುವುದರಲ್ಲಿ ಇನ್ನೂ ಹಣ ಕೊಡ ಬೇಕಾಗುವುದು ಎಂದು ಹೇಳಬಯಸುತ್ತೇವೆ. ಬೆಳಗಾಂ ಡಿವಿಜನ್ ತೆಗೆದುಕೊಂಡರೆ 15 ಲಕ್ಷ ರೂಪಾಯಿಯನ್ನು ಇರ್ರಿಗೇಷನ್ ವರ್ಕ್ಸ್‌ಗೆ ಕೊಟ್ಟಿರುತ್ತೀರಿ. ಅದನ್ನು ಪ್ರತಿ ತಾಲ್ಲೂಕಿಗೂ ಹಂಚಿದರೆ ಎಷ್ಟು ಕಡಿಮೆಯಾಗುತ್ತದೆ ಎನ್ನುವುದನ್ನು ತಿಳಿದುಕೊಳ್ಳಬೇಕು. ಈ ರೀತಿ ಅನೇಕ ಜಿಲ್ಲೆಗಳಿಗೆ ಹಂಚಿದಾಗ ಆ ಹಣ ಎಲ್ಲಾ ತಾಲ್ಲೂಕುಗಳಿಗೆ ಹಂಚಿದರೆ ಪ್ರತಿಯೊಂದು ತಾಲ್ಲೂಕಿಗೂ ಹಣ ಕಡಿಮೆ ದೊರಕುತ್ತದೆ. ಈ ತರಹ ನೀವೂ ಬೇರೆ ರೀತಿಯಲ್ಲಿ ಕೊಕ್ಕೆಗಳನ್ನು ಹಾಕುತ್ತಿದ್ದೀರಿ. ಈ ಒಂದು ಗುರಿ ಮುಟ್ಟಿಸಬೇಕು. ಇದು ನಿಮ್ಮ ಮನಸ್ಸಿನಲ್ಲಿ ಇದಕ್ಕೆ ಕಂಡು ಬರುತ್ತಾ ಇಲ್ಲ. ಈಗ ನಮ್ಮ ಕಣ್ಣು ತೆರೆಯಿಸುವ ಕಾಲ ಬಂದಿದೆ. ಕಷ್ಟ ಸಂಕಟಗಳು ಬರುವುದು ನಮಗೆ ಎಚ್ಚರಿಕೆ ಕೊಡುವುದಕ್ಕೆ, ನಾವು ಕಳೆದ 20 ವರ್ಷದಿಂದಲೂ ಏನು ಮಾಡಿದ್ದೇನೆ. ಎನ್ನುವುದನ್ನು ನಮ್ಮ ಕಣ್ಣೆದಿರಿಗೆ ಪರಿಸ್ಥಿತಿ ಬಂದು ನಿಲ್ಲಿಸುತ್ತದೆ. ಅದಕ್ಕಾಗಿ ನಾವು ಹೆಚ್ಚು ಹೆಚ್ಚು ಯೋಜನೆಗಳನ್ನು, ಈ ಕೊರತೆ ನಿವಾರಣೆಗೆ ಉಪಯೋಗಿಸದೆ ಹೋದರೆ ಮುಂದೆ ಇದಕ್ಕೂ ಕಷ್ಟ ಪರಿಸ್ಥಿತಿಯನ್ನು ಎದುರಿಸಬೇಕಾಗಬಹುದೆಂಬ ಎಚ್ಚರಿಕೆಯನ್ನು ಕೊಡುತ್ತಿದ್ದೇನೆ. ಅದಕ್ಕಾಗಿ ಮುಂಜಾಗ್ರತೆಯ ಕ್ರಮಗಳನ್ನು ಈಗಾಗಲೇ ಕೈಕೊಳ್ಳಬೇಕಾಗಿತ್ತು. ಎನ್ನುವ ಮಾತನ್ನು ಹೇಳುತ್ತಿದ್ದೇನೆ. ಈ ವರ್ಷ ನಾವು ಒಂದು ವಿಚಿತ್ರ ಪರಿಸ್ಥಿತಿಯಲ್ಲಿದ್ದೇವೆ.

**ಪಾನ ನಿರೋಧ ಮತ್ತು ಲಾಟರಿ ನೀತಿ ಕುರಿತು :**

ನಾಡಿದ್ದು ಅಕ್ಟೋಬರ್ ಎರಡನೇ ತಾರೀಖಿಗೆ ಗಾಂಧೀಜಿಯ ಜನ್ಮದಿನ. ಇಂಥದ್ದರಲ್ಲಿ ಪಾನ ಪ್ರತಿಬಂಧವನ್ನು ರದ್ದುಗೊಳಿಸಿ ಹೆಚ್ಚು ಹೆಚ್ಚು ಯೋಜನೆಗಳಿಗೆ ಹಣ ಸಂಪಾದನೆ ಮಾಡುವುದನ್ನು ವಿಚಾರ ಮಾಡುತ್ತಿದ್ದೇವೆ. ಅದೇ ರೀತಿಯಲ್ಲಿ ಲಾಟರಿಗಳನ್ನು ಕೂಡ ತರತಕ್ಕ ಒಂದು ವಿಚಾರ ಇದೆ. ಇದು ಯಾವ ರೀತಿಯಲ್ಲಿ ಮುಂದಕ್ಕೆ ಸಾಗಬಹುದು ಎಂಬುದನ್ನು ಈಗಿನಿಂದಲೇ ವಿಚಾರ ಮಾಡಿಕೊಂಡರೆ ಒಳ್ಳೆಯದು ಎಂದು ನನಗನಿಸುತ್ತದೆ.

**ಸರ್ಕಾರಿ ದುಂದುವೆಚ್ಚಗಳ ಕುರಿತು ಕಡಿವಾಣ ಅಗತ್ಯ :**

ನಾವು ಉತ್ಪತ್ತಿ ಕಡೆಗೆ ಲಕ್ಷ ಹಾಕಿದರೆ ಸಾಲದು, ಅದೇ ವೇಳೆಯಲ್ಲಿ ಖರ್ಚು ಏನು ಮಾಡುತ್ತೇವೆಂದು ಕೂಡ ವಿಚಾರ ಮಾಡಬೇಕು. ಡಿಮ್ಯಾಂಡ ನಂಬರ್ ಮೂರರಲ್ಲಿ ಎಕ್ಸೈಸ್ ಗೆ ಖರ್ಚು ಎಷ್ಟು ಬೀಳುತ್ತದೆಂದು ಹೇಳಿದ್ದಾರೆ. ಅದೇ ರೀತಿ ಇದರಲ್ಲಿ ಉತ್ಪತ್ತಿ ಏನು ಎಂಬುದನ್ನು ವಿಚಾರ ಮಾಡಬೇಕು. ಇದಲ್ಲದೆ ಮೇಲಿಂದ ಮೇಲೆ ಕಾರುಗಳು, ರಾಜ್ಯಪಾಲರ ಬಂಗಲೆಗಳು, ಇವಕ್ಕೆಲ್ಲಾ ಸಾಕಷ್ಟು ಹಣವನ್ನು

ಖರ್ಚು ಮಾಡುತ್ತಿದ್ದಾರೆ. ಈ ರೀತಿಯ ಖರ್ಚುಗಳನ್ನು ಒಂದು ಕಡೆ ನಿಲ್ಲಿಸುವುದು ಯೋಗ್ಯವೆಂದೆನಿಸುತ್ತದೆ. ಪ್ರತಿ ವರ್ಷವೂ ಇಷ್ಟು ಖರ್ಚು ಮಾಡುತ್ತಾ ಹೋಗುವದು ಸರಿಯಲ್ಲವೆಂದು ಕಾಯುತ್ತದೆ. ಈಗ ನಮ್ಮ ಲೆಜಿಸ್ಲೇಚರ್ಸ್ ಹೋಂನ ಕಾರುಗಳನ್ನು ತೆಗೆದು, ಅಲ್ಲಿ ಒಂದು ಟ್ಯಾಕ್ಸಿಸ್ಟ್ಯಾಂಡ್ ಮಾಡಬೇಕೆಂದು ಒಂದು ಯೋಜನೆ ಮಾಡಿದ್ದಾರೆ. ಅದು ಒಳ್ಳೆಯ ಕೆಲಸ. ಈಗ ಡಿಮ್ಯಾಂಡ್ ನಂಬರ್ 10 ರಲ್ಲಿ ಐಟಂ ನಂಬರ್ 2 ರಲ್ಲಿ 2 ಲಕ್ಷ 30 ಸಾವಿರ, ಐಟಂ ನಂಬರ್ 4 ರಲ್ಲಿ 2 ಲಕ್ಷ 58 ಸಾವಿರ ರೂಪಾಯಿಯನ್ನು ಬೇಡುತ್ತಿದ್ದರೆ ಈ ಖರ್ಚುಗಳು ಮುಂದೆ ಬರಬಾರದು. ಅದು ಎಷ್ಟು ಕಡಿಮೆಯಾಗುತ್ತದೋ, ಅಷ್ಟು ಒಳ್ಳೆಯದಂತೆನಿಸುತ್ತದೆ. ಅದೇ ರೀತಿ ಪ್ಲಾನಿಂಗ್‌ನಲ್ಲಿ ಹೊಸ ಪೋಸ್ಟುಗಳನ್ನು ಕ್ರಿಯೇಟ್ ಮಾಡುತ್ತಿದ್ದಾರೆ. ಇದು ಹೊಸ ಖರ್ಚಾಗುತ್ತಿಲ್ಲವೆಂದು ಹೇಳಬಹುದು. ಆದರೂ ಸಹಾ ಖರ್ಚು ಆಗುವುದು ಆಗಿಯೇ ಆಗುತ್ತದೆ. ಬಿ.ಡಿ.ಒ ವನ್ನು ಅಪ್ ಗ್ರೇಡ್ ಮಾಡಿ ಡಿಸ್ಟ್ರಿಕ್ಟ್ ಪ್ಲಾನಿಂಗ್ ಆಫೀಸರ್ ಎಂದು ಮಾಡಿದರೂ ಕೂಡ ಅವರ ಸ್ಥಾನದಲ್ಲಿ ಬೇರೆಯವರನ್ನು ಮಾಡಲೇಬೇಕಾಗುತ್ತದೆ. ಈ ಪರಿಸ್ಥಿತಿ ತಂದುಕೊಳ್ಳದೆ ನಾವು ಆದಷ್ಟು ಈ ಖರ್ಚು ಏನು ಮಾಡುತ್ತೇವೆ. ಇದನ್ನು ಮುಂಚಿನಿಂದಲೇ ತಮ್ಮ ತಮ್ಮ ಖಾತೆಯಿಂದಲೇ ತಯಾರು ಮಾಡಿದರೆ ಒಳ್ಳೆಯದಲ್ಲದೆ, ಬೇರೆ ಇಲಾಖೆ ಮಾಡುವುದು ಒಳ್ಳೆಯದಲ್ಲವೆಂದು ಕಾಣುತ್ತದೆ. ಪ್ರತಿಯೊಂದು ಜಿಲ್ಲೆಗೆ ಡೆವಲಪ್‌ಮೆಂಟ ಕಾನ್ಸಿಲ್ ಇದೆ. ಅವರೂ ಇದನ್ನು ಮಾಡಬಹುದು. ಈ ಕೆಲಸವನ್ನು ಅವರು ಕೈಗೊಂಡರೆ, ಈ ಬೇರೆ ಹಣ ಏನು ಖರ್ಚು ಮಾಡುತ್ತಿದ್ದೇವೆ. ಅದನ್ನು ಕಡಿಮೆ ಮಾಡಿ, ನಮ್ಮ ಇತರ ದೊಡ್ಡ ಯೋಜನೆಗೆ ಆ ಹಣವನ್ನು ಉಪಯೋಗಿಸಿಕೊಳ್ಳಬಹುದು. ಇಂದು ಸರ್ಕಾರದವರು ಬೇರೆ ಬೇರೆ ಸಹಕಾರ ಸಂಘ ಸಂಸ್ಥೆಗಳಿಗೆ ಅನೇಕ ರೀತಿಯಲ್ಲಿ ಸಾಲದ ರೂಪದಲ್ಲಿ, ಸಬ್ಸಿಡಿ ರೂಪದಲ್ಲಿ ಹಣವನ್ನು ಕೊಡುತ್ತಿದ್ದಾರೆ. ಇದು ಒಳ್ಳೆಯ ಕೆಲಸ, ಅದರ ಬೆಳವಣಿಗೆಗೆ ಅವಶ್ಯವಾಗಿರುವುದು. ಅದೇ ರೀತಿಯಲ್ಲಿ ಅವುಗಳ ಮೇಲೆ ಒಂದುಹಿಡಿತ ಇಟ್ಟುಕೊಳ್ಳಬೇಕು. ಎಲ್ಲಿ ನೋಡಿದರೂ, ಸೊಸೈಟಿಗಳು ಅನೇಕ ರೀತಿಯ ಹೆಸರಿನ ಸಾಲವನ್ನು ಎತ್ತುವುದು ಮತ್ತು ಅದನ್ನು ತಿಂದು ಹಾಕುವುದು ಎಲ್ಲಾ ನಾವು ನೋಡುತ್ತಿದ್ದೇವೆ. ಕೆಲವು ಕಡೆ ಚೇರಮನ್ ಪರಾರಿಯಾಗಿದ್ದಾರೆ. ಕೆಲವು ಕಡೆ ಸೆಕ್ರೆಟರಿಗಳ ಪತ್ತೆ ಇಲ್ಲ. ಕೆಲವು ಕಡೆ 6-7 ವರ್ಷವಾದರೂ ಆಡಿಟ್ ಆಗಿರುವದಿಲ್ಲ. ಇಂಥದನ್ನೆಲ್ಲಾ ತಪ್ಪಿಸಿ, ಇದನ್ನು ಬಿಗಿಯಾಗಿ ಮಾಡಿ ಎಲ್ಲಾ ಆಡಿಟ್ ಮಾಡಿ ಯೋಜನೆ ಮಾಡದಿದ್ದರೆ ಕೆಲವು ಸಂಘಗಳು ವಿಶಿಷ್ಟ ಹಿತಾಸಕ್ತಿಗಳ ಪಾಲಿಗೆ ಹೋಗಬಹುದು ಎಂದು ನಾನು ಹೇಳುತ್ತಿದ್ದೇನೆ. ಇವತ್ತಿನ ದಿವಸ ಅವುಗಳಿಗೆ 3 ಲಕ್ಷ 65 ಸಾವಿರ ಕೊಡುತ್ತಿದ್ದಾರೆ. ಆದರೆ ಅದರ ಬಗ್ಗೆ ನಾವು ಯೋಗ್ಯ ಕ್ರಮಗಳನ್ನು

ತೆಗೆದುಕೊಳ್ಳದಿದ್ದರೆ, ತಪ್ಪಾದೀತು. ಕೆಲವು ಯೋನೆಗಳು ಉತ್ತಮವಾಗಿವೆ. ಚಿಕ್ಕೋಡಿಯಲ್ಲಿ ಅಗ್ರಿಕಲ್ಚರಲ್ ಡೆವಲಪ್‌ಮೆಂಟ ಸೊಸೈಟಿ ಮಾಡಿದ್ದಾರೆ. ಸರ್ಕಾರದವರು ಸುಮಾರು 51 ಸಾವಿರ ರೂಪಾಯಿ ಕೊಟ್ಟಿದ್ದಾರೆ. ಅಲ್ಲಿ ಭೂಮಿಯನ್ನು ಸಮ ಮಾಡಿಕೊಳ್ಳುವ ಮತ್ತು ಬೇರೆ ಬೇರೆ ನೀರಾವರಿ ಯೋಜನೆಗಳಿಗೆ ಮಶಿನರಿ ತರಿಸಿ ಕೊಳ್ಳುವ ಕೆಲವು ಉತ್ತಮ ಕೆಲಸಗಳನ್ನು ಮಾಡುತ್ತಿದ್ದಾರೆ. ಇದೇ ರೀತಿಯಲ್ಲಿ ಎಲ್ಲಾ ಸೊಸೈಟಿಗಳು ಬೆಳೆದು ಬರಬೇಕು. ಆ ಪ್ರಕಾರ ಒಂದು ಯೋಜನೆಯಾಗುವುದು ಅತ್ಯಾವಶ್ಯಕವಾದುದು. ಇದಕ್ಕೆ ಎಲ್ಲರೂ ಪ್ರೋತ್ಸಾಹ ಕೊಡಬೇಕು. ಮತ್ತು ಎಲ್ಲಾ ಕಡೆಗಳಲ್ಲೂ ಈ ರೀತಿ ಸಂಘಟಣೆ ಬರುವುದು ನಮ್ಮ ಕರ್ತವ್ಯವೆಂದು ಹೇಳಬೇಕಾಗಿದೆ. ಇನ್ನು ಕಂಜ್ಯೂಮರ್ಸ್ ಸೊಸೈಟಿಗಳಿಗೆ ಬಹಳ ಹಣವನ್ನು ಕೊಡುತ್ತಿದ್ದಾರೆ. ಮತ್ತು ಜನತಾ ಬಜಾರುಗಳನ್ನು ಎಲ್ಲಾ ಕಡೆಗಳಲ್ಲೂ ಮಾಡುತ್ತಿದ್ದಾರೆ. ಜನರಿಗೆ ಯೋಗ್ಯ ಮಾಲು ಸರಿಯಾದ ಬೆಲೆಗೆ ಸಿಗಬೇಕೆನ್ನುವ ಒಂದುದೃಷ್ಟಿಯಿಂದ ಇದನ್ನು ಮಾಡುತ್ತಿದ್ದಾರೆ. ಆದರೆ ಇವುಗಳನ್ನು ಕೂಡ ಜಾಗ್ರತೆಯಿಂದ ನೋಡಿಕೊಳ್ಳುವುದು ಅವಶ್ಯಕ. ಕೆಲವು ಹಿತಾಸಕ್ತಿ ಇದರಲ್ಲಿ ಸೇರಿಕೊಳ್ಳುವುದು ಉಂಟು. ಇದು ಬಹುಶ: ಸೂಕ್ಷ್ಮ ವ್ಯವಹಾರ, ಕಿರಾಣಿ ಅಂಗಡಿ ಇದ್ದ ಹಾಗೆ. ಕಿರಾಣಿ ಅಂಗಡಿ ಮಾಲೀಕನು ಅಂಗಡಿಯನ್ನು ಕಣ್ಣಿಟ್ಟು ನೋಡದೆ ಇದ್ದರೆ, ಅಲ್ಲಿ ಎಲ್ಲಾ ನಾಪತ್ತೆಯಾಗುತ್ತದೆ. ಅಲ್ಲಿ ಕೆಲವು ಮಾತಗಳು ಕೇಳಿ ಬರುತ್ತವೆ. ಅಲ್ಲಿ ರತಕ್ಕ ಮಾಲುಗಳನ್ನು ಅವ್ಯವಹಾರ ರೀತಿಯಲ್ಲಿ ಮಾರಾಟ ಮಾಡುತ್ತಿದ್ದಾರೆ ಎನ್ನುವುದನ್ನು ನಾವು ಗಮನಿಸಬೇಕಾಗುತ್ತದೆ. ಆದರೂ ಕೂಡ ಅದು ನಮ್ಮನ್ನು ಎಚ್ಚರಿಸುವುದಕ್ಕೆ ಬರುತ್ತದೆ. ಎಂಬುದನ್ನು ತಿಳಿದುಕೊಳ್ಳಬೇಕು. ಈಗ ಷೇರ ಬಂಡವಾಳದ ಬಗ್ಗೆ ಸಬ್ಸಿಡಿ ಕೊಡುತ್ತಿದ್ದಾರೆ. ಇವುಗಳನ್ನು ಕೊಡುವಾಗ, ಅವುಗಳ ಲೆಕ್ಕ ತಪಾಸಣೆ ಮಾಡಿ, ಅಲ್ಲಿ ಒಳ್ಳೇ ಜನರನ್ನು ಹಾಕಿ, ಸರ್ಕಾರದ ಹಣ ಪೋಲಾಗದಂತೆ ನೋಡಿಕೊಳ್ಳುವುದು ಅತ್ಯಂತ ಮಹತ್ವದ ಮಾತು ಎಂದು ಹೇಳುತ್ತೇನೆ. ಇದೇ ಪ್ರಕಾರ ನಾವು ಬೇರೆ ಬೇರೆ ಪಿ.ಡಬ್ಲ್ಯುಡಿ ಕೆಲಸಗಳಿಗೆ ಹೆಚ್ಚು ಹಣವನ್ನು ಒದಗಿಸಿದ್ದೇವೆ. ಅದೆಲ್ಲವನ್ನು ಯೋಗ್ಯ ರೀತಿಯಲ್ಲಿ ಖರ್ಚು ಮಾಡಿ ಎಲ್ಲಾ ಕಡೆಗಳಲ್ಲೂ ಜನರು ಇದರಿಂದ ಪ್ರಯೋಜನವನ್ನು ಪಡೆದು, ಒಳ್ಳೆಯ ದಿವಸಗಳನ್ನು ಕಾಣಲಿ, ಮತ್ತು ಮುಂದೆ ಬೇಗನೆ ಆ ಒಳ್ಳೆಯ ದಿವಸ ಕಾಣುವಂತಾಗಲಿ ಎಂದು ಹಾರೈಸಿ ನನ್ನ ನಾಲ್ಕು ಮಾತುಗಳನ್ನು ಮುಗಿಸುತ್ತೇನೆ.

# ವಿಧಾನ ಪರಿಷತ್ತು ಇರಬೇಕೆ?:

24ನೇ ಮಾರ್ಚ್ 1970

**ಪಂಚಗಾವಿ ಅಪರೂಪದ ಪ್ರಬುದ್ಧ - ರಾಜಕಾರಣಿ! ಸಮರ್ಥ ಪ್ರಜ್ಞಾವಂತ ಜನಪ್ರತಿನಿಧಿ! ಅಪ್ಪಟ ಗಾಂಧೀವಾದಿ! ಅವರ ವಾಗ್ವೈಖರಿ ಪ್ರತಿಪಾದಿಸುವ ವಿಚಾರ - ವಾದಗಳು ಇಡೀ ವಿಧಾನ ಮಂಡಲದ ಘನತೆ ಗೌರವ ಹೆಚ್ಚಿಸುವಂತಿದ್ದವು. ಹಲವಾರು ವಿಷಯಗಳಿಗೆ ಸಂಬಂಧಪಟ್ಟಂತೆ ಇಲ್ಲಿಯ ಮಾತು ಮಂಡನೆಗಳು ಅದನ್ನು ಋಜುವಾತು ಪಡಿಸುವಂತಿವೆ.**

ಮಾನ್ಯ ಅಧ್ಯಕ್ಷರೇ, ಮೊಟ್ಟ ಮೊದಲನೆಯದಾಗಿ ನಾನು ಮುಖ್ಯವಾಗಿ ಲೆಜಿಸ್ಲೇಚರ್ ಬಗ್ಗೆ ಹೇಳುವುದಾದರೆ ಕೌನ್ಸಿಲ್‌ನ್ನು ರದ್ದು ಪಡಿಸಬೇಕು. ಎನ್ನುವ ಒಂದು ಸೂಚನೆ ಬಂದಿದೆ. ಶ್ರೀಮಾನ ನಾಗಪ್ಪನವರು ಈ ಸೂಚನೆಯನ್ನು ಕಳುಹಿಸಿದ್ದಾರೆ. ಚಿಕ್ಕ ಚಿಕ್ಕ ರಾಜ್ಯಗಳಲ್ಲಿ ಕೌನ್ಸಿಲ್ ಇರಬೇಕೇ, ಬೇಡವೇ ಎನ್ನುವ ಪ್ರಶ್ನೆ ಮಹತ್ವದ್ದು. ಜೊತೆಗೆ ನಮ್ಮ ಅಭಿಪ್ರಾಯದಲ್ಲಿ ನಮ್ಮ ಈಗಿನ ಆರ್ಥಿಕ ಪರಿಸ್ಥಿತಿಯಲ್ಲಿ ಕೌನ್ಸಿಲನ್ನು ರದ್ದುಪಡಿಸುವುದು ಒಳ್ಳೆಯದು ಎಂದು ನನ್ನ ಅಭಿಪ್ರಾಯ. ಉಪಾಧ್ಯಾಯರ ಕ್ಷೇತ್ರ, ಪದವೀದರ ಕ್ಷೇತ್ರ, ಸ್ಥಳೀಯ ಪ್ರಾಧಿಕಾರಿಗಳ ಕ್ಷೇತ್ರ ಈ ರೀತಿ ನಾನಾ ಕ್ಷೇತ್ರಗಳಿಂದ ಪ್ರತಿನಿಧಿಗಳು ಆರಿಸಿ ಬಂದು ಈ ಕೌನ್ಸಿಲ್‌ನಲ್ಲಿ ಕಾರ್ಯ ಬಾರ ಮಾಡುತ್ತಿದ್ದಾರೆ. ಹಿಂದಿನ ಕಾಲದಲ್ಲಿ ಅಂದರೆ ಬ್ರಿಟಿಷ್ ಪಾರ್ಲಿಮೆಂಟನಲ್ಲಿದ್ದ ಹೌಸ್ ಆಪ್ ಲಾರ್ಡ್ಸ್ ಯಾವ ರೀತಿ ಕೆಲಸ ಮಾಡುತ್ತಿತ್ತೋ ಅದೇ ರೀತಿ ಇಲ್ಲಿಯೂ ಮೇಲ್ಮನೆಯವರು ಚೆನ್ನಾಗಿ ಕೆಲಸ ಮಾಡಿಕೊಂಡು ಬರುತ್ತಿದ್ದರು. ಈಗಿನ ಕಾಲದಲ್ಲಿ ಈ ಮೇಲ್ಮನೆಯಲ್ಲಿ ಆಗುವ ಕೆಲಸ ನೋಡಿದರೆ ಈ ಕೆಳಮನೆಯಲ್ಲಿ ಏನು ಕಾಯಿದೆ ಪಾಸು ಮಾಡುತ್ತೇವೋ ಅದಕ್ಕೆ ಮೇಲ್ಮನೆಯವರು ಅಸ್ತು ಎನ್ನುವುದೇ ಹೊರತು ಏನಾದರೂ ಒಂದು ಅಮೂಲ್ಯವಾದ ಸೂಚನೆ ಬಂದಿದೆಯೇ ಎಂದರೆ ಏನೂ ಇಲ್ಲ. ಹೀಗಾಗಿ ವೇಳೆ ಮತ್ತು ಹಣ ಖರ್ಚಾಗುತ್ತಾ ಇರುವುದನ್ನು ತಪ್ಪಿಸಬೇಕು. ಆದ್ದರಿಂದ ಈ ಮೇಲ್ಮನೆಯನ್ನು ರದ್ದು ಮಾಡುವುದು ಒಳ್ಳೆಯದು ಎಂದು ನನ್ನ ಅಭಿಪ್ರಾಯ.

## ನ್ಯಾಯಾಧೀಶರಿಗೆ ವಸತಿ ಸೌಲಭ್ಯ :

ಇನ್ನೊಂದು ವಿಷಯ. ಶ್ರೀಮಾನ್ ಎಸ್.ಆರ್. ಬೊಮ್ಮಾಯಿ ಅವರು ನ್ಯಾಯಾದೀಶರಿಗೆ ಅನೇಕ ಕಡೆಗಳಲ್ಲಿ ಮನೆಗಳಿಲ್ಲವೆಂದು ಹೇಳಿದರು. ನ್ಯಾಯಾದೀಶರಿಗೆ ಮನೆಗಳು ಸಿಕ್ಕದೇ ಇರುವುದರಿಂದ ಅವರ ಕೆಲಸಕ್ಕೆ ಬಹಳಷ್ಟು ತೊಂದರೆಯಾಗಿದೆ ಎನ್ನುವುದನ್ನು ಒಪ್ಪುತ್ತೇನೆ. ಅವರಿಗೆ ಮನೆಗಳನ್ನು ಕಟ್ಟಿಕೊಡುವುದು ಅವಶ್ಯಕ. ಅವರ ಕುಂದುಕೊರತೆಗಳನ್ನು ಹೋಗಲಾಡಿಸಬೇಕು. ಅವರಿಂದ ಯೋಗ್ಯವಾದ ಕೆಲಸವನ್ನು ತೆಗೆದುಕೊಳ್ಳುವುದು ಅವಶ್ಯಕ ಇದೆ. ಈ ಪ್ರಜಾಪ್ರಭುತ್ವದಲ್ಲಿ ನ್ಯಾಯಾಸ್ಥಾನ ಅವಶ್ಯಕ. ಅವರು ಸ್ವತಂತ್ರವಾಗಿ ಕೆಲಸ ಮಾಡುವುದು ಅವಶ್ಯಕ ಇದೆ. ಆದುದರಿಂದ ಅವರಿಗೆ ಅನುಕೂಲಗಳನ್ನು ಕಲ್ಪಿಸಿಕೊಡುವುದು ಒಳ್ಳೆಯದು. ಹೈಕೋರ್ಟಿನಲ್ಲಿ ಬಹಳಷ್ಟು ಕೇಸುಗಳು ಇತ್ಯರ್ಥವಾಗುವುದು ತಡವಾಗುತ್ತಿದೆ. ಅದರಿಂದ ನ್ಯಾಯ ದೊರಕುವುದು ನಿಧಾನವಾಗುತ್ತಿದೆ. ಇದರ ಪರಿಣಾಮವಾಗಿ ಜನರಿಗೆ ತೊಂದರೆಯಾಗುತ್ತಿದೆ. ಈ ದೃಷ್ಟಿಯಿಂದ ಜನರಿಗೆ ತೀವ್ರವಾಗಿ ನ್ಯಾಯ ದೊರಕುವ ಸಲುವಾಗಿ ಅವರಿಗೆ ಸಾಕಷ್ಟು ಸೌಕರ್ಯಗಳನ್ನು ಒದಗಿಸಿಕೊಡಬೇಕು. ಹಾಗಾದರೆ ಅವರಿಂದ ಸಾಕಾದಷ್ಟು ಕೆಲಸವನ್ನು ಬೇಗ ಮಾಡಿಸಿ ಜನರಿಗೆ ಹೆಚ್ಚು ಸೌಕರ್ಯವನ್ನು ಕಲ್ಪಿಸಿಕೊಟ್ಟಂತಾಗುತ್ತದೆ. ಇದು ಅತ್ಯಂತ ಅವಶ್ಯ ಇದೆ.

## ನಿರುದ್ಯೋಗ ಸಮಸ್ಯೆ :

ಕೊನೆಯದಾಗಿ ಲೇಬರ್ ಮತ್ತು ಎಂಪ್ಲಾಯ್‌ಮೆಂಟ್ ಬಗ್ಗೆ ಹೇಳುವುದಾದರೆ ಈಗಾಗಲೇ ನಮ್ಮ ಎಂಪ್ಲಾಯಮೆಂಟ ಎಕ್ಸ್‌ಛೇಂಜನಲ್ಲಿ ಸುಮಾರು 1 ಲಕ್ಷ 22 ಸಾವಿರ ಜನ ರಿಜಿಸ್ಟರ್ ಮಾಡಿಸಿ ಕೊಂಡಿದ್ದಾರೆ. ಇನ್ನೂ ರಿಜಿಸ್ಟರ್ ಮಾಡಿಸಿಕೊಳ್ಳದೇ ಇರುವವರು ಇದ್ದಾರೆ. ಸುಶಿಕ್ಷಿತ ನಿರುದ್ಯೋಗಿಗಳು ನಮ್ಮ ರಾಜ್ಯದಲ್ಲಿ ಇದರ 4 ಪಟ್ಟು ಇದ್ದಾರೆನ್ನುವುದಕ್ಕೆ ಅಡ್ಡಿ ಇಲ್ಲ. ಆದರೆ ಈಗ ಇದನ್ನೆಲ್ಲಾ ನೋಡಿದರೆ ಅವರಿಗೆ ಉದ್ಯೋಗ ದೊರಕಿಸಿಕೊಡಬೇಕಾದ್ದು ಅತ್ಯಂತ ಅವಶ್ಯಕ ಇದೆ. ಒಂದು ಕಡೆ ನಿರುದ್ಯೋಗ ತಾಂಡವಾಡುತ್ತಾ ಇರುವಾಗ ಕೆಲವು ಕಡೆ ಕೆಲಸ ಇದ್ದು ಯೋಗ್ಯ ಜನ ದೊರೆಯುವದಿಲ್ಲ. ಅಂಥವರನ್ನು ತಯಾರು ಮಾಡುವುದು ಅವಶ್ಯಕ. ಅಲ್ಲಲ್ಲಿ ನೋಡಿದರೆ ಸೆಮಿ ಟೆಕ್ನಿಕಲ್, ಸ್ಕಿಲ್ಡ್ ಲೇಬರನ್ಸ್, ಬಡಗಿಗಳು, ಕಮ್ಮಾರರು, ಮನೆ ಕಟ್ಟುವವರು ಅದಲ್ಲದೆ ಒಕ್ಕಲು ತನದ ಕೆಲಸದಲ್ಲೂ ಕೂಡ ಅನೇಕ ಕೆಲಸಕ್ಕೆ ಜನ ಸಿಕ್ಕುವುದಿಲ್ಲ. ಕೆಲವೊಂದು ಕೆಲಸಕ್ಕೆ ಜನ ಸಿಕ್ಕುತ್ತಾರೆ. ಕೆಲವೊಂದು ಕೆಲಸಕ್ಕೆ ಜನ ಸಿಕ್ಕುವುದಿಲ್ಲ. ಅನೇಕ ಇಂಡಸ್ಟ್ರೀಸ್‌ನಲ್ಲಿ ಶಿಕ್ಷಣ ಕೊಡುವುದನ್ನು ಮಾಡಿದ್ದಾರೆ.

ಅದರಲ್ಲಿ ಥಿಯರಿ ಜೊತೆಗೆ ಪ್ರಾಕ್ಟಿಕಲ್ ಟ್ರೈನಿಂಗ್ ಕೂಡ ಕೊಡಬೇಕು. ಕಮ್ಮಾರರು, ಬಡಗಿಗಳು, ಸ್ಕಿಲ್ಡ್ ಲೇಬರರ್ಸ್, ಸೆಮಿ ಟೆಕ್ನಿಕಲ್ ಇಂಥ ಕೆಲಸ ಮಾಡಲು ಪ್ರಾಕ್ಟಿಕಲ್ ಆಗಿ ಅನುಭವ ಇರಬೇಕು. ಬರೀ ಥಿಯೋರಿಟಿಕಲ್ ನಾಲೆಡ್ಜ್ ಇದ್ದರೆ ಪ್ರಯೋಜನವಿಲ್ಲ. ಹಾಗೆ ಬರೀ ಥಿಯಾರಿಟಿಕಲ್ ಆಗಿ ಟ್ರೈನಿಂಗ್ ಕೊಟ್ಟರೆ ಉಪಯೋಗವು ಆಗುವುದಿಲ್ಲ. ಈಗ ಎಲೆಕ್ಟ್ರಿಕಲ್ ಇಂಜಿನಿಯರ್ ಪರೀಕ್ಷೆಯಲ್ಲಿ ಪಾಸು ಮಾಡಿಕೊಂಡರೂ ಏನೇನೋ ಕೆಲಸ ಅವರಿಗೆ ಬರುವುದಿಲ್ಲ. ಅದೇ ರೀತಿ ಮೆಕ್ಯಾನಿಕಲ್ ಡಿಪ್ಲೋಮಾ ಪಾಸು ಮಾಡಿದರೂ ಕೂಡ ಒಂದು ಇಂಜಿನ್ ಕೂಡ ನಡೆಸುವುದಕ್ಕೆ ಬರುವುದಿಲ್ಲ. ಇವೊತ್ತು ಈ ರೀತಿಯ ಮೆಕ್ಯಾನಿಕಲ್ ಮತ್ತು ಎಲೆಕ್ಟ್ರಿಕಲ್ ಪಾಸು ಮಾಡಿದ ಜನ ಕೆಲಸ ಇಲ್ಲದೆ ಇದ್ದಾರೆ. ಇದರಿಂದ ಶಿಕ್ಷಣ ಕ್ಷೇತ್ರಕ್ಕೆ ಸಾರ್ವಜನಿಕರ ದುಡ್ಡು ಬಹಳ ಖರ್ಚಾಗುತ್ತದೆ. ವೇಳೆಯೂ ಬಹಳಷ್ಟು ಖರ್ಚಾಗುತ್ತದೆ. ಆದುದರಿಂದ ಅವರಿಗೆ ಸರಿಯಾದ ಶಿಕ್ಷಣ ದೊರಕುವಂತೆ ಮಾಡಬೇಕು.

ಈ ವರ್ಷ ಎಕ್ವಿಪ್‌ಮೆಂಟಗಾಗಿ 9 ಲಕ್ಷ ರೂಪಾಯಿಗಳನ್ನು ಇಟ್ಟಿದ್ದೀರಿ. ಇದು ಏತಕ್ಕೂ ಸಾಲದು. ಈ ಶಿಕ್ಷಣಕ್ಕೆ ಕೊಡುವಂಥ ಹಣ ಬಹಳ ಕಡಿಮೆ. ಪ್ರತ್ಯೇಕ ಪ್ರಾಕ್ಟಿಕಲ್ ಟ್ರೈನಿಂಗ್ ಕೊಟ್ಟರೆ ಅನುಕೂಲವಾಗುತ್ತದೆ. ಈಗ ಇರುವ ನಿರುದ್ಯೋಗವನ್ನು ನಿವಾರಣೆ ಮಾಡಲು ಯೋಜನೆಗಳನ್ನು ಕೈಗೊಳ್ಳಬೇಕು. ಅನೇಕ ಗ್ರಾಜ್ಯುಯೇಟ್ಸ್ ಮತ್ತು ಡಿಪ್ಲೋಮಾ ಹೋಲ್ಡರ್‌ಗೆ ಕೇಂದ್ರ ಸರ್ಕಾರದವರು ಸ್ಟೈಪಂಡ್ ಕೊಟ್ಟು ಉದ್ಯೋಗಗಳನ್ನು ಕಲ್ಪಿಸಿಕೊಟ್ಟಿದ್ದಾರೆ. ಇದೂ ಸಾಲದು. ಅವರಿಗೆ ಸಾಕಷ್ಟು ಸಾಲ ಸಿಕ್ಕಿ ಹೆಚ್ಚಾಗಿ ಕೆಲಸದಲ್ಲಿ ತೊಡಗುವಂತೆ ಮಾಡಬೇಕು. ಇದರ ಬಗ್ಗೆ ಇನ್ನೂ ಏನೇನು ಯೋಜನೆಗಳು ಇವೆಯೋ ಅದನ್ನು ಅನುಷ್ಠಾನಕ್ಕೆ ತಂದು ಹೆಚ್ಚು ಜನರಿಗೆ ಕೆಲಸ ಸಿಗುವಂತೆ ಮಾಡಬೇಕು. ಅವರಿಗೆ ಸ್ವತಂತ್ರವಾದ ಉದ್ಯೋಗಗಳನ್ನು ಮಾಡಿ ಕೊಟ್ಟರೆ ಈ ನಿರುದ್ಯೋಗದ ಸಮಸ್ಯೆಯನ್ನು ಬಿಡಿಸಬಹುದು. ಬರೀ ಸರ್ಕಾರಿ ನೌಕರರಿಗೆ ಇವರನ್ನು ತೆಗೆದುಕೊಳ್ಳುತ್ತೇವೆ. ಎಂದರೆ ಸಾಲದು, ಇದು ಸರಿಯಾದ ಮಾತಲ್ಲ. ಇಂದು ಸರ್ಕಾರಿ ಕಛೇರಿಗಳಲ್ಲಿ ಬಹಳಷ್ಟು ಜನ ಕೆಲಸಕ್ಕೆ ತೆಗೆದುಕೊಳ್ಳುತ್ತಿದ್ದೀರಿ. ಆದರೆ ಅಲ್ಲಿ ಜನರಿಗೆ ಸಾಕಷ್ಟು ಕೆಲಸವಿಲ್ಲ. ಅದನ್ನು ತಾವು ತಿಳಿದುಕೊಳ್ಳಬೇಕು. ಅನೇಕ ಕಡೆ ಮಂತ್ರಿಗಳು, ಚೀಫ್ ಮಿನಿಸ್ಟರ್, ಫೈನಾನ್ಸ್ ಮಿನಿಸ್ಟರ್ ಹೇಳುತ್ತಾರೆ. ಸರ್ಕಾರಿ ಕಛೇರಿಯಲ್ಲಿ ಅರ್ಧಕ್ಕಿಂತ ಹೆಚ್ಚು ಜನ ಕೆಲಸ ಇಲ್ಲದೆ ಕೂತಿದ್ದಾರೆ. ಎಂದು. **ಇನ್ನೊಂದು ಕಡೆ ರಿಟೈರ್ಡ್**

**ಆಫೀಸರ್ಸ್ ಡೆಪ್ಯುಟಿ ಕಮೀಷನರ್ ಡಿ.ಎಸ್.ಪಿ. ಅಂತಹವರಿಗೆ ಎಕ್ಸ್‌ಟೆನ್‌ಷನ್ ಕೊಡುತ್ತಾ ಹೋಗುವುದು ಸರಿಯಲ್ಲ. ಅಂತಹವರನ್ನು ದೊಡ್ಡ ದೊಡ್ಡ ಉದ್ಯೋಗಿಗಳಿಗೆ ಪುನಃ ಸೇರಿಸಿಕೊಂಡು ಸಾವಿರಾರು ರೂಪಾಯಿ ಸಂಬಳ ಕೊಡುವುದು ಸರಿಯಲ್ಲ. ಅಂತಹವರಿಗೆ ನೌಕರಿ ಕೊಡುವ ಬದಲು, ಉದ್ಯೋಗ ಇಲ್ಲದೆ ಇರುವವರನ್ನು, ಶಿಕ್ಷಣ ಪಡೆದವರನ್ನು ಏತಕ್ಕೆ ತೆಗೆದುಕೊಳ್ಳಬಾರದು? ಈ ರೀತಿ ಎಕ್ಸ್‌ಟೆನ್‌ಷನನ್ನು ಸರ್ಕಾರದವರು ಕೊಡಬಾರದು ಅದರ ಬದಲು ಹೊಸ ಹೊಸ ಜನರಿಗೆ ಉದ್ಯೋಗಗಳನ್ನು ಕಲ್ಪಿಸಿಕೊಡುವುದು ಒಳ್ಳೆಯದು. ಶ್ರೀಮಂತರನ್ನು ಶ್ರೀಮಂತರನ್ನಾಗಿ ಮಾಡುವುದು ಸರಿಯಲ್ಲ. ಅವರು ಲಕ್ಷಾಂತರ ರೂಪಾಯಿ ಹಾಕಿ ಬೆಂಗಳೂರಿನಲ್ಲಿ ಮನೆ ಕಟ್ಟಿಕೊಂಡಿದ್ದರೂ ಕೂಡ ಅವರಿಗೆ ಇನ್ನೂ ಹೆಚ್ಚು ಹೆಚ್ಚಿಗೆ ಸೌಕರ್ಯಗಳನ್ನು ಒದಗಿಸಿಕೊಡುವುದು ಸರಿಯಲ್ಲ.**

ನಿರುದ್ಯೋಗಿಗಳಿಗೆ **ಉದ್ಯೋಗ ನೀಡಿ:**

ಬೆಂಗಳೂರಿನಲ್ಲಿ ನನ್ನ ಮನೆಯ ಸಮೀಪದಲ್ಲೇ ಕೆಲವು ಜನರು ಬೀದಿ ಭಿಕಾರಿಗಳಾಗಿ ಬೀದಿಯಲ್ಲಿ ಎಸೆದ ಎಂಜಲು ಎಲೆಗಳಿಂದ ತಿನ್ನುತ್ತಿದ್ದುದನ್ನು ನೋಡಿ ನಮಗೆ ಬಹಳ ಸಂಕಟವಾಯಿತು. ಹೀಗೆ ಬೆಂಗಳೂರು ನಗರದಲ್ಲೇ ಇಷ್ಟು ಹೀನ ಸ್ಥಿತಿಯಲ್ಲಿರುವ ಜನರ ಬಗ್ಗೆ ನಾವು ಏನಾದರೂ ಒಂದು ವ್ಯವಸ್ಥೆ ಮಾಡಿ ಇವರೆಲ್ಲರಿಗೂ ಉದ್ಯೋಗವನ್ನು ಕೊಡುವ ವ್ಯವಸ್ಥೆ ಮಾಡಬೇಕು. ಲಕ್ಷಾಂತರ ರೂಪಾಯಿಗಳ ಖರ್ಚು ಮಾಡಿ ಯಾರಿಗೂ ಸರಿಯಾದ ಉದ್ಯೋಗವನ್ನು ಕೊಡುವುದಕ್ಕೆ ಆಗದಿದ್ದರೆ ಇದು ಸಮಾಜವಾದವಾಗುವುದಿಲ್ಲ. ಇದನ್ನು ತಪ್ಪಿಸಬೇಕು. ನಿಜವಾಗಿಯೂ ಜನರಿಗೆ ಪೂರ್ಣವಾದ ಉದ್ಯೋಗವನ್ನು ಒದಗಿಸಿ ಕೊಡುವ ವ್ಯವಸ್ಥೆ ಮಾಡಬೇಕು. ನಮ್ಮ ಭಾಗದಲ್ಲಿ ಫಾರೆಸ್ಟ್ ಲೇಬರು ಸೊಸೈಟಿ ಎಂದು ಮಾಡಿ ಇದರ ಮೂಲಕ ಕೂಲಿಕಾರರಿಗೆ ಕೆಲಸಗಳು ಸಿಗುವಂತೆ ಮಾಡುತ್ತಿದ್ದರು. ಪಿ.ಡಬ್ಲ್ಯು.ಡಿ. ಇಲಾಖೆಯಲ್ಲಿ ಕೆಲಸಗಳನ್ನು ಬರೀ ಕಂಟ್ರಾಕ್ಟುದಾರರುಗಳಿಗೆ ಕೊಡುವುದಕ್ಕಿಂತ ಇಂಥ ಕೂಲಿ ಜನರ ಮೂಲಕ ಕೆಲಸಗಳನ್ನು ಮಾಡಿಸಿದರೆ ಅನುಕೂಲವಾಗುತ್ತದೆ. ಕಂಟ್ರಾಕ್ಟರುಗಳಿಗೆ ಲಾಭವಾಗುವುದಕ್ಕಾಗಿ ಕೆಲಸಗಳನ್ನು ಕೊಡುತ್ತಾರೆಯೇ ಹೊರತು ಕೂಲಿಗಾರರ ಸಂಘಟನೆ ಮಾಡಿಕೊಂಡು ಕೆಲಸ ಮಾಡುವ ಕೂಲಿಗಾರರುಗಳಿಗೆ ಸರಿಯಾದ ಪ್ರೋತ್ಸಾಹ ಕೊಡುತ್ತಿಲ್ಲ. ಈ ರೀತಿ ಪ್ರೋತ್ಸಾಹ ಕೊಟ್ಟಿದ್ದರೆ ಇವರು ದಿನಕ್ಕೆ ಎರಡು ಮೂರು ರೂಪಾಯಿಗಳ ಕೂಲಿಯನ್ನು ಸಂಪಾದಿಸಿಕೊಂಡು ಜೀವನ

ಮಾಡಲು ಅವಕಾಶವಾಗುತ್ತಿತ್ತು. ಇದನ್ನು ತಪ್ಪಿಸಿ ಲಕ್ಷಾಂತರ ರೂಪಾಯಿಗಳ ಕೆಲಸಗಳನ್ನೆಲ್ಲಾ ಕಂಟ್ರಾಕ್ಟರುಗಳ ಮೂಲಕವೇ ಮಾಡಿಸಿ ಅವರಿಗೆ ಲಾಭ ಸಂಪಾದನೆ ಮಾಡಿಕೊಳ್ಳಲು ಅವಕಾಶ ಮಾಡುತ್ತಿದ್ದಾರೆ. ಲೇಬರ ಡಿಸ್‌ಪ್ಯೂಟ್ಸ್‌ಗಳು ಕೂಡ ನೂರಾರು ಆಗಿವೆ. ಬಹುತೇಕ ಬಡ ಜನರೇ ಎಲ್ಲ ಕಡೆಯಲ್ಲೂ ನಷ್ಟಕ್ಕೆ ಒಳಗಾಗಿರುತ್ತಾರೆ. ಕೂಲಿಕಾರ ಜನಗಳಿಗೆ ಸ್ಥಾನಿಕ ಸಂಸ್ಥೆಗಳಿಂದ ಯಾವ ರೀತಿಯ ಪ್ರೋತ್ಸಾಹ ದೊರಕಬೇಕೋ ಅದು ಸಿಗುತ್ತಿಲ್ಲ. ಮತ್ತು ಎಲ್ಲ ಕಡೆಗಳಲ್ಲೂ ಉದ್ಯೋಗಗಳನ್ನು ಇಂತಹ ಕೂಲಿಕಾರ ಜನಗಳಿಗೆ ಒದಗಿಸಿ ಕೊಡುವುದು ಅವಶ್ಯವಿದೆ. ಸರಕಾರದ ವತಿಯಿಂದ ಆಗಿರುವ ಸಹಕಾರ ಸಂಘಗಳಲ್ಲಿ ಎಷ್ಟರಮಟ್ಟಿಗೆ ಕೈಗಾರಿಕೆಗಳು ಮುಂದುವರಿಯುತ್ತವೆಯೋ ಮತ್ತು ಇವರ ಕೈಯಲ್ಲಿ ಏನು ಮಾಡಲಾಗುತ್ತದೋ ಎಂಬುದನ್ನು ನನಗಂತೂ ಹೇಳಲು ಶಕ್ಯವಿಲ್ಲ. ಒಟ್ಟಿನಲ್ಲಿ ಈ ಇಲಾಖೆಯಲ್ಲಿ ಲಂಚಗುಳಿತನ ಎನ್ನುವುದು ಬೆಳೆಯುತ್ತಾ ಬರುತ್ತಿದೆ. ಇನ್ನೂ ಇಂಜನೀಯರಿಂಗ್ ಗ್ರ್ಯಾಜ್ಯುಯೇಟ್ಸ್‌ಗಳಿಗೆ ಹಾಗೂ ಡಿಪ್ಲೋಮಾ ಹೋಲ್ಡರಗಳಿಗೆ ಉದ್ಯೋಗಗಳನ್ನು ಕೊಡಬೇಕು ಎಂದು ಇವರಿಗೂ ಕಾಂಟ್ರ್ಯಾಕ್ಟಗಳನ್ನು ಕೊಟ್ಟು ಕೆಲಸ ಮಾಡಬೇಕೆಂದು ಮಾಡಿದ್ದಾರೆ. ಆದರೆ ಇವರಿಗೆ ಸರಕಾರದ ಕಡೆಯಿಂದ ಎಲ್ಲ ರೀತಿಯಿಂದಲೂ ಯೋಗ್ಯವಾದ ಕೆಲಸವಾಗುತ್ತದೆ ಎಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಇವರೆಲ್ಲರೂ ಕಾಂಟ್ರ್ಯಾಕ್ಟದಾರರಂತೆ ಕೆಲಸ ಮಾಡಬೇಕಾಗಿದೆ. ಇವರಿಗೆ ಇಲಾಖೆಯಲ್ಲಿರುವ ಅಧಿಕಾರಿ ವರ್ಗದವರು ಹೊಂದಾಣಿಕೆಯಿಂದ ಇರುತ್ತಾರೋ ಹೇಗೋ ನನಗಂತೂ ಗೊತ್ತಿಲ್ಲ. ಅನೇಕ ಕಡೆಗಳಲ್ಲಿ ಅಗ್ರಿಕಲ್ಚರ್ ಗ್ರ್ಯಾಜುಯೇಟಗಳಿಗಾಗಿ ಭೂಮಿ ಕೊಟ್ಟು ಅವರು ತಮ್ಮ ವೃತ್ತಿಯನ್ನು ಅದರಲ್ಲಿಯೇ ಮಾಡಬೇಕೆಂದಿದ್ದಾರೆ. ಇದೇನೋ ಸರಿಯಾದ ಕೆಲಸ ಅಗ್ರಿಕಲ್ಚರಲ್ ಗ್ರ್ಯಾಜುಯೇಟಗಳಾಗಿ ಇರುವವರಲ್ಲಿ ಕೆಲವರು ಬಡವರಿರುತ್ತಾರೆ. ಇವರಿಗೆ ಭೂಮಿ ಸಿಗುವುದು ಎಂದರೆ ಕಷ್ಟ ಇದಕ್ಕಾಗಿ ಸರಕಾರವೇ ಮುಂದೆ ಬಂದು ಜಮೀನುಗಳನ್ನು ಕೊಡುತ್ತಿರುವುದು ಯೋಗ್ಯವಾಗಿದೆ. ಇವರೆಲ್ಲರಿಗೂ ಭೂಮಿಯನ್ನು ಒದಗಿಸಿಕೊಟ್ಟು ಅವರ ಮುಖೇನ ಯೋಗ್ಯವಾದ ಕೆಲಸಗಳನ್ನು ಮಾಡಿಸುವುದು ಅವಶ್ಯಕ. ಸಮಾಜವಾದದ ಹಿತದೃಷ್ಟಿಯಿಂದ ಇಂತಹ ಕೆಲಸಗಳನ್ನು ಕೊಡುವುದು ಒಳ್ಳೆಯದು. ಇದು ಬಡ ಜನರಿಗೆ ಅತ್ಯಂತ ಅವಶ್ಯವಿದೆ. ಇದರ ಕಡೆಗೆ ಸರಕಾರ ಹೆಚ್ಚು ಲಕ್ಷ್ಯ ಕೊಡಬೇಕು ಎಂದು ಹೇಳಿ ಮಾನ್ಯ ಅಧ್ಯಕ್ಷರು ಅವಕಾಶ ಕೊಟ್ಟದ್ದಕ್ಕಾಗಿ ಅವರನ್ನು ವಂದಿಸಿ ನನ್ನ ನಾಲ್ಕು ಮಾತುಗಳನ್ನು ಮುಗಿಸುತ್ತೇನೆ.

# ಬರಗಾಲ ಮತ್ತು ಬರ ಕಾಮಗಾರಿ :

24ನೇ ಸೆಪ್ಟೆಂಬರ್ 1968

**ಪಂಚಗಾವಿಯವರು 1967-68 ರ ಬರಗಾಲದ ಚಿತ್ರಣವನ್ನು ಅದರ ದಾರುಣತೆ - ಧೈನ್ಯತೆಯನ್ನು ಕರುಳಿರಿಯುವಂತೆ ತಮ್ಮ ಮಾತುಗಳಲ್ಲಿ ತುಂಬಾ ಮಾರ್ಮಿಕವಾಗಿ ಚಿತ್ರಿಸುತ್ತ, ಈ ಜನಗಳ ಬದುಕಿನ ಬವಣೆ ನೀಗಲು ಕೂಡಲೇ ಬರಕಾಮಗಿರಿ ಯೋಜನೆ ಕೈಗೆತ್ತಿಕೊಳ್ಳುವ ಅನಿವಾರ್ಯತೆಯನ್ನು ಸರಕಾರಕ್ಕೆ ಯಶಸ್ವಿಯಾಗಿ ಮನದಟ್ಟು ಮಾಡಿ ಕೊಡುತ್ತಾರೆ. ಓರ್ವ ಜವಾಬ್ದಾರಿಯುತ ಜನಪ್ರತಿನಿಧಿಯಾಗಿ ತಾನು ಪ್ರತಿನಿಧಿಸುವ ಜನತೆಯ ಸಮಗ್ರ ಆಶೋತ್ತರಗಳಿಗೆ ಸಮರ್ಥವಾಗಿ ಪ್ರತಿಸ್ಪಂಧಿಸುತ್ತ ಸರ್ಕಾರದಲ್ಲಿ ಶಾಸನ ಸಭೆಗಳಲ್ಲಿ ಜನಪರ ನಿಲುವಿನ ಅವರೆಲ್ಲರ ಪ್ರಾತಿನಿಧಿಕ ದನಿಯಾಗುತ್ತಾರೆ.**

ಮಾನ್ಯ ಅಧ್ಯಕ್ಷರೇ, **ಈ ಪ್ರಾಂತ್ಯದ ಉತ್ತರದ ಬೆಳಗಾಂವ, ವಿಜಾಪೂರ ದಂಡೆಯಿಂದ ಹಿಡಿದು ಬೆಂಗಳೂರ, ಕೋಲಾರದವರೆಗೆ ಸುಮಾರು 16 ಜಿಲ್ಲೆಗಳಷ್ಟು ಭಾಗ ಅತ್ಯಂತ ದಾರುಣವಾದ ಬರಗಾಲಕ್ಕೆ ತುತ್ತಾಗಿದೆ. ಮೊದಲು ಮೇ ತಿಂಗಳಲ್ಲಿ ಅಲ್ಪಸ್ವಲ್ಪ ಮಳೆಯಾಗಿ ಬಿತ್ತನೆಯಾಗಿದೆ. ಆಮೇಲೆ ಮಳೆ ಏನೂ ಬರಲೇಇಲ್ಲ. ಈ ತಂಪು ಹವೆಯನ್ನು ನೋಡಿದರೆ ಮಳೆ ಬರುವ ಲಕ್ಷಣ ಕೂಡ ಕಾಣುತ್ತಾ ಇಲ್ಲ. ನಾವು ಅತ್ಯಂತ ಭೀಕರವಾದ ಬರಗಾಲವನ್ನು ಎದುರಿಸಬೇಕಾಗಿದೆ. ಎಲ್ಲಿ ನೋಡಿದರೂ ಹಾಹಾಕಾರ, ಜನರಿಗೆ ಕೆಲಸವಿಲ್ಲ, ತಿನ್ನಲು ಆಹಾರವಿಲ್ಲ ಇಂಥ ಪರಿಸ್ಥಿತಿ ಉಂಟಾಗಿದೆ. ಬಡಬಗ್ಗರಿಗೆ ಅಂತೂ ಬಹಳ ಬಿಕ್ಕಟ್ಟಿನ ಪರಿಸ್ಥಿತಿಯಾಗಿದೆ. ಹಿಂದಿನ ಬರಗಾಲ ಬೇರೆ ರೀತಿಯಾಗಿತ್ತು. ಆದರೆ ಇಂದಿನ ದಿವಸ ಆ ಪರಿಸ್ಥಿತಿ ಇಲ್ಲ ಊರುಗಳನ್ನು ಬಿಟ್ಟು ಹೋಗಲು ಕೂಡ ಅವಕಾಶ ವಿಲ್ಲದಾಗಿದೆ. ಇಂಥ ಪರಿಸ್ಥಿತಿಯಲ್ಲಿ ಜನರು ದಿವಸ ಕಳೆಯುವದು ಹೇಗೆ ಎನ್ನುವ ಮಾತನ್ನು ನಾವೂ ಪೂರ್ತಿಯಾಗಿ ವಿಚಾರ ಮಾಡಬೇಕಾಗುತ್ತದೆ. ಬರಗಾಲವು ನಮ್ಮ ದೇಶಕ್ಕೆ ಹೊಸದೇನೂ ಅಲ್ಲ. ಅದರ ಅನುಭವವನ್ನು ನಾವು ಉಣ್ಣುತ್ತಾ ಬಂದಿದ್ದೇವೆ.** ಅದರಲ್ಲೂ ಅನೇಕ ಲಕ್ಷಾಂತರ ಜನರು ಜೀವ ಕಳೆದಕೊಂಡ ಇತಿಹಾಸವನ್ನು ನೋಡಿದ್ದೇವೆ. ಮೊನ್ನೆ ಮೊನ್ನೆ 1943 ರ ದುರಂತವನ್ನು ನೋಡಿದರೆ ನಮಗೆ ಇದರ ನೈಜ ಚಿತ್ರವು ಅರಿವಾಗುತ್ತದೆ. ಇಂಥ

ಭೀಕರ ಪರಿಸ್ಥಿತಿ ನಮ್ಮ ಮುಂದೆ ಇರುವಾಗ ನಾವು ಇದರಿಂದ ಕಳೆದ 20 ವರ್ಷಗಳಿಂದ ಕಲಿತ ಪಾಠವೇನು? ಸ್ವಾತಂತ್ರ್ಯ ಸಿಕ್ಕ ನಂತರ ನಾವು ಮಾಡಿದ್ದೇನು ಎಂದು ಕೇಳಿಕೊಳ್ಳುವಂತಾಗಿದೆ. ಈಗ ನೋಡಿದರು ಕೂಡ ಮತ್ತೂ ಅದೇ ಪರಿಸ್ಥಿತಿ ಬರುತ್ತಿದೆ. ದೇಶದ ಜನಸಂಖ್ಯೆಯೂ ದಿನೆ ದಿನೇ ಬೆಳೆಯುತ್ತಾ ಇದೆ. ಅದೇ ಪ್ರಮಾಣದಲ್ಲಿ ಆಹಾರ ಧಾನ್ಯ ಬೆಳೆಯುತ್ತಾ ಇಲ್ಲ. ಇಂದೂ ಕೆಲವು ಪತ್ರಿಕೆಗಳಲ್ಲಿ ಮತ್ತು ಕೆಲವು ವರದಿಗಳಲ್ಲಿ ಪರಿಸ್ಥಿತಿಯನ್ನು ನೋಡಿದರೆ ತಿಳಿಯುತ್ತದೆ. ನಮ್ಮ ದೇಶದಲ್ಲಿ ನ್ಯಾಶನಲ್ ಕೌನ್ಸಿಲ್ ಆಪ್ ಅಪ್ಲೈಡ್ ಇಕಾನಾಮಿಕ್ ರಿಸರ್ಚ್, ಅವರು ಮಾಡಿದ ಕೆಲವು ಸರ್ವೆಗಳಿಂದ ಈ ರೀತಿ ತಿಳಿಯುತ್ತದೆ. Ten Million of the rural population earn on daily average 27 paise or an annual income of Rs. 90 only. ಸಾಧಾರಣ ದಿನಗಳಲ್ಲಿ ಕೇವಲ 25 ಪೈಸೆ ಸಿಕ್ಕುವಂತಹ ಜನ ನಮ್ಮ ದೇಶದಲ್ಲಿ ಒಂದು ಕೋಟಿ ಇದ್ದಾರೆ. ಇದಲ್ಲದೇ ಕಳೆದ 3 ನೇ ಪಂಚವಾರ್ಷಿಕ ಯೋಜನೆಗಳಿಂದ ದೇಶದ ಉತ್ಪನ್ನ ಏರುಪೇರಾಗುತ್ತಾ ಇದೆ. ಶ್ರೀಮಂತರು ಶ್ರೀಮಂತರಾಗುತ್ತಾ ಇದ್ದಾರೆ, ಬಡವರು ಅಧೋಗತಿಗೆ ಇಳಿಯುತ್ತಾ ಇದ್ದಾರೆ. The share income, in income of the top 5% of the house -hold went up from 14 % in 1952 - 53 to 20.4% in 1962 and that of the bottom 20% declines form 7.5 % to 6.4 % ಹೀಗಿದ್ದರೆ ಮೇಲಿನವರೂ ಮೇಲೆ ಹೋಗುತ್ತಾ ಇದ್ದಾರೆ. ಕೆಳಗಿನವರು ಕೆಳಗೆ ಬರುತ್ತಾ ಇದ್ದಾರೆ. ಇಂಥ ಪರಿಸ್ಥಿತಿಯನ್ನು ನಾವು ಎದುರಿಸಬೇಕಾಗಿದೆ. ಇದರಲ್ಲಿ ಆಹಾರ ಧಾನ್ಯದ ವಿಚಾರವು ಕೂಡ ಇದೆ. 1961 ರಲ್ಲಿ ಪರ್‌ಕ್ಯಾಪಿಟಾ 16.4 ಔನ್ಸು ಆಹಾರ ಧಾನ್ಯ ಸಿಗುತ್ತಿತ್ತು. ಈಗ 15.7 ಆಗಿದೆ. ಇದು ಇನ್ನೂ ಕೆಳಗಡೆ ಬರುತ್ತಾ ಇದೆ. ಲೆಕ್ಕ ನೋಡಿದರೆ 250 ಮಿಲಿಯ ಜನರು ಹಿಂದೂಸ್ಥಾನದಲ್ಲಿ ಅಂಡರ್ ನರಿಶ್ಡ್ ಅಥವಾ ಮಾಲ್ ನರಿಶ್ಡ್ ಆಗಿದ್ದಾರೆ. 25 ಕೋಟಿ ಜನರಿಗೆ ಸರಿಯಾದ ಊಟ ಸಿಗುತ್ತಾ ಇಲ್ಲ. ಇದರಿಂದ ನಮ್ಮ ಪರಿಸ್ಥಿತಿಯನ್ನು ಲೆಕ್ಕ ಹಾಕಬಹುದು. ಸಾಧಾರಣ ಒಬ್ಬ ಮನುಷ್ಯನಿಗೆ 23 ಕ್ಯಾಲೋರಿ ಅಹಾರ ಧಾನ್ಯ ಕೊಟ್ಟರೆ ಇನ್ನು 5 ಕೋಟಿ ಜನರಿಗೆ ಏನೂ ಸಿಗುತ್ತಾ ಇಲ್ಲ. ಇದನ್ನು ನಾವು ಪೂರ್ತಿಯಾಗಿ ವಿಚಾರ ಮಾಡಬೇಕು. ನಮ್ಮ ಗುರಿ ಏನೆಂಬುದನ್ನು ತಿಳಿದುಕೊಂಡರೆ ದೇಶದ ಬರಗಾಲವನ್ನು ತಡೆಯಬಹುದು. ನಮ್ಮ ಮೈಸೂರು ರಾಜ್ಯದ ಪರಿಸ್ಥಿತಿಯನ್ನು ನೋಡಿದರೆ ಅದು ಇನ್ನಷ್ಟು ಬಿಕ್ಕಟ್ಟಿನದಾಗಿದೆ. ನಾವು ಕೆಲವು ನೀರಾವರಿ ಯೋಜನೆಗಳನ್ನು ಮಾಡಿದ್ದೇವೆ. ಆದರೂ ಕೂಡ ಅದರ ಪ್ರತಿಫಲ ಸಾಕಷ್ಟು ಬರುತ್ತಾ ಇಲ್ಲ. ದುರ್ದೈವದಿಂದ ನಾವು ಹೊರಗಿನಿಂದ ಗೊಬ್ಬರ ಮುಂತಾದವುಗಳನ್ನು ತರಿಸಿ ಹಂಚುವಾಗಲೂ ಅಲ್ಲಿಯ ಅನೇಕ ತರದ ದುರ್ವ್ಯವಹಾರಗಳು ನಡೆಯುತ್ತಿವೆ. ಸರಿಯಾದ ರೀತಿಯಲ್ಲಿ ರೈತರಿಗೆ ಗೊಬ್ಬರವು

ಸಿಗುತ್ತಾ ಇಲ್ಲ. ಅದೇ ರೀತಿ ಸಾಲ ಹಂಚಿಕೆಯಲ್ಲೂ ಬೇಕಾದಷ್ಟು ಅವ್ಯವಹಾರಗಳು ನಡೆಯುತ್ತಿವೆ. ಈ ತರದ ಪರಿಸ್ಥಿತಿ ದೇಶದಲ್ಲಿ ಉಂಟಾಗಬೇಕಾದರೆ ಇಂಥ ಅಪರಾಧಿಗಳನ್ನು ದಂಡಿಸುವವರೇ ಇಲ್ಲವೇ ಎನ್ನುವ ಮಾತನ್ನು ಕೇಳಬೇಕಾಗಿದೆ ಇಂದು ಕೋ - ಆಪ್‌ರೇಟ್ಟಿವ್ ಸೊಸೈಟಿ, ಮಾರ್ಕೇಟಿಂಗ್ ಸೊಸೈಟಿಗಳಲ್ಲಿ ಬೇಕಾದಷ್ಟು ಅವ್ಯವಹಾರಗಳು ನಡೆಯುತ್ತಾ ಇವೆ. ರೈತನು ಕಟ್ಟಿದಂತಹ ಇಂಥ ಸಂಸ್ಥೆಗಳಲ್ಲಿ ಕೆಲವು ಹೆಗ್ಗಣಗಳು ಸೇರಿಕೊಂಡು ಇಂಥ ಧಾರುಣವಾದ ಪರಿಸ್ಥಿತಿಯನ್ನು ಉಂಟುಮಾಡಿವೆ. ಪ್ರತ್ಯೇಕವಾಗಿ ಉದಾಹರಣೆಗೆ ಹೇಳಬೇಕಾದರೆ ಗೋಕಾಕ ತಾಲೂಕಾ ಮಾರ್ಕೇಟಿಂಗ್ ಸೊಸೈಟಿ ಮೇಲೆ ಅನೇಕ ರೀತಿಯ ಆರೋಪಗಳು ಬಂದಿವೆ. ಆದರೂ ಅದನ್ನು ಯಾವುದೇ ರೀತಿಯಲ್ಲಿ ಸರಿಪಡಿಸಲಿಲ್ಲ. ಅಲ್ಲಿಯ ಪರಿಸ್ಥಿತಿ ಕೆಟ್ಟು ಹೋಗಿದೆ. ಅದೇ ರೀತಿಯಲ್ಲಿ ಇನ್ನೂ ಅನೇಕ ಕಡೆ ಇದೇ ರೀತಿಯ ಅವ್ಯವಹಾರಗಳು ನಡೆದು ನಮ್ಮ ಆಹಾರ ಧಾನ್ಯವನ್ನು ಬೆಳೆಯುವುದಕ್ಕೆ ಬಹಳ ತೊಂದರೆಯಾಗಿದೆ ಎಂಬುದನ್ನು ನಾವೆಲ್ಲರೂ ತಿಳಿದುಕೊಳ್ಳಬೇಕು. ಇನ್ನು ಬೇರೆ ಯಾವ ರೀತಿಯ ಕಷ್ಟ-ನಷ್ಟಗಳನ್ನು ನಾವು ಎದುರಿಸಬೇಕಾದ ಪರಿಸ್ಥಿತಿ ಬಂದರೂ ಕೂಡ ಈಗ ಮಾನ್ಯ ಶಿವಪ್ಪನವರು ಹೇಳಿದಂತೆ ಯಾರು ಕೆಲಸಗಳನ್ನು ಮಾಡಬೇಕೆಂಬುದನ್ನು ಸ್ಪಷ್ಟಪಡಿಸಬೇಕು. ಕೆಲವು ಕೆಲಸಗಳನ್ನು ಪಿ.ಡಬ್ಲ್ಯು.ಡಿ. ಯವರು ತೆಗೆದುಕೊಳ್ಳುತ್ತಿದ್ದಾರೆ ಆದರೆ ಪಿ.ಡಬ್ಲ್ಯು.ಡಿ. ಯನ್ನು ಅವಲಂಬಿಸಿ ಕೂತರೆ ಅನೇಕ ಕಡೆ ಇವರು ಕೂಡಾ ಸರಿಯಾದ ಕೆಲಸ ಮಾಡುತ್ತಾ ಇಲ್ಲ. ಇವರಲ್ಲಿ ಸ್ಟಾಪ್ ಕೂಡ ಇಡೀ ಕೆಲಸವನ್ನು ತೆಗೆದುಕೊಳ್ಳುವಷ್ಟು ಇಲ್ಲ. ಇನ್ನು ತಾಲೂಕುಗಳಲ್ಲಿ 5-6 ಕೆಲಸಗಳನ್ನು ತೆಗೆದುಕೊಳ್ಳಬಹುದು. ಎರಡನೆಯದು ಟಿ.ಡಿ.ಬಿ. ವಿಚಾರ. ಇಂದು ಅನೇಕ ಬೋರ್ಡುಗಳು ಸರಿಯಾದ ವ್ಯವಸ್ಥೆಯಲ್ಲಿ ಇಲ್ಲ. ಅವು ಕೆಲಸ ತೆಗೆದುಕೊಳ್ಳುವ ಪರಿಸ್ಥಿತಿಯಲ್ಲಿಲ್ಲ. ಅಲ್ಲಿ ಎಕ್ಸಿಕ್ಯೂಟಿವ್ ಆಫೀಸರ್ (ಬಿ.ಡಿ.ಓ) ಇರುವವರು ಅಸಮರ್ಥರು, ಅನುಭವವಿಲ್ಲದವರು ಮತ್ತು ಅವ್ಯವಹಾರಿಗಳಾಗಿರುತ್ತಾರೆ. ಅವರು ಸ್ಪಷ್ಟವಾಗಿ ಹೇಳುತ್ತಾರೆ 'ನಾವು ಈ ಕೆಲಸ ತೆಗೆದುಕೊಳ್ಳುವುದಿಲ್ಲ ನೀವು ಬೇಕಾದರೆ ಮಾಡಿಕೊಳ್ಳಿ ' ಎಂದು. ಅನೇಕ ತಾಲ್ಲೂಕುಗಳಲ್ಲಿ ಈ ಪರಿಸ್ಥಿತಿ ಇದೆ ಇನ್ನು ಕೆಲಸ ಮಾಡುವವರು ಯಾರು? ಜನರ ಹೊಟ್ಟೆಗೆ ಹಾಕುವವರು ಯಾರು? ಅಂಥ ಇನ್‌ಎಫಿಸಿಯಂಟ್ ಜನರು ಅಲ್ಲಿದ್ದರೆ ಅಂತವರನ್ನು ಕಿತ್ತೊಗೆದು ಬೇರೆ ಕೆಲಸಕ್ಕೆ ಹಾಕಬೇಕು ಮತ್ತು ಅತ್ಯಂತ ಸಮರ್ಥರಾದ ಬೇರೆ ಒಳ್ಳೆಯ ಅಧಿಕಾರಿಗಳನ್ನು ಬರಗಾಲ ಪೀಡಿತ ಭಾಗದಲ್ಲಿ ನೇಮಿಸುವದು ಅತ್ಯಾವಶ್ಯಕವೆಂದು ಹೇಳಬೇಕಾಗಿದೆ. ಈ ತರದ ಪರಿಸ್ಥಿತಿಯನ್ನು ಅನೇಕ ಸಲ ಮಾನ್ಯ ಮಂತ್ರಿಯವರ ಗಮನಕ್ಕೆ ತಂದಿದ್ದೇನೆ. ಗೋಕಾಕದ ಪರಿಸ್ಥಿತಿ ಬಹಳ ದಾರುಣವಾದ ಪರಿಸ್ಥಿತಿಯಾಗಿದೆ. ಅಲ್ಲಿ ಅನೇಕ ಕೆಲಸಗಳನ್ನು ಈಗಾಗಲೇ ತಗೆದುಕೊಂಡರೂ ಇನ್ನು ಹೆಚ್ಚಿನ ಕೆಲಸವಾಗಬೇಕಾಗದೆ.

ಟಿ.ಡಿ.ಬಿ. ಅಷ್ಟು ಸಮರ್ಥವಾದ ಬಾಡಿ ಆದರೂ ಕೂಡ ಅದರ ಕಾರ್ಯಕಲಾಪಗಳನ್ನು ನಿರ್ವಹಿಸುವ ಸಮರ್ಥರು ಇಲ್ಲದೇ ಹೋದರೆ ಬಹಳ ಕಷ್ಟವಾಗುತ್ತದೆ. ಇವತ್ತಿನ ದಿವಸ ಟಿ.ಡಿ.ಬಿ. ಮತ್ತು ಪಿ.ಡಬ್ಲ್ಯು.ಡಿ. ಬಿಟ್ಟರೆ ಕೆಲಸವನ್ನು ನೀಗಿಸುವಂತಹ ಸಂಸ್ಥೆ ಇನ್ನೊಂದಿಲ್ಲ. ಈ ರೀತಿಯಾಗಿರುವ ರಿಂದ ನಾವು ಬಹಳ ಕಷ್ಟದ ಪರಿಸ್ಥಿತಿಯನ್ನು ದೇಶದಲ್ಲಿ ಎದುರಿಸಬೇಕಾಗಿದೆ. ಮುಖ್ಯವಾಗಿ ಕಾಮಗಾರಿ ವಿಷಯವಾಗಿ ಎಲ್ಲರೂ ಒತ್ತಾಯಪೂರ್ವಕವಾಗಿ ಹೇಳುತ್ತಿದ್ದಾರೆ. ಘಟಪ್ರಭಾ ಬಲದಂಡೆ ಛಾನಲ್ ಕೆಲಸವನ್ನು ತಗೆದುಕೊಂಡರೆ ಲಕ್ಷಾಂತರ ಜನಕ್ಕೆ ಕೆಲಸವನ್ನು ಒದಗಿಸಬಹುದು. ಈ ಮಾತನ್ನು ಅನೇಕ ವರ್ಷಗಳಿಂದ ಹೇಳುತ್ತಿದ್ದೇನೆ. ಹಿಡಕಲ್ ಡ್ಯಾಂ ಒಂದು ಮಟ್ಟಕ್ಕೆ ಬರುತ್ತಿದೆ ಡ್ಯಾಂ ನೆಲವನ್ನು ಬಿಟ್ಟು ಮೇಲಕ್ಕೆ ಏರುತ್ತಿದೆ. ಆ ಡ್ಯಾಂ 1971 ನೆಯ ಇಸ್ವಿಯೊಳಗೆ ಪೂರ್ತಿಯಾಗಬಹುದು. ಅಷ್ಟರೊಳಗೆ ಬಲದಂಡೆ ಗುಡ್ಡದಲ್ಲಿ ಟನೆಲ್ಲ ಹೊಡೆಯಬಹುದು. ಆದು ಒಂದೆರಡು ವರ್ಷದಲ್ಲಿ ಮುಗಿಯುವಂತಹ ಕೆಲಸವಲ್ಲ.

**Sri K.H. Patil** - The Hon'ble Chief Minister was so much enthusiastic to say that it is a very important matter. Though so many Ministers are there, unfortunately, none of the Cabinet Ministers is taking interest to take notes of what we say. Please get them physically present here.

ಆ ಕೆಲಸವನ್ನು ಈಗಿನಿಂದಲೇ ಪ್ರಾರಂಭ ಮಾಡಿದರೆ ಕೆಲವು ಭಾಗಕ್ಕಾದರೂ ನೀರು ಕೊಡಲು ಸಹಾಯಕವಾಗುತ್ತದೆ. ಇದರಿಂದ ಸ್ವಲ್ಪಮಟ್ಟಿಗೆ ಬರಗಾಲದ ಪರಿಸ್ಥಿತಿಯನ್ನು ನಿವಾರಣೆ ಮಾಡುವುದಕ್ಕೆ ಸಾಧ್ಯವಾಗುತ್ತದೆ. ಕಳೆದ ವರ್ಷ ಬರಗಾಲದ ಪರಿಸ್ಥಿತಿಯನ್ನು ಎದುರಿಸಬೇಕಾದಾಗ ,ಈಗಿನ ಕಾಂಗ್ರೇಸ್ ಅಧ್ಯಕ್ಷರು ಮತ್ತು ಹಿಂದಿನ ಮುಖ್ಯಮಂತ್ರಿಗಳು ಅದೇ ಶ್ರೀಮಾನ್ ನಿಜಲಿಂಗಪ್ಪ ನವರ ಕಡೆಗೆ ಮತ್ತು ಆಗಿನ ಪಿ.ಡಬ್ಲ್ಯು.ಡಿ. ಮತ್ತು ಈಗಿನ ಮುಖ್ಯಮಂತ್ರಿಗಳಾಗಿರುವ ಶ್ರೀಮಾನ್ ವೀರೇಂದ್ರ ಪಾಟೀಲರಲ್ಲಿ ಗೋಕಾಕ್ ಮಿಲ್ಲಿಗೆ ಕೊಡುವ ನೀರನ್ನು ನಿಲ್ಲಿಸಿ, ಅವರಿಗೆ ಶರಾವತಿ ಪವರ್ ಕೊಟ್ಟು, ನಮ್ಮ ಭಾಗದ ಜನಗಳಿಗೆ ಆ ನೀರನ್ನು ನೀರಾವರಿಗೆ ಕೊಟ್ಟರೆ ಉಪಕಾರವಾಗುತ್ತದೆ ಎಂದು ಕೇಳಿಕೊಂಡಿದ್ದಕ್ಕೆ ಆ ಪ್ರಕಾರ ಕೊಟ್ಟರು. ಅದರಂತೆ ಗೋಧಿ ಕಡಲೆ ಮತ್ತು ಇತರ ಆಹಾರಧಾನ್ಯಗಳನ್ನು ಬೆಳೆದವು. ಈ ವರ್ಷವೂ ಆ ತರಹ ಪರಿಸ್ಥಿತಿ ಬರಬಹುದು. ಅದರಿಂದಾಗಿ ಮುಂದೆಯೂ ಗೋಕಾಕನಲ್ಲಿರುವ ಮಿಲ್ಲಿಗೆ ಕುಡಿಲಯಲಿಕ್ಕೆ ಮಾತ್ರ ನೀರು ಮತ್ತು ಶರಾವತಿಯಿಂದ ಪವರ್ ಕೊಟ್ಟರೆ, ಅದರಿಂದ ಅನುಕೂಲವಾಗುತ್ತದೆ. ಕುಡಿಯಲ್ಲಿಕ್ಕೆ ನೀರು ಎಷ್ಟು ಅವಶ್ಯಕವೋ ಅಷ್ಟನ್ನು ಕೊಟ್ಟು

ಉಳಿದ ಪ್ರತಿಯೊಂದು ಹನಿಯನ್ನು ಇರ್ರಿಗೇಷನ್‌ಗೆ ಕೊಡುವುದು ಅತ್ಯಂತ ಅವಶ್ಯ ಎಂದು ಹೇಳುತ್ತೇನೆ.

ಇನ್ನು ಸ್ಕೇರ್ಸಿಟಿ ಏರಿಯಾದಲ್ಲಿ ದಿನಗಳು ಕೆಲವು ಮಟ್ಟಿಗೆ ತುಂಬಿ ಹರಿಯುತ್ತಾ ಇದೆ. ಅಂತಹ ಕಡೆ ಎಲೆಕ್ಟ್ರಿಕ್ ಪಂಪ್‌ಸೆಟ್ಸ್ ಕೊಡಬೇಕು. ಯಾವ ಏರಿಯಾದಲ್ಲಿ ನೀರು ಇದೆ. ಅಂತಹ ಭಾಗಕ್ಕೆ ಪ್ರಿಯಾರಿಟಿ ಕೊಡಬೇಕು. ಯಾವ ಹಳ್ಳಿಗಳಲ್ಲಿ ನೀರು ಇರಲಿ, ಹೊಳೆಗಳಲ್ಲಿ ನೀರು ಇರಲಿ ಅಂತಹ ಅತಿ ಮೊದಲು ಪ್ರಿಯಾರಿಟಿ ಕೊಡಬೇಕು. ಎಲೆಕ್ಟ್ರಿಸಿಟಿ ಬೋರ್ಡ್‌ಗೆ ಈ ತರಹ ಮಾಡುವಂತಹ ಅವರಿಗೆ ಒತ್ತಾಯಪಡಿಸಬೇಕು ಎನ್ನುವ ಮಾತನ್ನು ಹೇಳಬಯಸುತ್ತೇನೆ.

ಅದಲ್ಲದೇ ಸರ್ಕಾರದವರು ಬಾವಿಗಳನ್ನು ತೆಗೆಯುವುದಕ್ಕೆ ಸಾಲವನ್ನು ಕೊಡಲಿಕ್ಕೆ ಲ್ಯಾಂಡ್ ಮಾರ್ಟ್‌ಗೇಜಿನವರಿಗೆ ಒಪ್ಪಿಸಿದ್ದಾರೆ. ಅಂತಹ ಕೆಲಸ ಸಾಕಷ್ಟು ಉತ್ತಮ ರೀತಿಯಿಂದ ನಡೆಯುತ್ತಿದೆ. ಅವನ್ನು ಇನ್ನೂ ಹೆಚ್ಚಾಗಿ ಬೆಳೆಸಲಿಕ್ಕೆ ಹೋಗಬೇಕು. ಮಾನ್ಯ ರಾಚಯ್ಯನವರು ಕಂದಾಯ ಮಂತ್ರಿಗಳಾಗಿದ್ದಾಗ್ಗೆ ಸಾಮೂಹಿಕ ಬಾವಿಗಳನ್ನು ಸರ್ಕಾರದ ಖರ್ಚಿನಿಂದಲೇ ತೆಗೆಸಿ ಜನಗಳಿಗೆ ನೀರನ್ನು ಒದಗಿಸುವ ಯೋಜನೆ ಮಾಡಬೇಕು ಎಂದು ಈ ಸಭೆಯಲ್ಲಿ ಜಾಹೀರುಪಡಿಸಿದ್ದರು. ಆ ಬಗ್ಗೆ ಇನ್ನೂ ಏನೂ ಕಾರ್ಯಕ್ರಮ ನಡೆದಿಲ್ಲ. ಅಂತಹ ಸಿಸ್ಟಂನ್ನು ಜಾರಿಗೆ ತಂದು ಸಾಮೂಹಿಕ ಬಾವಿಗಳನ್ನು ತೆಗೆಸಿ ಬಡಬಗ್ಗರಿಗೆ ಸಣ್ಣ ಸಣ್ಣ ಜಮೀನುದಾರರಿಗೆ ಈ ತರಹ ನೀರಾವರಿ ಸೌಲಭ್ಯವನ್ನು ಒದಗಿಸಬೇಕು.

ಇನ್ನು ಬಂಡಿಂಗ್ ಅಥವಾ ಒಡ್ಡು ಹಾಕುವ ಯೋಜನೆ. ಇವನ್ನು ದೊಡ್ಡ ಪ್ರಮಾಣದಲ್ಲಿ ಮಾಡಿದರೆ ಸಾಕಷ್ಟು ಜನರಿಗೆ ಉದ್ಯೋಗವನ್ನು ಕಲ್ಪಿಸಿಕೊಡಬಹುದು. ಬಂಡಿಂಗ್ ಹಾಕುವುದರಿಂದ ಭೂಮಿಯಲ್ಲಿ ಬಿದ್ದಂಥ ಮಳೆ ನೀರು ಹರಿದು ಹೋಗುವುದಿಲ್ಲ. ಇದರಿಂದ ಉತ್ತಮವಾದ ಮಣ್ಣು ಜಮೀನಿನಲ್ಲಿ ಹರಿದು ಹೋಗದಂತಾಗುತ್ತದೆ ಈ ಒಂದು ಬಂಡಿಂಗ್ ಕೆಲಸವನ್ನು ಸಾಕಷ್ಟು ಪ್ರಮಾಣದಲ್ಲಿ ಮಾಡುವುದಕ್ಕೆ ಸರ್ಕಾರದವರು ವ್ಯವಸ್ಥೆ ಮಾಡಬೇಕು.

ಇನ್ನು ಕೆರೆಗಳ ಬಗ್ಗೆ ಹೇಳುವುದಾದರೆ 2 ಪರ್ಸೆಂಟೂ ಕೂಡ ಸರಿಯಾದ ರಿಪೇರಿ ಇಲ್ಲ ಒಂದು ಲಕ್ಷಕ್ಕಿಂತ ಹೆಚ್ಚು ಬೇಕಾದರೆ ಚೀಫ್ ಇಂಜನಿಯರ್ ಹತ್ತಿರ ಹೋಗಬೇಕು, ಒಂದು ಕೆರೆ ಮಂಜೂರು ಮಾಡಿದರೆ ಕೆಲಸ ಪೂರೈಸಲು 3-4 ವರ್ಷ ತೆಗೆದುಕೊಳ್ಳುತ್ತಾರೆ. ಸರ್ಕೋಲೇಷನ್ ಟ್ಯಾಂಕ್ಸ್ ತೆಗೆದುಕೊಳ್ಳಬೇಕಾದರೆ ಸರ್ಕಾರದ ಧೋರಣೆ ಹಾಗಿಲ್ಲ ಎಂದು ಉತ್ತರ ಕೊಡುತ್ತಾರೆ. ಅನೇಕ ಕೊಕ್ಕೆಗಳನ್ನು ಹಾಕಿ ಯಾವ ಕೆರೆಯೂ ಆಗದಂತೆ ಮಾಡುವುದು ಇಂಜನೀಯರ್ ಸ್ವಾಭಾವಿಕವಾಗಿದೆ.

ಸರ್ಕೋಲೇಷನ್ ಟ್ಯಾಂಕ್ ಆಗಬೇಕು. ಏಕೆಂದರೆ ಅದರ ಕೆಳಗಿರುವ ಬಾವಿಗಳಿಗೆ ಸಾಕಷ್ಟು ನೀರು ಒದಗಿ, ಅದರಿಂದ ಅತ್ಯಂತ ಉಪಯುಕ್ತವಾದ ಕೆಲಸವಾಗುತ್ತದೆ ಮತ್ತು ಬಹಳ ಜನಕ್ಕೆ ಕೆಲಸ ಒದಗಿಸಿದಂತಾಗುತ್ತದೆ. ಸರ್ಕೋಲೇಷನ್ -ಕಂ- ಇರ್ರಿಗೇಷನ್ ಟ್ಯಾಂಕ್ಸ್‌ನಂತಹ ಉಪಯುಕ್ತವಾದ ಕ್ರಮವನ್ನು ಕೈಗೊಳ್ಳಬೇಕು. ಸರ್ಕಾರದವರು ಹಳ್ಳಿಗಳಿಗಾಗಲಿ, ಹೊಳೆಗಳಿಗಾಗಲಿ ಬ್ರಿಡ್ಜನ್ನು ಕಟ್ಟಿಸುತ್ತಾರೆ. ಬ್ರಿಡ್ಜ್ ಕಂ ಪಿಕಪ್‌ನಿಂದ ಬೇಸಿಗೆಯಲ್ಲಿ ನೀರು ಹಿಡಿದು, ಅದನ್ನು ಡೈವರ್ಸ್ ಮಾಡಿ ನೀರಾವರಿಗೆ ಉಪಯೋಗವಾಗುವಂತೆ ಒಂದು ಯೋಜನೆ ಮಾಡಬೇಕು. ದುಡ್ಡು ಖರ್ಚು ಮಾಡಿ ಬ್ರಿಡ್ಜ್ ಕಟ್ಟಿಸುತ್ತಾರೆ. ಇದರ ಜೊತೆಗೆ ನೀರಾವರಿ ಅಭಿವೃದ್ಧಿಯನ್ನು ಕೈಗೊಳ್ಳಬೇಕು ಎಂದು ಹೇಳುತ್ತೇನೆ.

ಇನ್ನು ಬೋರಿಂಗ್ ಮೆಷಿನ್ ವಿಷಯ. ಇದರ ಬಗ್ಗೆ ಅನೇಕ ಸಲ ಒತ್ತಾಯ ಮಾಡಿ ಹೇಳುತ್ತಿದ್ದೇನೆ. ಬೋರಿಂಗ್ ಮಿಷನ್ ನಮ್ಮ ತಾಲ್ಲೂಕಿನಲ್ಲಿ ಸಾಕಷ್ಟು ಇಲ್ಲ. ಸರ್ಕಾರದವರು ಸಾಕಷ್ಟು ಬೋರಿಂಗ್ ಮಿಷನ್ ತರಿಸಿ ಎಲ್ಲಾ ಕಡೆಯೂ ಒದಗಿಸಿ ಬಾವಿಗಳನ್ನು ಆಳವಾಗಿ ಮಾಡಬೇಕು. ಬ್ಲಾಸ್ಟಿಂಗ್ ಮಿಷನ್‌ಗಳನ್ನು ತರಿಸಿದ್ದಾರೆ. ಇದು ರಾಕ್ ಇದ್ದಲ್ಲಿ ಬಾವಿಗಳನ್ನು ಬಹಳ ಆಳವಾಗಿ ಮಾಡಲು ಉಪಯೋಗಕ್ಕೆ ಬರುತ್ತವೆ. ಇದರಿಂದ ಹೆಚ್ಚು ಪ್ರಯೋಜನವಾಗುತ್ತದೆ. ಇವುಗಳನ್ನು ಸರ್ಕಾರದವರು ರೈತನಿಗೆ ಒದಗಿಸಿ ಹೆಚ್ಚು ಉಪಯೋಗವಾಗುವ ಹಾಗೆ ಕೆಲಸ ಮಾಡಬೇಕು.

ಅನೇಕ ಕಡೆ ರೈತನಿಗೆ ಸಾಲ ಸರಿಯಾಗಿ ಕೊಡುತ್ತಾ ಇಲ್ಲ. ಅನೇಕ ತೊಂದರೆಗಳು ಬರುತ್ತವೆ. ವತನದಾರ ಜಮೀನುಗಳ ಮೇಲೆ ಸಾಲ ಕೊಡುವುದಕ್ಕೆ ತೊಂದರೆಯಾಗಿದೆ. ಬರಗಾಲ ಪ್ರದೇಶದಲ್ಲಿ ಯಾವ ರೀತಿ ರೈತಾಪಿ ಜಮೀನಿಗೆ ಭೂ ಸುಧಾರಣೆ ಅಭಿವೃದ್ಧಿಗಾಗಿ ಮತ್ತು ಬಾವಿಗಳನ್ನು ತೆಗೆಯುವುದಕ್ಕೆ ಸರ್ಕಾರದವರು ಸಾಲ ಕೊಡುತ್ತಾರೋ, ಅದರಂತೆ, ಈ ಜಮೀನಿಗೂ ಸಾಲ ಕೊಡುವಂತೆ ಮಾಡಿಕೊಳ್ಳಬೇಕು. ಇದಕ್ಕೆ ಯಾವ ತರಹ ತೊಂದರೆಯೂ ಇರಬಾರದು.

ಇನ್ನು ಅಭಾವದ ಪ್ರದೇಶದಲ್ಲಿ ಗಂಜಿ ಕೇಂದ್ರಗಳನ್ನು ತೆಗೆಯಬೇಕು ಎಂದು ಹೇಳಿದ್ದಾರೆ. ಹಿಂದೆ ಡೋಲ್ಸ್ ಕೊಡುವ ಪದ್ಧತಿ ಇತ್ತು. ಎಲ್ಲಿ ಅನಾಥರ, ನಿರ್ಗತಿಕರು ಇದ್ದಾರೆ ಅಲ್ಲಿ ಗಂಜಿ ಕೇಂದ್ರಗಳನ್ನು ತೆಗೆಯಬೇಕು. ಈ ತುಟ್ಟೀ ಕಾಲದಲ್ಲಿ ಯಾರೂ ಊಟ ಹಾಕುವುದಿಲ್ಲ. ದಾನಧರ್ಮ ಕೊಡುವುದಿಲ್ಲ. ಇದ್ದಲ್ಲೇ ಬಿದ್ದು ಸಾಯುವುದು ನಿಶ್ಚಯ. ಒಬ್ಬರು ಉಪವಾಸದಿಂದ ಸತ್ತರೆ ಇಡೀ ದೇಶದಲ್ಲಿ ಕೋಲಾಹಲ ಏಳುತ್ತದೆ. ಅದಕ್ಕಾಗಿ ಸರ್ಕಾರ ಈಗಿನಿಂದಲೇ ಅಂತಹ ಜನರ ಯೋಗಕ್ಷೇಮ ತೆಗೆದುಕೊಳ್ಳಬೇಕು ಎಂದು ಹೇಳುತ್ತೇನೆ.

ಇನ್ನೊಂದು ಮಾತನ್ನು ಹೇಳಬೇಕಾಗಿದೆ. ಮುಂಬಯಿ ಕರ್ನಾಟಕದಲ್ಲಿ ಬರಗಾಲದಲ್ಲಿ ಕಾಮುಗಾರಿಗಳನ್ನು ತೆಗೆದುಕೊಳ್ಳುವಾಗ, ಸರ್ಕಾರದವರು ಕೂಲಿಗಾರರಿಗೆ ಕೊಡತಕ್ಕ ಸಂಬಳದಲ್ಲಿ 1/2 ಅಂಶವನ್ನು ಕಟ್ ಮಾಡಿಕೊಡುವ ದುರ್ವ್ಯಾಪಾರದ ಪದ್ಧತಿಯನ್ನು ಮುಂದುವರೆಸಿಕೊಂಡು ಬರುತ್ತಿದ್ದಾರೆ. ಇದನ್ನು ಅನೇಕ ಸಲ ಕಂದಾಯ ಮಂತ್ರಿ ಲಕ್ಷ್ಯಕ್ಕೆ ತಂದಿದ್ದೇನೆ. ಈ ಬಗ್ಗೆ ಪತ್ರವನ್ನು ಬರೆದಿದ್ದೇನೆ. ಇನ್ನೂ ಯಾವ ತರಹ ಕ್ರಮಗಳನ್ನು ತೆಗೆದುಕೊಂಡಿಲ್ಲ. ಇದರ ಬಗ್ಗೆ ಯೋಗ್ಯ ಕ್ರಮ ತೆಗೆದುಕೊಳ್ಳಬೇಕೆಂದು ನಾನು ಕೇಳಬಯಸುತ್ತೇನೆ. ಕೆಲಸ ಮಾಡಿದಾಗ ಒಂದು ಕ್ಯೂಬಿಕ್ ಮೀಟರಿಗೆ 1 ರೂಪಾಯಿ ,31 ಪೈಸೆಯಷ್ಟು ಕೊಡಬೇಕು ಎಂದು ಹುಕುಂ ಹೊರಟಿಸಿದ್ದಾರೆ. ಇಂಜನೀಯರ್ಸ್ , ಆಫೀಸರ್ಸ್ ಲೆಕ್ಕ ಮಾಡುವಾಗ ಮುರುಮು ಇದ್ದಲ್ಲಿ , ಹಾರ್ಡ ರಾಕ್ ಇದ್ದಲ್ಲಿ ಕಟ್ ಮಾಡುತ್ತಾರೆ. ಸರ್ಕಾರ ಹಾಗೆ ಹುಕುಂ ಮಾಡಿಲ್ಲ. ಇದನ್ನು ಸರಿಯಾಗಿ ಕುಲಾಷೆ ಮಾಡಬೇಕು ಎಂದರೆ ಸರ್ಕಾರದವರು ಸೆಕ್ರೆಟರಿಯನ್ನು ಕೇಳುತ್ತಾರೆ. ಸೆಕ್ರೆಟರಿ ಡೆಪ್ಯುಟಿ ಕಮೀಷನ್ ರೀಪೋರ್ಟನ್ನು ಕೇಳುತ್ತಾರೆ. ಆ ರೀಪೋರ್ಟ ಬರುವುದರೊಳಗೆ ಬಡವನ ಜೀವ ಹೋಗುವ ಪರಿಸ್ಥಿತಿ ಬರುತ್ತದೆ. ಈಗಿನ ಕಾಲದಲ್ಲಿ ಸಂಬಳದಲ್ಲಿ ಕಟ್ ಮಾಡುವುದನ್ನು ಬಿಟ್ಟು ಇನ್ನು ಹೆಚ್ಚು ಕೊಡಬೇಕು. ಮೊದಲೇ ತುಟ್ಟಿ. ಇದುದ್ದನ್ನು ಕಳೆದುಕೊಂಡರೆ ಮಕ್ಕಳಿಗೆ ಒಂದು ತುತ್ತು ಕೂಳು ಸಿಗುವುದಿಲ್ಲ. ಈ ಪರಿಸ್ಥಿತಿಯಲ್ಲಿರುವಾಗ ಎರಡನೇಯ ಉತ್ಪನ್ನದ ಭಾಗಗಳು ಕಟ್ ಆಗಿರುವಾಗ ಈ ತರಹ ಪೂರ್ತಿ ಪಗಾರು ಕೊಡುವುದಲ್ಲದೇ ಹೆಚ್ಚಿಗೆ ಸಂಬಳ ಕೊಡುವುದಕ್ಕೆ ಏರ್ಪಾಡು ಮಾಡಬೇಕು. ಹಳ್ಳದಲ್ಲಿ ಬಿದ್ದ ಮೇಲೆ ಕಲ್ಲು ಹೇರುವ ಪರಿಸ್ಥಿತಿ ಆಗಬಾರದು ಎಂದು ನಾನು ಹೇಳಬಯಸುತ್ತೇನೆ. ಈಗ ಇದರ ಬಗ್ಗೆ ತಾವು ಎಲ್ಲಾ ರೀತಿಯ ಕ್ರಮವನ್ನು ಕೈಕೊಳ್ಳಬೇಕು ಬಡವರು ಆದಷ್ಟು ಬರಗಾಲದಿಂದ ಪಾರಾಗಲಿಕ್ಕೆ ಶಕ್ತಿ ಬರುವಂತಹ ಒಂದು ವ್ಯವಸ್ಥೆಯನ್ನು ಸರ್ಕಾರದವರು ಮಾಡಬೇಕು.

# ಕೈಗಾರಿಕೆ ಮತ್ತು ಪಶು ಸಂಗೋಪನೆ :

8ನೇ ಏಪ್ರಿಲ್ 1968

ಮಾನ್ಯ ಅಧ್ಯಕ್ಷರೇ ಸಭೆಯ ಮುಂದಿಟ್ಟಿರುವ ಬೇಡಿಕೆಗಳನು ಅನುಮೋದಿಸುತ್ತ ಕೆಲವು ಮಾತುಗಳನ್ನು ಹೇಳುತ್ತೇನೆ. ಮೊದಲನೆಯದಾಗಿ ಲೇಬರ್ ಎಂಪ್ಲಾಯ್‌ಮೆಂಟ ಮತ್ತು ಎನಿಮಲ್ ಹಜ್ಬಂಡರಿ ಇದೆಲ್ಲ ಒಂದೇ ಕಡೆ ಕೂಡಿಸುವುದು ಏಕೋ ಸ್ವಲ್ಪ ವಿಚಿತ್ರವೆನಿಸುತ್ತದೆ ಏಕೆಂದರೆ ಕೂಲಿಗಾರರ ಕಡೆಗೆ ಒಂದು ಮಾನವೀಯ ದೃಷ್ಟಿಯಿಂದ ನೋಡಬೇಕಾದುದು ಅವಶ್ಯಕ. ಅನೇಕ ಕಡೆಗಳಲ್ಲಿ ಒಂದೊಂದು ಕೈಗಾರಿಕೆಗಳಲ್ಲಿ ಬಹಳ ಯುನಿಯನ್‌ಗಳು ಉಂಟಾಗುತ್ತವೆ. ಈ ಯುನಿಯನ್‌ಗಳೊಳಗೆ ಒಮ್ಮತವಿಲ್ಲದಿದ್ದರೆ ಕೂಲಿಗಾರರಿಗೆ ಬಹಳ ಹಾನಿಯಾಗುತ್ತದೆ. ಅನೇಕ ಸಲ ಮಾಲೀಕರು ಮತ್ತು ಯುನಿಯನ್ನಿನವರು ಕೂಡಿಕೊಂಡು ಕೂಲಿಗಾರರಿಗೆ ಹಾನಿ ಮಾಡುತ್ತಿದ್ದಾರೆ. ಆದ್ದರಿಂದ ಅವರಿಗೆ ಹಾನಿಯಾಗದಂತೆ ಅವರ ಸಂಖ್ಯೆ ಯಾವುದರಲ್ಲಿ ಜಾಸ್ತಿಯಾಗಿ ಮೆಂಬರಆಗಿರುತ್ತಾರೆ ಅದಕ್ಕೆ ಪ್ರಾತಿನಿಧ್ಯ ಕೊಟ್ಟು ಅವರ ಮಾತು ನಡೆಯುವ ಹಾಗೆ ಮಾಡಿದರೆ ಒಳ್ಳೆಯದೆಂದು ಹೇಳುತ್ತೇನೆ. ಇವತ್ತು ಕೂಲಿಗಾರರಿಗೆ ಸರಿಯಾದ ವೇತನ ಆರೋಗ್ಯ ಸೌಲತ್ತು ಮೊದಲಾದವುಗಳನ್ನು ಕೊಡುವುದು ಸರ್ಕಾರದ ಕರ್ತವ್ಯ. ಇವತ್ತು ಎಂಪ್ಲಾಯಿಸ್ ಸ್ಟೇಟ್ ಇನ್ಸುರೆನ್ಸ್ ಇದರಲ್ಲಿ ಸಿಗತಕ್ಕ ಔಷಧೋಪಚಾರಗಳು ಬಹಳ ಕಡಿಮೆ ತರಗತಿಯದ್ದು ಎಂದು ಬಹಳ ದುಃಖದಿಂದ ಹೇಳಬೇಕಾಗಿದೆ. ಆದ್ದರಿಂದ ಇದನ್ನು ಮೇಲ್ಮಟ್ಟಕ್ಕೆ ತಂದು ಉಚ್ಚ ತರಗತಿಯದ್ದನ್ನು ಕೊಡುವುದಕ್ಕೆ ಪ್ರಯತ್ನ ಮಾಡಬೇಕೆಂದು ಕೇಳಿಕೊಳ್ಳುತ್ತೇನೆ.

ಇನ್ನು ಎಂಪ್ಲಾಯ್‌ಮೆಂಟ ಎಕ್ಸಚೇಂಜನಲ್ಲಿ ಜನರು ರಜಿಸ್ಟರ್ ಮಾಡುವವರು ಹೆಚ್ಚಾಗುತ್ತಿದ್ದಾರೆ. ಇವತ್ತು ದಿನೇ ದಿನೇ ನಿರುದ್ಯೋಗ ಸಂಖ್ಯೆ ಬೆಳೆದಿರುವುದನ್ನು ನೋಡಿದರೆ ನಮಗೇಕೋ ಭೀತಿ ಉಂಟಾಗುತ್ತದೆ. ಇದಲ್ಲದೇ ರಜಿಸ್ಟರ್ ಮಾಡದೇ ಇರುವವರು ಎಷ್ಟೋ ಜನರು ಇದ್ದಾರೆ. ಹೀಗೆ ನಮ್ಮ ದೇಶದಲ್ಲಿ ನಿರುದ್ಯೋಗ ಸಮಸ್ಯೆ ಬೆಳೆಯುತ್ತ ಹೋದರೆ ನಮ್ಮ ಪರಿಸ್ಥಿತಿ ಕೆಡಬಹುದು. ಇದನ್ನು ತಪ್ಪಿಸುವುದಕ್ಕೆ ಸರ್ಕಾರದವರು ಏನಾದರೂ ತೀವ್ರ ಕ್ರಮ ತೆಗೆದುಕೊಳ್ಳಬೇಕು. ಈಗ ನಮ್ಮ ದೇಶದಲ್ಲಿ ಕೇಂದ್ರ ಸರ್ಕಾರದವರ ವೇತನ ಶ್ರೇಣಿ ಒಂದು ರೀತಿ ರಾಜ್ಯ ಸರ್ಕಾರದ ವೇತನ ಶ್ರೇಣಿ ಒಂದು ರೀತಿ . ಹಾಗೆ ಎಲ್.ಐ.ಸಿ., ಪೋಸ್ಟ ಆಫೀಸು, ರೇಲ್ವೆ ಇವುಗಳಲ್ಲಿ ಒಂದು ರೀತಿ ಇವೆ. ರಾಜ್ಯದಲ್ಲಿ ನಡೆಯುವ ಕಾರ್ಖಾನೆಗಳಲ್ಲಿ ಒಂದು ರೀತಿಯ ವೇತನ ಶ್ರೇಣಿ ಇದೆ. ಇದರಲ್ಲಿ ದುಡಿಯುವವರಿಗೆ ಮತ್ತು ಇತರರಿಗೆ

ಬಹಳ ವ್ಯತ್ಯಾಸ ಕಂಡು ಬರುತ್ತದೆ. ಇದನ್ನು ತಪ್ಪಿಸಬೇಕು. ಎಲ್ಲರನ್ನು ಒಂದೇ ರೀತಿಯಲ್ಲಿ ನೋಡಿಕೊಂಡು ಎಲ್ಲರನ್ನು ಒಂದೇ ದರ್ಜೆಯಲ್ಲಿ ತರುವ ಪ್ರಯತ್ನ ಮಾಡಿದರೆ ಬಹಳ ಒಳ್ಳೆಯದು ಎನಿಸುತ್ತದೆ. ಇದರಿಂದ ನಾವು ಇನ್ನು ಸ್ವಲ್ಪ ಹೆಚ್ಚಾಗಿ ಜನರನ್ನು ಕೆಲಸಕ್ಕೆ ತೆಗೆದುಕೊಳ್ಳಬಹುದು. ಈ ತರದ ಒಂದು ಪರಿಸ್ಥಿತಿಯನ್ನು ದೇಶದಲ್ಲಿ ನಿರ್ಮಾಣ ಮಾಡಿ ಹೆಚ್ಚು ಹೆಚ್ಚು ಕೆಲಸ ಕೊಡುವ ಹಾಗೆ ಮಾಡಬೇಕು ಮತ್ತು ಸ್ಟ್ರೈಕ್ಸ್ ಇತ್ಯಾದಿಗಳನ್ನು ಕಡಿಮೆ ಮಾಡುವುದಕ್ಕೆ ಪ್ರಯತ್ನ ಮಾಡಬೇಕು. ಯುನಿಯನ್ನಿಗೂ , ಕೂಲಿಗಾರರಿಗೂ ಇರುವ ಬಿಕ್ಕಟ್ಟನ್ನು ಕಡಿಮೆ ಮಾಡಿ ಹೆಚ್ಚು ಹೆಚ್ಚು ಉತ್ಪಾದನೆಯನ್ನು ಮಾಡುವಲ್ಲಿ ಕಾಳಜಿ ವಹಿಸಬೇಕು. ಇದಕ್ಕೆ ಎಲ್ಲರೂ ಶ್ರಮಿಸುವುದು ಅತ್ಯವಶ್ಯಕ.

ಇನ್ನು ಎನಿಮಲ್ ಹಜ್ಬಂಡರಿಯ ವಿಚಾರ. ಇದು ರೈತನಿಗೆ ಬಹಳ ಅವಶ್ಯಕವಾದ ವಿಚಾರ. ಅದರ ಬಗ್ಗೆ ಸರ್ಕಾರದವರು ಲಕ್ಷ್ಯ ಕೊಡಬೇಕಾದುದು ಅತ್ಯವಶ್ಯಕ. ಇದರ ಬಗ್ಗೆ ಬಜೆಟಿನಲ್ಲಿ ಕೊಡುವ ಹಣ ಸುಮಾರು 5 ಕೋಟಿ 41 ಲಕ್ಷವಾಗಿರುತ್ತದೆ. ನಾವಾದರೂ ಹೇಳುತ್ತೇವೆ. ಅದು ಸಾಲದು ಇನ್ನು ಹೆಚ್ಚಾಗಿ ಕೊಡಬೇಕೆಂದು. ಈಗ ನಡೆಸುತ್ತಿರುವ ಆಸ್ಪತ್ರೆಗಳು, ತಾಲ್ಲೂಕು ಆಸ್ಪತ್ರೆಗಳು, ರೂರಲ್ ಡಿಸ್ಪೆನ್ಸ್‌ರಿಗಳು ಇವು 652 ಕ್ಕೆ ಮುಟ್ಟಿವೆ. ಆದರೆ ಅದು ಏನೂ ಸಾಲದು. ಕೆಲವು ದೊಡ್ಡ ತಾಲ್ಲೂಕುಗಳಲ್ಲಿ ಎರಡು - ಮೂರು ದವಾಖಾನೆಗಳನ್ನು ನಡೆಸುವ ಪ್ರಸಂಗ ಇದೆ ಅಲ್ಲಿ ಉಪಚಾರ ಸರಿಯಾಗಿ ಆಗುವುದಿಲ್ಲ. ಅದರಲ್ಲೂ ಬೇರೆ ಬೇರೆ ಎಪಿಡೆಮಿಕ್ಸ್ ರೂಪದ ರೋಗಗಳು ಬಂದರೆ ಅಲ್ಲಿ ಸಾವಿರಾರು ದನಗಳು ಸಾಯುವ ಸಂದರ್ಭ ಬರುತ್ತದೆ. ಇದರಿಂದ ರೈತನ ಬೆನ್ನುಮೂಳೆ ಮುರಿದಂತಾಗುತ್ತದೆ. ಉದಾಹರಣೆಗೆ :ಗೋಕಾಕ ತಾಲೂಕಿನಲ್ಲಿ 110 ಹಳ್ಳಿಗಳು ಇವೆ. ಒಂದು ಕಡೆಯಿಂದ ಮತ್ತೊಂದು ಕಡೆಗೆ ಸುಮಾರು 60 ಮೈಲಿ ದೂರ ಇದೆ ಇಷ್ಟೊಂದು ದೊಡ್ಡ ಕ್ಷೇತ್ರದಲ್ಲಿ ಒಂದು ತಾಲೂಕು ಡಿಸ್ಪೆನ್ಸರಿ ಕೊಡುವುದೆಂದರೆ ಬಹಳ ಕಷ್ಟದ ಕೆಲಸ. ಮೂಡಲಗಿ ಎಂಬ ಗ್ರಾಮದಲ್ಲಿ ಸಹಸ್ರಾರು ದನಗಳು ಸಂತಿಗೆ ಬರುತ್ತವೆ. ಅಂತಹ ಕಡೆ ವಾರಕ್ಕೆ ಒಬ್ಬ ಡಾಕ್ಟರು ಬಂದು ಹೋದರೆ ಅದರಿಂದ ಬಹಳ ಅನುಕೂಲಕರವಾಗುತ್ತದೆ. ಇಂತಹ ದೊಡ್ಡ ದೊಡ್ಡ ಸ್ಥಳಗಳಲ್ಲಿ ಹೆಚ್ಚು ಹೆಚ್ಚು ದವಾಖಾನೆಗಳನ್ನು ಮಾಡಬೇಕು. ಅದಕ್ಕೆ ಸರಕಾರದವರು ಸರಿಯಾದ ಕ್ರಮ ತಗೆದುಕೊಳ್ಳಬೇಕೆಂದು ಕೇಳಿಕೊಳ್ಳುತ್ತೇನೆ. ಈಗ ನಮ್ಮ ದನಗಳ ಸಂಖ್ಯೆ ನೋಡಿದರೆ ಬಹಳ ಬೆಳೆಯುತ್ತಾ ಇದೆ. 1951 ರಲ್ಲಿ ಸುಮಾರು 89 ಲಕ್ಷ ಇತ್ತು. ಈಗ 96 ಲಕ್ಷಕ್ಕೆ ಬೆಳೆದಿದೆ. ಅನಂತರ ಪ್ರತಿಸಲ ಬೆಳೆದರೂ ಉತ್ತಮ ತರಗತಿಯ ತಳಿ ಬೆಳೆಯುತ್ತಿಲ್ಲ. ಅದರ ಬಗ್ಗೆ ಸರಕಾರದವರು ಈಗಾಗಲೇ ಕ್ರಮ ತಗೆದುಕೊಳ್ಳುತ್ತಿದ್ದಾರೆ. ಆಸ್ಟ್ರೇಲಿಯಾದಿಂದ ಒಳ್ಳೆಯ ಬೀಜದ ಹೋರಿ ಮತ್ತು ಆಕಳುಗಳನ್ನು ತರಿಸುತ್ತಿದ್ದಾರೆ.

ಅದೇ ಪ್ರಕಾರ ಇಂಡೋ - ಡೇನಿಷ್ ಫಾರ್ಮ ವ್ಯವಸ್ಥೆ ಸರ್ಕಾರ ಮಾಡಿದ್ದಾರೆ. ನಮ್ಮ ರಾಜ್ಯದಲ್ಲಿ ಇನ್ನು ಹೆಚ್ಚು ಒಳ್ಳೆಯ ತಳಿಯನ್ನು ಮಾಡುವುದು ಅವಶ್ಯಕತೆ ಇದೆ. ಅಮೃತ ಮಹಲುಗಳಿಗೆ ಸಾಕಷ್ಟು ಗೋಮಾಳವನ್ನು ತೆಗೆದಿಟ್ಟಿದ್ದಾರೆ. ಬೆಂಗಳೂರು ಮತ್ತು ಬೆಳಗಾಂವ ಹವೆ ಈ ಉತ್ತಮ ತಳಿಗಳಿಗೆ ಯೋಗ್ಯವಾಗಿದೆ. ಇಲ್ಲಿಯ ಅಮೇರಿಕಾದಿಂದಾಗಲಿ ೀ, ಆಸ್ಟ್ರೇಲಿಯಾದಿಂದಾಗಲೀ, ಇಂಗ್ಲೆಂಡಿನಿಂದಾಗಲೀ, ತಂದಂತಹ ತಳಿಗಳನ್ನು ಅಭಿವೃದ್ಧಿ ಮಾಡುವುದಕ್ಕೆ ಹವಾಮಾನ ಕೂಡ ಚೆನ್ನಾಗಿದೆ. ಬೆಳಗಾಂವನಲ್ಲಿ ಉತ್ತಮವಾದ ದನಗಳು ಸಾಕಷ್ಟು ಇಲ್ಲ. ಇದನ್ನು ಇನ್ನು ಹೆಚ್ಚು ಮಾಡಬೇಕು. ಇದೇ ರೀತಿ ಈ ಸಿಂಧಿ ದನಗಳನ್ನು ನಾವು ಸಾಕಷ್ಟು ತರಿಸಬೇಕು. ಹಿಂದೆ ಹರಿಯಾಣಾದಿಂದ ತರಿಸುತ್ತಿದ್ದರು. ಅದನ್ನು ಈಗ ನಿಲ್ಲಿಸಿಬಿಟ್ಟಿದ್ದಾರೆ. ಅದಲ್ಲದೇ ಆಂಧ್ರದಲ್ಲಿ ಒಂಗೋಲಾ ತಳಿ ಇದೆ. ಅದನ್ನು ನಮ್ಮ ರಾಜ್ಯದಲ್ಲಿ ಬೆಳೆಸುವುದಕ್ಕೆ ಪ್ರಯತ್ನ ಮಾಡಬೇಕು. ಆಗ ನಮಗೆ ಬೇಕಾದಷ್ಟು ಹಾಲು ಸಿಗುತ್ತದೆ. ಈಗ ಬೆಂಗಳೂರಿನಲ್ಲಿ ಹೆಸರಗಟ್ಟದಲ್ಲಿ ಕೆಲವು ದನಗಳನ್ನು ಸಾಕುತ್ತಿದ್ದಾರೆ ಅಲ್ಲಿ ಇನ್ನು ಹೆಚ್ಚಾಗಿ ತರಿಸಿ ಅದರಿಂದ ಬೇರೆ ಬೇರೆ ಕಡೆಗೆ ಬೇರೆ ಕೇಂದ್ರಗಳಿಗೆ ಆರ್ಟಿಫಿಶಲ್ ಇನ್‌ಸೆಮಿನೇಶನ್ ಒದಗಿಸುವ ಏರ್ಪಾಡು ಮಾಡಬೇಕು. ಈಗ ಮಾಡುತ್ತಿರುವದು ಏನೂ ಸಾಲದು. ಅದನ್ನು ಇನ್ನು ಹೆಚ್ಚಾಗಿ ಮಾಡಬೇಕೆಂದು ಕೇಳಿಕೊಳ್ಳುತ್ತೇನೆ. ಹೆಚ್ಚು ದನಗಳನ್ನು ಇಂತಹ ಕೇಂದ್ರಗಳಲ್ಲಿ ತರಿಸಿಡುವುದರಿಂದ ಇಲ್ಲಿರುವ ಎಲ್ಲ ರೈತರುಗಳಿಗೂ ಪ್ರಯೋಜನವಾಗುತ್ತದೆ. ಇದೇ ರೀತಿ ಈಗ ಡೇನಿಷ್ ಬುಲ್ ಹಾಗೂ ಇಂಗ್ಲೀಷ ಜಾತಿಯ ದನಗಳನ್ನು ಕೆಲವು ಕಡೆಗಳಲ್ಲಿ ತರಿಸಿ ಅಭಿವೃದ್ಧಿ ಮಾಡುತ್ತಿದ್ದಾರೆ. ಇದೇ ರೀತಿ ಅನೇಕ ಕಡೆಗಳಲ್ಲಿ ಒಳ್ಳೆಯ ದನಗಳನ್ನು ತರಿಸಿ ಎಲ್ಲ ಕೇಂದ್ರಗಳಲ್ಲಿ ತರಿಸಿ ಇಡುವಂತೆ ವ್ಯವಸ್ಥೆ ಮಾಡಿದರೆ ಅಲ್ಲಿಯ ಜನರಿಗೆ ಅನುಕೂಲವಾಗುತ್ತದೆ. ಇದರಿಂದ ಮಿಶ್ರ ತಳಿಯ ದನಗಳು ಹೆಚ್ಚಾಗುತ್ತವೆ. ಆದರೆ ಇಂದು ಮಿಶ್ರ ತಳಿಯ ದನಗಳು ಹೆಚ್ಚಾಗಿ ಇಲ್ಲ. ಹೀಗಾಗಿ ರೈತರಿಗೆ ಅಷ್ಟು ಪ್ರಯೋಜನ ವಾಗುತ್ತಿಲ್ಲ. ಸರಕಾರ ಇದರ ಕಡೆಗೆ ಲಕ್ಷ್ಯ ಕೊಡಬೇಕು ಮತ್ತು ಇಂತಹ ದನಗಳ ಕೇಂದ್ರಗಳನ್ನು ಇನ್ನು ಹೆಚ್ಚು ಮಾಡಬೇಕು. ತಾಂತ್ರಿಕವಾಗಿ ಸುಧಾರಿಸಿದ ತಳಿಗಳ ಅಭಿವೃದ್ಧಿ ಇಂದು ಹೆಚ್ಚಾಗಿ ನಡೆಯುತ್ತಿಲ್ಲ. ನಮ್ಮ ಭಾಗದಲ್ಲಿ ಇಂಗ್ಲೀಷ ಜಾತಿಯ ಹಾಗೂ ಬೇರೆ ಜಾತಿಯ ಆಕಳುಗಳನ್ನು ತಂದರೆ ಅವು ಹೆಚ್ಚು ಭಾರವನ್ನು ಹೊರಲಾರವು ನಮ್ಮ ಭಾಗದಲ್ಲಿ ಬಿಸಿಲು ಹೆಚ್ಚು ಇದಕ್ಕೆ ಹೊಂದಿಕೊಂಡಿರುವಂತಹ ತಳಿಗಳನ್ನು ಅಭಿವೃದ್ಧಿ ಮಾಡಬೇಕು. ರೈತರಿಗೆ ಹೆಚ್ಚು ಹೆಚ್ಚು ಉಪಯೋಗಕೆ ಬರುವಂತಹ ತಳಿಗಳನ್ನು ಅಭಿವೃದ್ಧಿ ಮಾಡಬೇಕು ಮತ್ತು ಇಂತಹ ದನಗಳ ಕೇಂದ್ರಗಳನ್ನು ನಮ್ಮಲ್ಲಿ ಮಾಡುವುದರ ಕಡೆಗೆ ಲಕ್ಷ್ಯ ಕೊಡಬೇಕೆಂದು ಹೇಳಬಯಸುತ್ತೇನೆ.

ಅದೇ ಪ್ರಕಾರ ಎಮ್ಮೆಗಳು ಇತ್ತೀಚೆಗೆ ಬಹಳ ಕಡಿಮೆ ತರಗತಿಯವು ಆಗುತ್ತಾ ಬಂದಿವೆ. ಇವುಗಳು ಹೆಚ್ಚು ಹಾಲು ಕೊಡುವುದಿಲ್ಲ. ಈಗೇನೋ ಮುರ್ರಾ, ಪಂಡರಿಪುರಿ, ದಿಲ್ಲಿ ಜಾತಿಯ ಎಮ್ಮೆಗಳು ಬರುತ್ತಿವೆ. ಆದರೆ ಇವು ಸಾಕಷ್ಟು ಸಂಖ್ಯೆಯಲ್ಲಿ ಇಲ್ಲ. ಇದಕ್ಕಾಗಿ ಸರ್ಕಾರ ಇನ್ನು ಹೆಚ್ಚು ಖರ್ಚು ಮಾಡಿ ಇಂತಹ ಶ್ರೇಷ್ಠ ಜಾತಿಯ ಮಿಶ್ರ ತಳಿ ಎಮ್ಮೆಗಳನ್ನು ಅಭಿವೃದ್ಧಿ ಮಾಡುವುದರ ಕಡೆಗೆ ಲಕ್ಷ್ಯ ಕೊಡಬೇಕು. ಆದರೆ ಇಂದು ತಳಿಗಳನ್ನು ಅಭಿವೃದ್ಧಿಪಡಿಸುವಲ್ಲಿ ಕೆಲ ಭಾಗಗಳನ್ನು ಉಪೇಕ್ಷೆಮಾಡುತ್ತಿದೆ. ಇದರಿಂದ ಎಲ್ಲ ಕಡೆಗಳಿಗೂ ಒಳ್ಳೆಯ ತಳಿಯ ದನಗಳನ್ನು ಪಡೆಯಲು ರೈತರಿಗೆ ಅವಕಾಶ ವಿಲ್ಲದಾಗಿದೆ. ಉದಾಹರಣೆಗಾಗಿ ಹೇಳುವುದಾದರೆ ನಮ್ಮ ಕೃಷ್ಣಾ ನದಿಯ ತೀರದಲ್ಲಿ ಒಳ್ಳೆಯ ಜಾತಿಯ ದನಗಳನ್ನು ಇಲ್ಲಿನ ಜನ ಸಾಕಿಕೊಂಡು ಇದರ ತಳಿಗಳನ್ನು ಅಭಿವೃದ್ಧಿ ಮಾಡಲು ಪ್ರಯತ್ನ ಮಾಡುತ್ತಿದ್ದರು. ಇನ್ನು ಹೆಚ್ಚು ಸಂಖ್ಯೆಯಲ್ಲಿ ಅವು ಅಭಿವೃದ್ಧಿ ಹೊಂದುತ್ತಿಲ್ಲ. ಇದರ ಕಡೆಗೆ ಲಕ್ಷ್ಯ ಕೊಡುವುದು ಅವಶ್ಯವಿದೆ ಎಂದು ಮಾನ್ಯ ಮಂತ್ರಿಗಳಲ್ಲಿ ಹೇಳಬಯಸುತ್ತೇನೆ.

ಇನ್ನು ಕುರಿಸಂಗೋಪನಾ ಬಗ್ಗೆ ಹಿಂದೆ ಬೇರೆ ಬೇರೆ ರೀತಿಯಾದ ಯೋಜನೆಗಳನ್ನು ಹಾಕಿಕೊಂಡಿದ್ದರು. ಈಗ ಅದನ್ನು ಮುಂದುವರಿಸಿಕೊಂಡು ಬರುತ್ತಿಲ್ಲ. ಹೀಗೆ ಮುಂದುವರಿಸದೇ ಇರುವುದರಿಂದಾಗಿ ಇಂದು ಉತ್ತಮ ತಳಿಯ ಕುರಿಗಳು ಹೆಚ್ಚಾಗಿ ಕಂಡು ಬರುತ್ತಿಲ್ಲ. ಹಿಂದೆ ಕುರಿಗಳ ತಳಿಗಳನ್ನು ಅಭಿವೃದ್ಧಿ ಮಾಡಲು ದುಡ್ಡನ್ನು ಅರ್ಧ ಸಾಲವಾಗಿ ಇನ್ನರ್ಧ ಸಬ್ಸಿಡಿಯಾಗಿ ಕೊಟ್ಟು ಎಲ್ಲ ಕಡೆಗೂ ಕುರಿಗಳ ತಳಿಯನ್ನು ಹಂಚುತ್ತಿದ್ದರು. ಈಗ ಆ ಯೋಜನೆ ಮಾಡುತ್ತಿಲ್ಲ. ಇದನ್ನು ಪುನಃ ಪ್ರಾರಂಭಮಾಡಿ ದೇಶದಲ್ಲಿರುವ ತಳಿಗಳನ್ನು ಬೇರೆ ಬೇರೆ ಕಡೆಗಳಿಗೆ ಕಳುಹಿಸಿ ಅನುಕೂಲ ಮಾಡಬೇಕು. ನಮ್ಮಲ್ಲಿ ಸಾಕಷ್ಟು ಹುಲ್ಲುಗಾವಲುಗಳು ಕೂಡ ಇವೆ. ಮತ್ತು ಅರಣ್ಯ ಪ್ರದೇಶಗಳು ಇವೆ. ಇವುಗಳಲ್ಲಿ ಸ್ವಲ್ಪ ಭಾಗದಲ್ಲಿ ಕುರಿ ತಳಿಗಳನ್ನು ಅಭಿವೃದ್ಧಿ ಮಾಡಲು ಉತ್ತಮ ತಳಿಯ ಕುರಿಗಳನ್ನು ಸಾಕಿದರೆ ಅದರಿಂದ ಹೆಚ್ಚು ಉಪಯೋಗವಾಗುತ್ತದೆ. ಮತ್ತು ಉತ್ತಮ ದರ್ಜೆಯ ಉಣ್ಣೆಯು ಸಿಗಲು ಅನುಕೂಲವಾಗುತ್ತದೆ. ಈ ಉಣ್ಣೆಯನ್ನು ಪರದೇಶಗಳಿಗೂ ಕಳಿಸಲು ಅನುಕೂಲವಾಗುತ್ತದೆ. ಈಗ ಇರುವ ಕುರಿಗಳಿಂದ ಬಹಳ ಕೀಳು ದರ್ಜೆಯ ಉಣ್ಣೆ ಸಿಗುತ್ತದೆ ಮತ್ತು ಇವಕ್ಕೆ ಮಾರ್ಕೇಟಿನಲ್ಲಿ ಒಳ್ಳೆಯ ಬೆಲೆಯು ಸಿಗುತ್ತಿಲ್ಲ. ಆದುದರಿಂದ ಒಳ್ಳೆಯ ತಳಿಗಳನ್ನು ಸುಧಾರಿಸಲು ಸಾಧ್ಯವಾಗುತ್ತಿಲ್ಲ. ಇದರ ಕಡೆಗೆ ಸರ್ಕಾರ ಹೆಚ್ಚು ಲಕ್ಷ್ಯ ಕೊಡಬೇಕೆಂದು ವಿನಂತಿಸಿಕೊಳ್ಳುತ್ತೇನೆ.

# ಉದ್ಯೋಗ ಆಧಾರಿತ ಶಿಕ್ಷಣದ ಮಹತ್ವ:

5ನೇ ಏಪ್ರಿಲ್ 1968

ಶಿಕ್ಷಣದಂತಹ ಅತ್ಯಂತ ಮಹತ್ವದ ವಿಷಯಕ್ಕೆ ನಮ್ಮ ಬಜೆಟಿನಲ್ಲಿ 36 ಕೋಟಿ ರೂಪಾಯಿಗಳಷ್ಟು ಹಣವನ್ನು ಒದಗಿಸಿದ್ದಾರೆ. ಇದರ ಮೇಲೆ ಮಾತನಾಡಲು ನನಗೆ ಅವಕಾಶ ಕೊಟ್ಟಿದ್ದಕ್ಕೆ ನಾನು ಅಧ್ಯಕ್ಷರಿಗೆ ವಂದಿಸುತ್ತೇನೆ. ಈ ಬೇಡಿಕೆಯನ್ನು ಪೂರ್ಣವಾಗಿ ಅನುಮೋದನೆ ಮಾಡುತ್ತಾ ಕೆಲವು ಸೂಚನೆಗಳನ್ನು ಕೊಡುತ್ತೇನೆ. ನಮ್ಮ ವಿರೋಧ ಪಕ್ಷದ ನಾಯಕರು ಮಾತನಾಡುವಾಗ **ಪ್ರಾಥಮಿಕ ಶಿಕ್ಷಣ ಬಹಳ ಮಹತ್ವ ಉಳ್ಳದ್ದು. ಅದಕ್ಕೆ ಸಾಕಷ್ಟು ಲಕ್ಷ್ಯ ಕೊಡುತ್ತಿಲ್ಲ ಅದನ್ನು ಪೂರ್ಣವಾಗಿ ಬೆಳವಣಿಗೆ ಮಾಡಬೇಕು. ಜನರಿಗೆ ಅವರು ಮಾಡುವ ವಿದ್ಯಾಭ್ಯಾಸದಿಂದ ಯಾವುದಾದರೂ ಒಂದು ರೀತಿಯಲ್ಲಿ ಸಹಾಯವಾಗಬೇಕು ಎಂದುಹೇಳಿದ್ದಾರೆ. ಆ ಮಾತನ್ನು ನಾನು ಸಮರ್ಥಿಸುತ್ತೇನೆ. ನಿಜವಾಗಿಯೂ ಈ ಕಲ್ಯಾಣ ರಾಜ್ಯದಲ್ಲಿ ಜನರ ಶಿಕ್ಷಣ, ಉದ್ಯೋಗ, ಆರೋಗ್ಯ, ಅವರ ಜೀವನದ ಭರವಸೆ ಇವುಗಳ ಹೊಣೆ ಹೊರಬೇಕಾದ್ದು ಕರ್ತವ್ಯವಾಗಿದೆ.** ಸರ್ಕಾರದವರು ಎಲ್ಲವನ್ನು ಒದಗಿಸಿಕೊಟ್ಟು ಮಾಡಲು ಮುಂದೆ ಬಂದಾಗ ತಮ್ಮ ಜವಾಬ್ದಾರಿ ಅರಿತು ಕರ್ತವ್ಯವನ್ನು ನಿಭಾಯಿಸಬೇಕು. ನಾವು ವಿದ್ಯಾಭ್ಯಾಸಕ್ಕಾಗಿ ಬೇಕಾದಷ್ಟು ಖರ್ಚು ಮಾಡಿದರೂ ಅದರ ಗುರಿಯೇನು ಎಂಬುದನ್ನು ನೋಡಬೇಕು.ಈಗ ಸುಮಾರು 30 ಮಂದಿ ವಿದ್ಯಾವಂತರಾಗಿದ್ದರೂ, ನಿರಕ್ಷರಸ್ಥರ ಸಂಖ್ಯೆ ಮೊದಲಿಗಿಂತ ಹೆಚ್ಚಾಗಿ ಬೆಳೆದಿದೆ. ಇದನ್ನು ನೋಡಿದರೆ ನಾವು ಮುಂದೆ ಸಾಗುತ್ತಿದ್ದೇವೆಯೇ ಅಥವಾ ಹಿಂದಕ್ಕೆ ಹೋಗುತ್ತಿದ್ದೇವೆಯೇ ಎಂಬುದು ತಿಳಿಯದಾಗಿದೆ. ಆದ್ದರಿಂದ ವಿಚಾರ ಮಾಡಿ ಈ ಕಡೆ ಲಕ್ಷ್ಯ ಕೊಡಬೇಕು. ಸಂಬಳಗಳ ಪುನರ್ ವಿಮರ್ಶೆ ಹೆಚ್ಚು ಅಧಿಕಾರಿಗಳ ನೇಮಕ ಇದಕ್ಕಾಗಿ ನಾವು ಒದಗಿಸುವ ಹಣದಲ್ಲಿ ಹೆಚ್ಚು ಭಾಗ ಖರ್ಚಾಗುತ್ತಿದೆ. ಆದರೆ ನಿಜವಾಗಿಯೂ ಯಾವ ಮಟ್ಟದಲ್ಲಿ ಶಿಕ್ಷಣ ಬೆಳೆಯಬೇಕಾಗಿದೆಯೇ ಆ ಮಟ್ಟದಲ್ಲಿ ಬೆಳೆಯುತ್ತಿಲ್ಲ. ಪ್ರಾಥಮಿಕ ಮಟ್ಟದಲ್ಲೂ ಬೆಳೆಯುತ್ತಿಲ್ಲ ಎಂದು ವಿಷಾದದಿಂದಲೇ ಹೇಳಬೇಕಾಗಿದೆ. ಪ್ರಾಥಮಿಕ ಶಿಕ್ಷಣ ಮುಗಿಸಿಕೊಂಡು ಶಾಲೆಯಿಂದ ಹೊರಬಿದ್ದ ಕೂಡಲೇ ಸ್ವತಂತ್ರ್ಯವಾಗಿ ತನ್ನ ಕಾಲ ಮೇಲೆ ತಾನು ನಿಂತುಕೊಳ್ಳುವ ಶಕ್ತಿ ಬರಬೇಕು. ಉದ್ಯೋಗ ದೊರಕಿಸಿಕೊಳ್ಳಲು ಸಮರ್ಥನಾಗಿರಬೇಕು. ಆದರೆ ಅದಕ್ಕೆ ಅವಕಾಶವಾಗುವಂತೆ ಶಿಕ್ಷಣ ದೊರಕುತ್ತಿಲ್ಲ. ನಮ್ಮಲ್ಲಿ ಶೇಕಡಾ 80 ರಷ್ಟು ಜನರು

ಒಕ್ಕಲುತನದಲ್ಲಿ ನಿರತರಾಗಿದ್ದಾರೆ. ಅದಕ್ಕೂ ಈಗಿನ ವಿದ್ಯಾಭ್ಯಾಸಕ್ಕೂ ಸಂಬಂಧವಿಲ್ಲ ಇದನ್ನು ನೋಡಿ ವಿಷಾಧವೇನಿಸುತ್ತದೆ. ಉದ್ಯೋಗ ಶಿಕ್ಷಣ ಪ್ರಾರಂಭಿಸಬೇಕೆಂದು ಮಹಾತ್ಮಾಜೀಯವರು ಹೇಳಿದ್ದರೂ ಕೆಲವು ಕಡೆ ಪ್ರಾರಂಭಿಸಿದ್ದರು. ನೂಲುವುದನ್ನು, ನೇಯುವುದನ್ನು ಕಲಿಸುತ್ತಿದ್ದರು ಆದರೆ ಆ ಸಂಬಂಧದಲ್ಲಿ ಶಿಕ್ಷಣ ಕೊಡುವವರೆಗೂ ಮತ್ತು ಪಡೆಯುವವರೆಗೂ ಶ್ರದ್ಧೆಯಿಲ್ಲದೇ ಮೂಲೋದ್ಯೋಗದಿಂದ ಅಷ್ಟಾಗಿ ಪ್ರಯೋಜನವಾಗಲಿಲ್ಲ. ಇಂದು ಕನ್ನಡ 7 ನೇ ತರಗತಿಯಿಂದ ಹೊರಬಂದವನು ಹೊಲಗಳಿಗೆ ಹೋಗಿ ಅಲ್ಲಿನ ಕೆಲಸ ಮಾಡಲು ಸಮರ್ಥನಾಗಿರುವುದಿಲ್ಲ. ಆ ಕೆಲಸ ಅವನಿಗೆ ಬರುವುದಿಲ್ಲ. ಈ ರೀತಿ ಶಿಕ್ಷಣವನ್ನೇ ನಾವು ಮುಂದುವರಿಸಿದರೆ ಬರೀ ಕಾರಕೂನರನ್ನು ತಯಾರಿಸಬಹುದೇ ಹೊರತು ಇನ್ನೇನು ಮಾಡಲು ಸಾಧ್ಯವಾಗುವುದಿಲ್ಲ. ಆದುದರಿಂದ ಈಗಿರುವ ಶಿಕ್ಷಣ ಪದ್ಧತಿಯಲ್ಲಿ ಆಮೂಲಾಗ್ರ ಬದಲಾವಣೆಯಾಗಬೇಕು. ಕನ್ನಡ ನಾಲ್ಕನೇಯ ತರಗತಿಯಿಂದಲಾದರೂ ಉದ್ಯೋಗಕ್ಕೆ ಅವಕಾಶವಾಗುವಂತಹ ಶಿಕ್ಷಣವನ್ನು ಕೊಡಬೇಕು. ಇಂದು ಒಂದು ಕಡೆ ವಿದ್ಯುಚ್ಛಕ್ತಿಯನ್ನು ಹೆಚ್ಚಾಗಿ ಉತ್ಪಾದನೆ ಮಾಡಿ ಬಳಸುತ್ತಿದ್ದೇವೆ ಉದ್ಯೋಗ, ನೀರಾವರಿ ಸೌಕರ್ಯ ಬೆಳೆಸುತ್ತಿದ್ದೇವೆ ಆದರೆ ದುರ್ದೈವದಿಂದ ಒಕ್ಕಲುತನ ಕೆಲಸಕ್ಕೆ ಜನರು ಮುಂದೆ ಬರುತ್ತಿಲ್ಲ. ಕೂಲಿಗೂ ಜನರು ಸಿಕ್ಕುತ್ತಿಲ್ಲ. ಇನ್ನೊಂದು ಕಡೆ ನಿರುದ್ಯೋಗ ಜಾಸ್ತಿಯಾಗುತ್ತಿದೆ. ಡಿಪ್ಲೋಮಾ ಹೋಲ್ಡರ್‌ಗಳಿಗೂ ಉದ್ಯೋಗ ದೊರೆಯುತ್ತಿಲ್ಲ. ಈ ಪರಿಸ್ಥಿತಿಯನ್ನು ತಪ್ಪಿಸಬೇಕಾದರೆ ಒಕ್ಕಲುತನಕ್ಕೆ ಪ್ರಾಶಸ್ತ್ಯ ಕೊಡಬೇಕು. ಇದರ ಕಡೆ ಸರಿಯಾದ ಗಮನ ನಾವೂ ಕೊಟ್ಟಿಲ್ಲ. ಇಂದು ಹೊಲಗಳಲ್ಲಿ ಕೆಲಸ ಮಾಡಲು ಜನರು ಸಿಕ್ಕುತ್ತಿಲ್ಲ. ಕೂಲಿಗಳು ವ್ಯವಸಾಯದ ಕೆಲಸಕ್ಕೆ ಬರುತ್ತಿಲ್ಲ ಅವರು ಬೇರೆ ಕೆಲಸ ಹುಡುಕಿಕೊಂಡು ಹೋಗುತ್ತಿದ್ದಾರೆ. ನಿರುದ್ಯೋಗ ಸಮಸ್ಯೆಯೂ ಬಹಳವಾಗಿ ಬೆಳೆಯುತ್ತಿದೆ. ಇದನ್ನು ತಪ್ಪಿಸಲು **ವೈಟ್ ಕಾಲರ್ ಶಿಕ್ಷಣವನ್ನು ತಪ್ಪಿಸಿ ಉದ್ಯೋಗ ಮತ್ತು ಶಿಕ್ಷಣ ಇವುಗಳಿಗೆ ಸಂಬಂಧವಿರುವಂತೆ ಮಾರ್ಪಾಡು ಮಾಡಬೇಕು. ಒಕ್ಕಲುತನ ಮತ್ತು ಇತರ ಉದ್ಯೋಗಗಳನ್ನು ಶಿಕ್ಷಣದ ನಂತರ ಮಾಡಿಕೊಂಡು ಜೀವನ ನಡೆಸಲು ಅವಕಾಶ ಕಲ್ಪಿಸಬೇಕು. ಸೆಕೆಂಡರಿ ಶಿಕ್ಷಣ ಮುಗಿದ ನಂತರ ಶ್ರೀಮಂತರು ಬೇಕಾದರೆ ಕಾಲೇಜುಗಳಿಗೆ ಹೋಗಲಿ, ಇನ್ನು ಮೇಲೆ ಹೆಚ್ಚಾಗಿ ಕಾಲೇಜುಗಳನ್ನು ಬೆಳೆಸುವುದನ್ನು ಕಡಿಮೆ ಮಾಡಬೇಕು.**

**ಶ್ರೀ ಪಿ. ವೆಂಕಟಗಿರಿಯಪ್ಪ :** ಹಾಗಾದರೆ ಬಡವರಿಗೆ ಕಾಲೇಜು ವಿದ್ಯಾಭ್ಯಾಸ ಬೇಡವೇ?

**ಶ್ರೀ ಎ. ಆರ್. ಪಂಚಗಾವಿ :** ಅವರಿಗೆ ಸಾಧ್ಯವಾದರೆ ಹೋಗಲಿ. ದುರ್ದೈವದಿಂದ ಒಂದು ಕಡೆ ಸಮಾಜದಲ್ಲಿ ಬಂಡವಾಳಶಾಹಿ ಬೆಳೆಯುತ್ತಿದೆ. ಇನ್ನೊಂದು ಕಡೆ ಪಿ.ಡಬ್ಲ್ಯು.ಡಿ ಸಂಖ್ಯೆ ಹೆಚ್ಚುತ್ತಿದೆ. ಲಿಕ್ಕರ್ ಮತ್ತು ಟಾಡಿ( ಶೆರೆ ಮತ್ತು ಶಿಂಧಿ) ಕಾಂಟ್ರ್ಯಾಕ್ಟರುಗಳ ಸಂಖ್ಯೆ ಹೆಚ್ಚುತ್ತಿವೆ. ಹೀಗೆ ಅವರನ್ನು ಬೆಳೆಸುತ್ತಾ ಹೋದರೆ ಬಡವರು ಸುಖವಾಗಿ ಬಾಳುವುದು ಕಷ್ಟವಾಗುತ್ತದೆ. ಅವರಿಗೆ ಶಾಂತಿ ಸಮಾಧಾನಗಳು ಲಭಿಸುವುದಿಲ್ಲ. ನಗರಗಳಲ್ಲಿ ಬಡವರಿಗೆ ಕನಿಷ್ಠ ಪ್ರಾಥಮಿಕ ಶಿಕ್ಷಣ ಕೂಡ ಸಿಗುತ್ತಿಲ್ಲ. ಅನೇಕ ಕಡೆ ಗುಡ್ಡುಗಾಡು ಪ್ರದೇಶಗಳಲ್ಲಿ, ಹಳ್ಳಿಗಳಲ್ಲಿ ಶಾಲೆಗಳಿಲ್ಲ. ಕೆಲವು ಕಡೆ ಒಬ್ಬರೇ ಉಪಾಧ್ಯಾಯರಿರುವ ಶಾಲೆಗಳನ್ನು ತೆರೆಯುತ್ತಿದ್ದಾರೆ. ಆ ಶಾಲೆಗಳನ್ನು ತನಿಖೆ ಮಾಡಲು ಅಧಿಕಾರಿಗಳು ಹೋಗುವುದಿಲ್ಲ. ಮುಂಬೈ ಕರ್ನಾಟಕದಲ್ಲಿ ಒಂದು ಕಡೆ ಸ್ಕೂಲ್‌ಬೋರ್ಡಗಳ ಆಡಳಿತವಿದೆ. ಇನ್ನೊಂದು ಕಡೆ ಸರ್ಕಾರಿ ಆಡಳಿತ ವಿದೆ. ಈ ಎರಡರ ತಿಕ್ಕಾಟದಿಂದ ಪ್ರಾಥಮಿಕ ಶಿಕ್ಷಣ ಸರಿಯಾಗಿ ಅಲ್ಲಿ ದೊರೆಯುತ್ತಿಲ್ಲ. ಒಂದು ಕಡೆ ಅಧಿಕಾರಿಗಳು ಮತ್ತು ಇನ್ನೊಂದು ಕಡೆ ಸ್ಕೂಲ ಬೋರ್ಡು ನಾಮಕರಣ ಮಾಡುವ ಜನರು ಇದ್ದಾರೆ. ಜನರ ಪ್ರತಿನಿಧಿಗಳು ಅಲ್ಲಿಲ್ಲ. ಇದರಿಂದ ದಬ್ಬಾಳಿಕೆಗೆ ಅವಕಾಶವಾಗಿದೆ.

**ಪ್ರಾಥಮಿಕ ಶಿಕ್ಷಣವೇ ಬದುಕಿನ ಬುನಾದಿ :** ನಮ್ಮ ಊರಿನಲ್ಲಿ ನಮ್ಮ ಶಿಕ್ಷಣ ಯಾವ ರೀತಿಯಿಂದ ನಡೆದಿದೆ ಅಂತ ಹೇಳಲಿಕ್ಕೆ ಯಾವ ಅಧಿಕಾರವು ಇಲ್ಲದಂತಾಗಿದೆ. ಈ ತರಹದ ಪರಿಸ್ಥಿತಿಗೆ ಮುಟ್ಟುತ್ತಾ ಇದ್ದೇವೆ. ಇಂತಹ ದುರ್ದೈವದ ಸಂಗತಿ ಹೋಗಬೇಕು. **ಪ್ರಾಥಮಿಕ ಶಿಕ್ಷಣವೇ ಅತ್ಯಂತ ಮಹತ್ವದ ಘಟ್ಟ. ಎಲ್ಲಕ್ಕೂ ಬುನಾದಿ.** ಅದರ ಆಧಾರದ ಮೇಲೆ ನಮ್ಮ ಇಡೀ ಶಿಕ್ಷಣ ನಡೆಯತಕ್ಕದ್ದು ಇವತ್ತು ಸರ್ಕಾರಿ ಸ್ಕೂಲಗಳನ್ನು ಬಹಳವಾಗಿ ನಡೆಸುತ್ತಾ ಇದ್ದಾರೆ. ಇನ್ನೊಂದು ಕಡೆ ಸ್ಕೂಲ ಬೋರ್ಡ, ಎಡೆಡ್ ಸ್ಕೂಲಬೋರ್ಡಗಳು ನಡೆಯುತ್ತಾ ಇವೆ. ಜಾತಿಯ ಸಂಸ್ಥೆಗಳು ಕೂಡ ಪ್ರಾಥಮಿಕ ಶಾಲೆಗಳನ್ನು ನಡೆಸುತ್ತಾ ಇವೆ. ಕ್ರಿಶ್ಚಿಯನ್ ಮಿಷನರಿಗಳು ಹಳ್ಳಿಗಳಲ್ಲಿ ಆ ಶಾಲೆಗಳನ್ನು ನಡೆಸುತ್ತಾ ಇದ್ದಾರೆ ಅವಕ್ಕೆ ಹರಿಜನರು ಹೋಗುತ್ತಾ ಇದ್ದಾರೆ. ಅಲ್ಲಿ ಕಲಿಯತಕ್ಕ ಹುಡುಗರು ಯಾರೂ ಕೂಡ ಉಳಿದ ಶಾಲೆಗೆ ಹೋಗುವುದೇ ಇಲ್ಲ. ಅವರ ಶಿಕ್ಷಣ ಮಟ್ಟ ಅಲ್ಲಿಗೆ ನಿಲ್ಲುತ್ತಾ ಇದೆ . ಈ ತರಹ ಆದರೆ ಅವರ ಗತಿ ಏನು? ಹರಿಜನರ ಮಕ್ಕಳಿಗೆ ಇವತ್ತು ಸರಿಯಾದ ಶಿಕ್ಷಣ ಸಿಕ್ಕುತ್ತಿಲ್ಲ ಜಾತಿಯ ಶಿಕ್ಷಣ ಸಂಸ್ಥೆಗಳನ್ನು ಕೂಡಲೇ ಬಂದು ಮಾಡಿ ಸರ್ಕಾರವರು ಒಂದೇ ಒಂದು ನಿಯಮವನ್ನು ಅನುಸರಿಸಬೇಕು. ಈಗ ಹಿಂದುಳಿದ ವಿದ್ಯಾರ್ಥಿಗಳಿಗೆ ಅಥವಾ ಹಿಂದುಳಿದ ವರ್ಗಕ್ಕೆ ಸಹಾಯ ಮಾಡುತ್ತೇವೆ ಎಂದು ಹೇಳಿ ಸೋಶಿಯಲ್ ವೇಲ್‌ಪೇರ್ ಡಿಪಾರ್ಟಮೆಂಟನಿಂದ ಹಣವನ್ನು ಖರ್ಚು ಮಾಡುತ್ತಾ ಇದ್ದೇವೆ ಎಂದು ಹೇಳುತ್ತೀರಿ

ಇನ್ನೊಂದು ಕಡೆ ಅವರ ಶಿಕ್ಷಣ ಹೆಚ್ಚು ಹೆಚ್ಚಾಗಿ ಕುಂಠಿತವಾಗುತ್ತಾ ಇದೆ. ಈ ತರಹದ ಪರಿಸ್ಥಿತಿ ಮುಂದುವರೆಸಿಕೊಂಡು ಹೋಗುವುದು ಸರಿಯಾಗಿಲ್ಲ. ನಮ್ಮ ಶಿಕ್ಷಣದಲ್ಲಿ ಅಮೂಲಾಗ್ರವಾದ ಬದಲಾವಣೆ ಆಗಲಿಕ್ಕೇ ಬೇಕು. ನಮ್ಮ ಶಿಕ್ಷಣ ನಮ್ಮ ವೃತ್ತಿಗೆ ಸಂಬಂಧವನ್ನು ಕಲ್ಪಿಸಿಕೊಂಡು ಹೋಗುವಂತಹ ಶಿಕ್ಷಣವಾಗಬೇಕು. ಇಲ್ಲದೇ ಹೋದರೆ ನಿರುದ್ಯೋಗವನ್ನು ನಿರ್ಮಾಣ ಮಾಡಿಕೊಂಡು ಹೋಗುವಂತಹ ಶಿಕ್ಷಣವಾಗುತ್ತದೆ ಎಂದು ಹೇಳಬೇಕಾಗುತ್ತದೆ. ಸ್ಪಷ್ಟವಾಗಿ ಹೇಳಬೇಕಾದರೆ ಒಂದು ಕಡೆ ಸ್ಕೂಲಬೋರ್ಡ, ಇನ್ನೊಂದು ಕಡೆ ಸರ್ಕಾರಿ ಶಾಲೆಗಳು ಈ ವ್ಯತ್ಯಾಸ ಹೋಗಬೇಕು. ಉತ್ತರ ಕರ್ನಾಟಕದಲ್ಲಿರುವಂತಹ ಸ್ಕೂಲ ಬೋರ್ಡುಗಳನ್ನು ಕೂಡಲೇ ರದ್ದು ಮಾಡಿ ಒಂದು ಹೊಸ ರೀತಿಯ ಆಡಳಿತ ಬರುವಂತೆ ಮಾಡಬೇಕು ತಾಲ್ಲೂಕು ಬೋರ್ಡುಗಳಿಗೆ ಆ ಶಾಲೆಗಳಿಗೆ ಒಪ್ಪಿಸಬೇಕು.

**Sri K.V. Shankargouda :** Sir we have got a bill ready to introduce District School Boards in every district

**ಶ್ರೀ ಅಜೀಜ್ ಸೇಠ್ :** ಅಲ್ಲೇನು ಇಲೆಕ್ಟೆಡ್ ಮೆಂಬರ್ಸ್ ಇರುತ್ತಾರೋ, ನಾಮಿನೇಟೆಡ್ ಮೆಂಬರ್ಸ್ ಇರುತ್ತಾರೋ?

**ಶ್ರೀ ಎ. ಆರ್. ಪಂಚಗಾವಿ :** ಒಂದು ಏಕರೂಪದ ವ್ಯವಸ್ಥೆ ಮಾಡುತ್ತೇವೆಂದು ಮಾನ್ಯ ಮಂತ್ರಿಗಳು ಭರವಸೆ ಕೊಟ್ಟಿದ್ದಾರೆ. ಆದರೆ ಈಗ ನಮ್ಮ ಕಡೆ ನಡೆದಿರತಕ್ಕ ಪ್ರಯೋಗ ಈ ಸ್ಕೂಲಬೋರ್ಡಗಳು ಯಶಸ್ವಿಯಾಗಿಲ್ಲ ಎಂಬ ಮಾತುನ್ನು ಹೇಳಬೇಕಾಗಿದೆ. ಅದರಲ್ಲಿ ಏನು ಮಾರ್ಪಾಡು ಮಾಡಬೇಕೋ, ಏನು ಬದಲಾವಣೆ ಮಾಡಬೇಕೋ ಅದನ್ನು ಮಾಡಲು ಸರ್ಕಾರದವರು ಲಕ್ಷ್ಯಕ್ಕೆ ತೆಗೆದುಕೊಂಡು ಯೋಗ್ಯವಾದ ಒಂದು ಧೋರಣೆಯನ್ನು ಅನುಸರಿಸಿದರೆ ನೆಟ್ಟಗಾಗುತ್ತದೆ ಎಂದು ಹೇಳಬಯಸುತ್ತೇನೆ.

ಇನ್ನು ಶಿಕ್ಷಕರ ಬಗ್ಗೆ ಹೇಳುವುದಾದರೆ ಅನೇಕ ಕಡೆ ಅವರ ಟ್ರೈನಿಂಗ್‌ಗೆ ಮತ್ತು ಅವರ ಮುಂದಿನ ಶಿಕ್ಷಣಕ್ಕೆ ಅವಕಾಶವಿಲ್ಲ. ಅದಕ್ಕೆ ಸಾಕಾಗುವಷ್ಟು ಅವಕಾಶ ಮಾಡಿಕೊಡಬೇಕು. ಇಲ್ಲಿಯವರೆಗೂ ಅನ್ ಟ್ರೇನ್ಡ್ ಶಿಕ್ಷಕರನ್ನು ನೇಮಕ ಮಾಡುತ್ತಾ ಇದ್ದರು. ಅವರು ಇನ್‌ಕ್ರಿಮೆಂಟ್ ಮತ್ತು ಪ್ರಮೋಷನ್ ಯಾವುದನ್ನು ಪಡೆಯದೇ ಇದ್ದಾರೆ. ಅದು ತಪ್ಪು. ಒಮ್ಮೆ ನೇಮಕ ಮಾಡಿಕೊಂಡ ಮೇಲೆ ಸರ್ಕಾರಿ ನೌಕರಿಯಲ್ಲಿ ದೊರಕುವಂತಹ ಸೌಲಭ್ಯಗಳು, ಇನ್‌ಕ್ರಿಮೆಂಟ್ , ಪ್ರಮೋಷನ್ ಮುಂತಾದವುಗಳೆಲ್ಲವೂಗಳು ಸಿಕ್ಕುವಂತೆ ವ್ಯವಸ್ಥೆ ಮಾಡಬೇಕು. ಇದನ್ನು ಕೂಡ ಸರ್ಕಾರದವರು ವಿಚಾರಣೆ ಮಾಡಿ ಯೋಗ್ಯವಾದ ಬದಲಾವಣೆಯನ್ನು ಮಾಡಬೇಕು.

ಇನ್ನು ಶಾಲೆಗಳಲ್ಲಿ ತಪಾಸಣೆ ಸಾಕಷ್ಟು ರೀತಿಯಲ್ಲಿ ಆಗುತ್ತಿಲ್ಲ. ನಮ್ಮ ಕಡೆಯಲ್ಲಿ ಗೋಕಾಕದಿಂದ 5 ಮೈಲಿ ಮೇಲೆ ಕಡಬಗಟ್ಟಿ ಅಂತಾ ಒಂದು ಹಳ್ಳಿ ಇದೆ. ಅಲ್ಲಿರತಕ್ಕ ಶಾಲೆಯಲ್ಲಿ ಎರಡು ವರ್ಷದಿಂದ ಒಬ್ಬರು ಶಿಕ್ಷಕರು ಇದ್ದರು ಅವರು ವರ್ಷದಲ್ಲಿ ಎರಡು ಸಾರಿ ಶಾಲೆಗೆ ಹೋಗುತ್ತಿದ್ದರು ಇಂಥ ಪರಿಸ್ಥಿತಿ ಮುಂದುವರಿಯಬಾರದು. ಇದಕ್ಕೆ ಬದಲಾಗಿ ಯಾವ ರೀತಿ ಶಿಕ್ಷಣ ಪದ್ಧತಿ ನಡೆದಿದೆ, ಶಾಲೆಗೆ ಹುಡುಗರು ಸರಿಯಾಗಿ ಹೋಗುತ್ತಾರೆಯೋ ಇಲ್ಲೋ ಎಂಬುದನ್ನು ಸರಿಯಾಗಿ ತಪಾಸಣೆ ಮಾಡುವುದು ಬಹಳ ಅವಶ್ಯಕ. **ಹಿಂದುಳಿದ ವರ್ಗದವರ ಶಿಕ್ಷಣ ಸರಿಯಾಗಿ ನಡೆಯುತ್ತಿಲ್ಲ. ಅಲಕ್ಷವಾಗಿದೆ ಎಂಬ ಮಾತನ್ನು ಸರಕಾರದ ಲಕ್ಷ್ಯಕ್ಕೆ ತರಬಯಸುತ್ತೇನೆ.**

ಈಗ ಹಿಂದಿ ಮತ್ತು ಇಂಗ್ಲೀಷ ಸ್ಥಾನಮಾನದ ಬಗ್ಗೆ ನಮ್ಮ ವಿರೋಧ ಪಕ್ಷದ ನಾಯಕರು ಮಾತನಾಡಿದರು. ಈ ವಿವಾದ ಬಹಳಷ್ಟು ಹಳ್ಳಿಗಳಿಗೂ ಕೂಡ ವ್ಯಾಪಿಸುತ್ತಾ ಇದೆ. ಇನ್ನು ಮುಂದೆ ಇದನ್ನು ಬೆಳೆಸುತ್ತಾ ಹೋಗದೆ ಜನರಲ್ಲಿ ಯಾವ ತರಹದ ಒಂದು ಬೇಡಿಕೆ ಇದೆ ಅದನ್ನು ರೂಪಿಸಿಕೊಳ್ಳಲಿಕ್ಕೆ ಹೆಚ್ಚು ಅವಕಾಶ ಮಾಡಿಕೊಟ್ಟರೆ ಒಳ್ಳೆಯದು ಎಂದು ಹೇಳುತ್ತೇನೆ. ಇಂಗ್ಲೀಷನ್ನು ಬಿಟ್ಟರೆ ನಾವು ನಡೆಯುವಂತೆಯೇ ಇಲ್ಲ. ಇಂಗ್ಲೀಷನ ಸ್ಥಾನಮಾನ ಈಗ 20 ವರ್ಷಗಳ ಕೆಳಗೆ ನಿರ್ಧಾರವಾಗಿದ್ದರೂ ಕೂಡ ಇವತ್ತು ಇಂಗ್ಲೀಷನ ನಿಜವಾದ ಸ್ಥಾನವೇನು ಮತ್ತು ರಾಷ್ಟ್ರ ಭಾಷೆ ಹಿಂದಿಯ ಸ್ಥಾನವೇನು ಇವನ್ನು ಚೆನ್ನಾಗಿ ಅರಿತುಕೊಂಡು ಇಂಗ್ಲೀಷ ಮತ್ತು ಹಿಂದಿ ಭಾಷೆಗಳನ್ನು ಸರಿಯಾಗಿ ನಮ್ಮ ಶಿಕ್ಷಣದಲ್ಲಿ ಅಳವಡಿಸಿಕೊಂಡು ಹೋಗಬೇಕು. ಇಂಥ ಸಂದರ್ಭದಲ್ಲಿ ನಮ್ಮ ಮಾತೃಭಾಷೆ ಕನ್ನಡವು ಹೆಚ್ಚಿನ ಪರಿಣತಿಯನ್ನು ಹೊಂದಬೇಕಾಗಿದೆ. ಈಗ ಕಾಯಿದೆ ಬಾಷಾಂತರ ನಡೆಯುತ್ತಿದೆ. 17 ಲಕ್ಷ ರೂಪಾಯಿ ಖರ್ಚು ಮಾಡಿ 5 ಸಣ್ಣ ಕಾಯಿದೆಗಳನ್ನು ಭಾಷಾಂತರ ಮಾಡಿಸಿದ್ದಾಗಿದೆ ಆದರೂ ಕೂಡ ಅದು ಎಷ್ಟರ ಮಟ್ಟಿಗೆ ನಮಗೆ ತಿಳಿಯುತ್ತದೆ ಎಂಬುದು ದುಸ್ತರವಾದ ಮಾತು. ಅದೇ ಪ್ರಕಾರ ಜಜ್ಜಮೆಂಟ್ ಬರೆಯುವದು, ಮಿಲಿಟರಿ ಆರ್ಡರ್ಸ್ ಇವುಗಳೆಲ್ಲಾ ಇವೆ. ಆದ್ದರಿಂದ ಮಾತೃಭಾಷೆ ಬಹಳಷ್ಟು ಪರಿಣತಿಯನ್ನು ಬದಲಾವಣೆಯನ್ನು ಹೊಂದಬೇಕಾಗುತ್ತದೆ.

ಇನ್ನು ಮಾಧ್ಯಮಿಕ ಶಿಕ್ಷಣದ ಮಟ್ಟಿಗೆ ಹೇಳಬೇಕಾದರೆ ದುರ್ದೈವದಿಂದ ಈ ಶಿಕ್ಷಣ ಬಹಳಷ್ಟು ವರ್ಷ ಉಪೇಕ್ಷಿಸಲ್ಪಟ್ಟಿದೆ ಎಂದು ಹೇಳಬೇಕಾಗಿದೆ. ಹೊಸ ಗ್ರ್ಯಾಂಟ ಇನ್ ಎಡ್ ಅನುಕರಣ ಮಾಡಬೇಕೇ, ಹಳೇ ಗ್ರ್ಯಾಂಟ ಇನ್ ಎಡ್

ಅನುಕರಣ ಮಾಡಬೇಕು ಎನ್ನುವ ಸಮಸ್ಯೆ ಬಂದು ಇದರಲ್ಲೇ ಕಾಲಹರಣವಾಗುತ್ತಿದೆ ಮತ್ತು ಅನೇಕ ಶಾಲೆಗಳಿಗೆ ಮೆಂಟೆನೆನ್ಸ್ ಗ್ರ್ಯಾಂಟ ಸಿಕ್ಕಿಲ್ಲ. ಹೆಡ್ ಮಾಸ್ಟರುಗಳು ಘಂಟೆಗಟ್ಟಲೇ ಸ್ಕೂಲ ಇನ್ಸಪೆಕ್ಟರ್ ಆಫೀಸಿನ ಮುಂದೆ ಬಂದು ಹೋಗುತ್ತಾ ಇದ್ದಾರೆ. ಎಷ್ಟೊಂದು ಖರ್ಚು ಅವರಿಗೆ ಮತ್ತು ಪರೀಕ್ಷಾ ಸಮಯದಲ್ಲಿ ಎಷ್ಟೊಂದು ವೇಳೆ ಹಾಳು. ಇದರ ಜೊತೆಗೆ ಮ್ಯಾನೇಜಮೆಂಟಿನವರು ಸ್ವಂತ ಬಿಲ್ಡಿಂಗ್ ಕಟ್ಟಿಸಿದರೆ ರೇಂಟ್ ಕೊಡುವುದಿಲ್ಲ ಎಂದು ಹೇಳುತ್ತಾರೆ. ಯಾರು ಕಷ್ಟ ಪಟ್ಟು ಸಾಲ ಮಾಡಿ ಕಟ್ಟಿಸುತ್ತಾರೋ ಅವರಿಗೆ ಬಾಡಿಗೆ ಇಲ್ಲ. ಯಾರೋ ಖಾಸಗಿಯವರು ಕಟ್ಟಿಸಿ ಬಾಡಿಗೆಗೆ ಕೊಟ್ಟಿರುತ್ತಾರೋ ಅವರಿಗೆ ಬಾಡಿಗೆ ಕೊಡುತ್ತೇವೆ ಎನ್ನುವಂತಹ ಪರಿಸ್ಥಿತಿ ಹೋಗಬೇಕು. ಎಲ್ಲರಿಗೂ ಒಂದೇ ತರಹದ ಹೆಚ್ಚಿನ ಲಾಭ ಸಿಕ್ಕಬೇಕು ಮತ್ತು ಅವರು ಸರಿಯಾಗಿ ಶಾಲೆಗಳನ್ನು ನಡೆಸಿಕೊಂಡು ಹೋಗಲಿಕ್ಕೆ ಅವಕಾಶವಾಗುವಂತಹ ಕ್ರಮವನ್ನು ಅನುಸರಿಸುವುದು ಒಳ್ಳೆಯದು ಎಂದು ಹೇಳಬಯಸುತ್ತೇನೆ.

ಇನ್ನು ಸೆಕೆಂಡರಿ ಎಜ್ಯುಕೇಷನ್ ಬಗ್ಗೆ ಹೇಳುವುದಾದರೆ, ಈಗಾಗಲೇ ಈ ಶಿಕ್ಷಣ ಪುಕ್ಕಟ್ಟೆಯಾಗಿ ಸಿಕ್ಕಬೇಕೆಂಬ ತತ್ವವನ್ನು ಅಂಗೀಕಾರ ಮಾಡಿದ್ದೇವೆ. ಇನ್ನು ಸ್ವಲ್ಪ ದಿವಸ ಮೊದಲಿನಂತೆಯೇ ನಡೆದಿದ್ದರೆ ಅದರಿಂದ ಒಳ್ಳೆಯದಾಗುತ್ತಾ ಇತ್ತು ಎನ್ನುವ ಮಾತೂ ಕೂಡ ಇದೆ. ಅಂತೂ ಈ ಶಿಕ್ಷಣವನ್ನು ಪುಕ್ಕಟ್ಟೆಯಾಗಿ ಮಾಡಿದ್ದೇವೆ ಆದರೆ ಅದರ ಜೊತೆಗೆ ಬೆಟರ್‌ಮೆಂಟ್ ಲೆವಿ ಮುಂತಾದವುಗಳನ್ನು ವಸೂಲು ಮಾಡುತ್ತಾ ಇದ್ದೇವೆ. ಅದು ಬಡವರಿಗೂ ಕೂಡ ಬೀಳುತ್ತಾ ಇದೆ. ಇದು ಸಲ್ಲದ ಮಾತು. ಬಡವರಿಗೆ ಶಿಕ್ಷಣ ಪೂರ್ತಿಯಾಗಿ ಪುಕ್ಕಟ್ಟೆ ಸಿಕ್ಕರೆ ಒಳ್ಳೆಯದು, ಬೆಟರ್‌ಮೆಂಟ್ ಲೆವಿಯನ್ನು ಹಾಕಿದರೆ, ಬಡವರಿಂದ ಅದನ್ನು ವಸೂಲು ಮಾಡುವುದಾದರೆ ಪಾಪ ಅವರ ಶಿಕ್ಷಣ ಹೇಗೆ ಮುಂದುವರಿಸುವುದಕ್ಕೆ ಸಾಧ್ಯ? ಈ ಒಂದು ಪರಿಸ್ಥಿತಿ ಹೋಗಬೇಕು. ಬೆಟರ್‌ಮೆಂಟ್ ಲೇವಿ ಹಾಕುವುದು ನಿಲ್ಲಬೇಕು. ಇದರ ಜೊತೆಗೆ ಈಗ ಕೆಲವು ಶಿಕ್ಷಣ ಶಾಲೆಗಳಲ್ಲಿ ಮಿಡ್ಲ್ ಸ್ಕೂಲು ಮತ್ತು ಹೈಸ್ಕೂಲು ಎರಡೂ ಇವೆ. ಅಲ್ಲಿ ಫೀಜನ್ನು ವಸೂಲು ಮಾಡುತ್ತಾ ಇದ್ದಾರೆ, ಅದನ್ನು ಆದಷ್ಟು ಬೇಗ ನಿಲ್ಲಿಸಿದರೆ ಒಳ್ಳೆಯದು, ಈಗ ಅನೇಕ ಕಡೆ ರಿಸಲ್ಟ್ ಚೆನ್ನಾಗಿ ಬರಬೇಕೆಂಬ ದೃಷ್ಟಿಯಿಂದ ಪೀನಲ್ ಕಟ್ಸ್ ಹಾಕುತ್ತಾ ಇದ್ದೀರಿ ಅದು ಒಳ್ಳೆಯದೇ, ಆದರೆ ಸರ್ಕಾರದ ಹೈಸ್ಕೂಲುಗಳಲ್ಲಿ ಎಷ್ಟು ಪರ್ಸೆಂಟೇಜ್ ರಿಸಲ್ಟ್ ಬರುತ್ತದೆ ಎಂಬುದನ್ನು ನೋಡಿದರೆ ಇಲ್ಲೇ ಬಹಳ ಕಡಿಮೆ ದರ್ಜೆಯ ರಿಸಲ್ಟ್ ಬರುತ್ತಾ ಇದೆ. ನಮ್ಮ ದುರ್ದೈವದಿಂದ ಎಂದು ಹೇಳಬೇಕಾಗುತ್ತದೆ. ಇದನ್ನು ತಪ್ಪಿಸಿ ಒಳ್ಳೆಯ ಮಟ್ಟಕ್ಕೆ

ತರಲು ಪೂರ್ಣ ಪ್ರಯತ್ನ ಮಾಡಬೇಕು ಎಂದು ಹೇಳುತ್ತೇನೆ. ಮುಂಚೆ ಸರ್ಕಾರದ ಹೈಸ್ಕೂಲು ಎಂದರೆ ಬಹಳ ಕಡೆ ಅತ್ಯಂತ ಮಾದರಿ ಹೈಸ್ಕೂಲು ಅಂತ ಆಗಿತ್ತು. ಈಗ ಅವು ಅತ್ಯಂತ ಕೆಳಮಟ್ಟಕ್ಕೆ ಇಳಿಯುತ್ತಿವೆ. ಒಂದು ವಿಷಯವನ್ನು ದುರ್ದೈವದಿಂದ ಇಲ್ಲಿ ಹೇಳಬೇಕಾಗಿದೆ. ಪರೀಕ್ಷೆಗಳಲ್ಲಿ ಕಾಫಿ ಮಾಡುವುದು ಇತ್ತೀಚೆಗೆ ಬಹಳ ಜಾಸ್ತಿಯಾಗಿದೆ. ಇದನ್ನು ನಾವು ನಿಲ್ಲಿಸದಿದ್ದರೆ ಸುಮ್ಮನೆ ಪರೀಕ್ಷೆಗಳನ್ನು ಇಡುವುದರಿಂದ ಅರ್ಥವಿಲ್ಲ. ಅದರ ಬಗ್ಗೆ ಸಾಕಷ್ಟು ಕ್ರಮವನ್ನು ತೆಗೆದುಕೊಳ್ಳಬೇಕು. ಪೇಪರ್ಸ್ ಔಟ್ ಆಗುವುದು ಜಾಸ್ತಿಯಾಗಿದೆ. ಎಸ್.ಎಸ್.ಎಲ್.ಸಿ. ಅಷ್ಟೇ ಅಲ್ಲ. ಇದು ಕಾಲೇಜುಗಳಲ್ಲಿಯೂ ನಡೆದಿದೆ. ನಮ್ಮ ಕರ್ನಾಟಕ ಯುನಿವರ್ಸಿಟಿ ಬಿ.ಎ. ಪರೀಕ್ಷೆಗಳಲ್ಲಿಯೂ ಈ ತರಹ ಪರಿಸ್ಥಿತಿ ನಡೆದಿದೆ. ಇದರಿಂದ ವಿದ್ಯಾರ್ಥಿಗಳಿಗೂ ಭೂಷಣವಲ್ಲ, ಸರ್ಕಾರಕ್ಕೂ ಭೂಷಣವಲ್ಲ ಹಾಗೂ ಅಧಿಕಾರಿಗಳಿಗೂ ಭೂಷಣವಲ್ಲವೆಂಬುದಾಗಿ ನಾನು ಹೇಳುತ್ತೇನೆ. ಶಿಕ್ಷಣದ ಬಗ್ಗೆ ನಾವು ಜನತೆ ಮತ್ತು ಸರ್ಕಾರ ಬಹಳವಾಗಿ ಲಕ್ಷ್ಯ ಕೊಡಬೇಕು. ಕಣ್ಣಿನಲ್ಲಿ ಎಣ್ಣೆ ಹಾಕಿಕೊಂಡು ಬಹಳ ಎಚ್ಚರವಾಗಿ ಶಿಕ್ಷಣದ ಕ್ರಮದಲ್ಲಿ ನ್ಯೂನತೆಗೆ ಅವಕಾಶವಿಲ್ಲದಂತೆ ನೋಡಬೇಕು. ಶಿಕ್ಷಣದ ಮಟ್ಟವನ್ನು ಇನ್ನು ಉನ್ನತಮಟ್ಟಕ್ಕೆ ತರಬೇಕು, ಏಕೆಂದರೆ ಈಗ ಶಿಕ್ಷಣದ ಮಟ್ಟ ಬಹಳ ಕೆಳಕ್ಕೆ ಹೋಗುತ್ತಿದೆ. ಶಿಕ್ಷಣಕ್ಕೂ ಮತ್ತು ಜನತೆಗೂ ಹೆಚ್ಚಿನ ಸಂಬಂಧವಿರುವ ಹಾಗೆ ಸರ್ಕಾರದವರು ಮಾಡಬೇಕೆಂದು ಹೇಳಿ, ನನಗೆ ಅವಕಾಶವನ್ನು ಕೊಟ್ಟಂಥ ಅಧ್ಯಕ್ಷರಿಗೆ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

# ಕಲ್ಯಾಣ ರಾಜ್ಯದ ಕನಸುಗಳು

5ನೇ ಮಾರ್ಚ್ 1968

1968-69 ರ ಆಯ - ವ್ಯಯ ಕುರಿತು ಚರ್ಚೆ :

**ಪ್ರಜಾಪ್ರಭುತ್ವದ ಮೂಲ ಗುರಿ ಸಮಾಜವಾದಿ ಸರ್ವ ಸುಖೀ ಕಲ್ಯಾಣ ರಾಜ್ಯ ಸ್ಥಾಪನೆ. ಪ್ರತಿ ಬಜೆಟ್ಟಿನಲ್ಲೂ ಅಧಿಕ ಟ್ಯಾಕ್ಸ್ ಹಾಕುತ್ತ, ಜನರಿಂದ ಹೆಚ್ಚೆಚ್ಚು ಹಣ ಸಂಗ್ರಹಿಸುತ್ತ, ಹೆಚ್ಚೆಚ್ಚು ಖರ್ಚು ಮಾಡಲಾಗುತ್ತಿದೆ. ಎಷ್ಟೋ ಯೋಜನೆಗಳಲ್ಲಿ ಯೋಜಿತ ಗುರಿ ಸಾಧಿಸಲಾಗುತ್ತಿಲ್ಲ; ಯೋಜನೆಗಳಲ್ಲಿ ತೊಡಗಿಸಲಾದ ಬಂಡವಾಳ ತಕ್ಕ ಪ್ರತಿಫಲ ಬರುತ್ತಿಲ್ಲ. ಸರಕಾರಿ ಖಜಾನೆಗೆ ಭಾರವಾಗುವ ಅಧಿಕಾರಶಾಹಿ ಬಿಳಿಯಾನೆಗಳು - ಅನಗತ್ಯ ಕಮೀಟಿ ರಾಜಕೀಯ - ಅಪವ್ಯಯ ಇತ್ಯಾದಿ.**

**ಖ್ಯಾತ ಚಿಂತಕ ಪಂಚಗಾವಿಯವರ ಚಿಂತನೆಗಳು ಗಮನಾರ್ಹ.**

ಸ್ವಾಮಿ, ನಮ್ಮ ಅರ್ಥಮಂತ್ರಿಗಳು ಈ ಸಭೆಯ ವಿಶೇಷ ಮಂಡಿಸಿದ 1968 -69ನೇ ಸಾಲಿನ ಆಯವ್ಯಯ ಪತ್ರಿಕೆಯನ್ನು ಸ್ವಾಗತಿಸುತ್ತಾ ನಾನು ಒಂದೆರಡು ಮಾತುಗಳನ್ನು ಈ ಸಭೆಯ ಮುಂದೆ ಹೇಳಬಯಸುತ್ತೇನೆ. ನಾವು ಪ್ರತಿ ವರ್ಷ ಹೆಚ್ಚು ಹೆಚ್ಚು ಹಣವನ್ನು ಜನರಿಂದ ವಸೂಲು ಮಾಡುತ್ತಿದ್ದೇವೆ. ಮತ್ತು ಹೆಚ್ಚು ಹೆಚ್ಚು ಹಣವನ್ನು ಖರ್ಚು ಮಾಡುತ್ತಿದ್ದೇವೆ. ಆದರೆ ನಾನು ರಾಜ್ಯಪಾಲರು ಭಾಷಣದಲ್ಲಿ ಹೇಳಿದ ಹಾಗೆ ನಮ್ಮ ಮೂಲ ಗುರಿಗಳು ಏರಿವೆ. ಅವುಗಳನ್ನು ಮುಟ್ಟುವುದಕ್ಕೆ ಎಷ್ಟರಮಟ್ಟಿಗೆ ಸಾಧ್ಯವಾಗಿದೆ ಎಂಬುದನ್ನು ನಾವು ನೋಡಬೇಕಾಗಿದೆ. **ನಮ್ಮ ಮೂಲ ಗುರಿ ಸಮಾಜವಾದವನ್ನು ರಚನೆ ಮಾಡಬೇಕು. ಒಂದು ಸುಖೀ ರಾಜ್ಯವನ್ನು ಸ್ಥಾಪನೆ ಮಾಡಬೇಕು ಎಂಬುದು. ವೆಲ್‌ಫೇರ್ ರಾಜ್ಯವನ್ನು, (ಕಲ್ಯಾಣ ರಾಜ್ಯವನ್ನು) ಕಟ್ಟಬೇಕು ಎನ್ನುವ ಗುರಿಯನ್ನಿಟ್ಟುಕೊಂಡು ನಾವು ಹೊರಟಿದ್ದೇವೆ.** ಈ ದೃಷ್ಟಿಯಿಂದ ಒಕ್ಕಲುತನದ ಬಗ್ಗೆ ಸರ್ಕಾರದವರು ಹೆಚ್ಚು ಲಕ್ಷ್ಯ ಕೊಟ್ಟು ಹೆಚ್ಚು ಹಣವನ್ನು ಖರ್ಚು ಮಾಡುತ್ತಿದ್ದಾರೆ. 36 ದೊಡ್ಡ ಹಾಗೂ ಮೀಡಿಯಂ ನೀರಾವರಿ ಯೋಜನೆಗಳನ್ನು ಸರ್ಕಾರದವರು ಕೈಗೊಂಡು ಮುಗಿಸುತ್ತಿದ್ದಾರೆ. ಅನೇಕ ಯೋಜನೆಗಳಿಂದ ಫಲ ಸಿಕ್ಕುತ್ತಿದೆ. ಆದರೆ ಇದರಲ್ಲಿ ಎಷ್ಟರಮಟ್ಟಿಗೆ ನಿಜವಾದ ಪ್ರಗತಿ ಆಗಿದೆ ಎನ್ನುವುದನ್ನು ನೋಡಬೇಕು.

**ಯೋಜಿತ ರೀತಿಯಲ್ಲಿ ಯೋಜನೆಗಳ ಗುರಿ ಸಾಧಿಸಲಾಗಿಲ್ಲ :** ಯೋಜನೆಗಳ ಮುಖಾಂತರ ಲಕ್ಷಾಂತರ ಎಕರೆ ಜಮೀನನ್ನು ನೀರಾವರಿ ಮಾಡಬೇಕೆಂದು ಏನು ಗುರಿಯನ್ನು ಇಟ್ಟುಕೊಂಡಿದ್ದೇವೋ ಆ ಗುರಿಯನ್ನು ಸಾಧನೆ ಮಾಡುವುದಕ್ಕೆ ಸಾಧ್ಯವಾಗಿಲ್ಲ. ಇದಕ್ಕೆ ನಾನಾ ಕಾರಣಗಳುಂಟು ಭೂಮಿ ಸರಿಯಾಗಿರುವುದಿಲ್ಲ. ಇನ್ನು ಇತರ ಅನೇಕ ಸೌಕರ್ಯಗಳನ್ನು ಒದಗಿಸುವುದಕ್ಕೆ ಸಾಧ್ಯವಾಗಿಲ್ಲ. ಮತ್ತು ದೊಡ್ಡ ದೊಡ್ಡ ಯೋಜನೆಗಳ ಕೆಲಸಗಳು ಏನು ನಡೆಯುತ್ತಿವೆ. ಅವುಗಳನ್ನ ಯೋಜಿತ ರೀತಿಯಲ್ಲಿ ಪೂರೈಸಿ ಗುರಿ ಇಟ್ಟುಕೊಂಡಿರುವ ಹಾಗೆ ಪ್ರಗತಿಯನ್ನು ಸಾಧನೆ ಮಾಡುವುದಕ್ಕೆ ಸಾಧ್ಯವಾಗಿಲ್ಲ. ಅನೇಕ ದೃಷ್ಟಿಯಿಂದ ಕಂಟ್ರಾಕ್ಟರುಗಳ ಅಲಕ್ಷ್ಯ, ಅಧಿಕಾರಿಗಳ ದುರ್ಲಕ್ಷ್ಯ, ಸರಿಯಾಗಿ ಕೆಲಸ ಮಾಡದೇ ಇರುವುದು, ಜನರೂ ಕೂಡ ಆ ಬಗ್ಗೆ ಸರಿಯಾದ ತಿಳುವಳಿಕೆಯನ್ನು ಹೊಂದದೆ ಅದರ ಲಾಭವನ್ನು ಪಡೆಯುವುದಕ್ಕೆ ಹೋಗದೆ ಇರುವುದು. ಈ ರೀತಿಯಾಗಿ ನೀರಾವರಿಯ ವಿಷಯದಲ್ಲಿ ನಾವು ಏನೊಂದು ಗುರಿಯನ್ನು ಸಾಧನೆ ಮಾಡಬೇಕೆಂದು ಉದ್ದೇಶವನ್ನು ಇಟ್ಟುಕೊಂಡಿದ್ದೇವೋ ಅದನ್ನು ಸಾಧನೆ ಮಾಡುವುದಕ್ಕೆ ಸಾಧ್ಯವಾಗಿಲ್ಲ. ಪೂರ್ಣ ರೀತಿಯಿಂದ ಜನರು ಈ ಯೋಜನೆಗೆ ಸಹಕಾರ ಮಾಡುವ ಹಾಗೆ ಅವರನ್ನು ವಿಶ್ವಾಸಕ್ಕೆ ತೆಗೆದುಕೊಂಡು ಯೋಜನೆಗೆ ಕೊಟ್ಟಂತಹ ಹಣ ಪೂರ್ತಿಯಾಗಿ ಸದ್ವಿನಿಯೋಗವಾಗಿ ಯೋಜನೆಯನ್ನು ಕಾರ್ಯಗತ ಮಾಡುವಂತಹ ಒಂದು ವ್ಯವಸ್ಥೆ ಆಗಬೇಕು. ಈಗಾಗಲೇ ಕಾರ್ಯಗತವಾಗಿರತಕ್ಕ ನೀರಾವರಿ ಯೋಜನೆಗಳು ಏರಿವೆ ಅವುಗಳಲ್ಲಿ ಯಾವುದೇ ನೀರಾವರಿ ಯೋಜನೆಯನ್ನು ತೆಗೆದುಕೊಂಡರೂ ಅವುಗಳಿಂದ ಸರ್ಕಾರಕ್ಕೆ ಸಾಕಷ್ಟು ಪ್ರತಿಫಲ ಬರುತ್ತಾ ಇಲ್ಲ. ಪ್ರತಿಯೊಂದು ಯೋಜನೆಗೂ ಸಹ ಸರ್ಕಾರದವರು ಹಣ ಖರ್ಚು ಮಾಡುವಾಗ ಮುಂದೆ ಆ ಯೋಜನೆಯಿಂದ ಸರ್ಕಾರಕ್ಕೆ ಆದಾಯ ಬರುವಂತಿರಬೇಕಲ್ಲದೆ ಲುಕ್ಸಾನಾಗಬಾರದು, ಇದುವರೆಗೆ ಕಟ್ಟಿದಂಥ ಯೋಜನೆಗಳಿಂದ ಆದಾಯ ಬಂದರೆ ಬೇರೆ ಯೋಜನೆಗಳನ್ನು ತೆಗೆದುಕೊಳ್ಳುವುದಕ್ಕೆ ಅನುಕೂಲವಾಗುತ್ತದೆ. ಪ್ರತಿ ವರ್ಷ ಸರ್ಕಾರದವರು ಯೋಜನೆಗಳ ಮೆಂಟೆನನ್ಸ್‌ಗಾಗಿ 1-5 ಕೋಟಿ ರೂಪಾಯಿಗಳಷ್ಟು ಖರ್ಚು ಮಾಡುತ್ತಿದ್ದಾರೆ. ಪ್ರತಿಯೊಂದು ನೀರಾವರಿ ಯೋಜನೆಯೂ ಸಹ ಸ್ವಾವಲಂಬಿಯಾಗಿ ನಡೆಯುತ್ತಾ ಹೋಗಬೇಕು. ಇಡೀ ಮೈಸೂರು ರಾಜ್ಯದಲ್ಲಿ ತೆಗೆದುಕೊಂಡರೆ ಅನೇಕ ಯೋಜನೆಗಳಿಂದ ಸರ್ಕಾರಕ್ಕೆ ಆದಾಯವೇ ಬರುತ್ತಿಲ್ಲ. ನಮ್ಮ ಕಡೆಯ ಗೋಕಾಕ್ ಕೆನಾಲ್‌ನ್ನು ಘಟಪ್ರಭಾ ಯೋಜನೆಯಲ್ಲಿಯೇ ಸೇರಿಸಿದ್ದರಿಂದ ಸರ್ಕಾರದವರು ಹಾಕುವ ಬಂಡವಾಳಕ್ಕೆ ತಕ್ಕ ಆದಾಯ ಬರುವುದಿಲ್ಲದೆನ್ನುವುದು ಖಚಿತವಾಯಿತು. ಆದ್ದರಿಂದ ಇನ್ನು ಮುಂದೆ ಸರ್ಕಾರದವರು ಸ್ವಾವಲಂಬಿಯಾಗಿ ನಡೆದುಕೊಂಡು ಹೋಗತಕ್ಕ ಯೋಜನೆಗಳನ್ನು ಹೆಚ್ಚಾಗಿ ಕೈಕೊಳ್ಳಬೇಕು.

**ಬೆಟರ್‌ಮೆಂಟ್ ಲೆವಿ ಸಮಸ್ಯೆಗಳು :** ಇನ್ನು ಬೆಟರ್‌ಮೆಂಟ್ ಲೆವಿಯ ಬಗ್ಗೆ ಹೇಳುವುದಾದರೆ, ಬೆಟರ್‌ಮೆಂಟ್ ಲೆವಿಯನ್ನು ವಸೂಲು ಮಾಡಬೇಕೆಂದು ಸರ್ಕಾರದವರು ಆ ಬಗ್ಗೆ ಒಂದು ಕಾಯಿದೆಯನ್ನು ಜಾರಿಗೆ ತಂದರು. ಒಂದು ಎಕರೆಗೆ ಒಂದು ಸಾವಿರ ರೂಪಾಯಿಗಳನ್ನು ಬೆಟರ್‌ಮೆಂಟ್ ಟ್ಯಾಕ್ಸ್ ಹಾಕಬೇಕೆಂದು ಕಾಯಿದೆ ಯಾಯಿತು. ಜನರಿಂದ ಬಹಳ ಜಾಸ್ತಿಯಾಯಿತ್ತೆಂದು ಸರ್ಕಾರಕ್ಕೆ ಮನವಿಗಳು ಬಂದಿದ್ದರಿಂದ ಆ ಕಾಯಿದೆಯನ್ನು ತಿದ್ದುಪಡಿ ಮಾಡಿ ಒಂದು ಸಾವಿರದಿಂದಾ 800 ಕ್ಕೆ ಇಳಿಸಿದರು. ಈಗ ಪುನಃ 500 ರೂಪಾಯಿಗಳಿಗೆ ಹೆಚ್ಚಿಸಬೇಕೆಂದು ಸರ್ಕಾರದವರು ಯೋಜನೆ ಮಾಡುತ್ತಿದ್ದಾರೆಂದು ತಿಳಿದು ಬಂತು . ಕಾಯಿದೆಯನ್ನು ಪಾಸ್ ಮಾಡುವುದಕ್ಕೆ ಮೊದಲು ಅದರ ಪೂರ್ವಾಪರ ಯೋಜನೆ ಮಾಡಿ ನಂತರ ಕಾಯಿದೆಯನ್ನು ಜಾರಿಗೆ ತರಬೇಕು. ಇಲ್ಲದಿದ್ದರೆ ಗೊಂದಲಮಯ ಪರಿಸ್ಥಿತಿಗೆ ಕಾರಣ ವಾಗುತ್ತದೆ. ಒಂದು ಕಾಯಿದೆಯನ್ನು ಮೇಲಿಂದ ಮೇಲೆ ಬದಲಾವಣೆ ಮಾಡುವ ಮೊದಲು ಒಮ್ಮೆಗೇ ಸರಿಯಾದ ರೀತಿಯಲ್ಲಿ ಜಾರಿಗೆ ತರುವುದು ಒಳ್ಳೆಯದು. ಇವತ್ತಿನ ದಿವಸ ನಮ್ಮ ರಾಜ್ಯದಲ್ಲಿ ನೀರಾವರಿ ಯೋಜನೆಗಳಿಂದ ಮತ್ತು ವಿದ್ಯುಚ್ಛಕ್ತಿ ಯೋಜನೆಗಳಿಂದ ನಮ್ಮ ರೈತರಿಗೆ ಸಾಕಷ್ಟು ಲಾಭ ಸಿಗುತ್ತಿದೆ. ಎಲ್ಲಾ ಕಡೆಗಳಲ್ಲೂ ಸಹಾ ಸರ್ಕಾರದವರು ನೀರಾವರಿ ಬಾವಿಗಳಿಗೆ ವಿದ್ಯುಚ್ಛಕ್ತಿಯನ್ನು ಒದಗಿಸುತ್ತಿದ್ದಾರೆ. ಬಾವಿಗಳನ್ನು ತೊಡಿಸಲು ಸಾಕಷ್ಟು ಹಣವನ್ನು ಸಾಲವಾಗಿ ಕೊಡುತ್ತಿದ್ದಾರೆ. ಈ ಕಾರಣಗಳಿಂದ ಆಹಾರ ಧಾನ್ಯಗಳ ಉತ್ಪತ್ತಿ ಮತ್ತು ಕಚ್ಚಾ ಮಾಲುಗಳ ಉತ್ಪತ್ತಿ ಜಾಸ್ತಿ ಯಾಗುತ್ತದೆ. ಒಕ್ಕಲುತನದ ಬಗ್ಗೆ ಹೇಳುವುದಾದರೆ ಸರ್ಕಾರದವರು ಎಲ್ಲಾ ರೀತಿಯ ಸಹಾಯವನ್ನು ಮಾಡುತ್ತಿದ್ದಾರೆ. ಅದೇ ಪ್ರಕಾರವಾಗಿ ರೈತರಿಗೆ ಕೆಲವು ತೊಂದರೆಗಳು ಸಹ ಆಗುತ್ತಿವೆ. ಆ ತೊಂದರೆಗಳನ್ನು ಪರಿಹಾರ ಮಾಡುವುದು ಸರ್ಕಾರದವರ ಕರ್ತವ್ಯ. ರೈತರಿಗೆ ಆಗುತ್ತಿರುವ ತೊಂದರೆಗಳನ್ನು ತಪ್ಪಿಸಲು ಸಾಕಷ್ಟು ಪ್ರಯತ್ನವನ್ನು ಸರ್ಕಾರದವರು ಮಾಡಿದರೂ ಸಹ ಅದು ಸಾಕಷ್ಟು ರೀತಿಯಿಂದ ಯಶಸ್ವಿಯಾಗಿಲ್ಲ. ಉದಾಹರಣೆಗೆ ಹೇಳುವುದಾದರೆ ಆಹಾರಧಾನ್ಯಗಳ ಮೇಲೆ ಕಂಟ್ರೋಲ್ ಹಾಕಿ, ಆ ಮೂಲಕ ರೈತರಿಗೆ ಆಗುತ್ತಿರುವ ತೊಂದರೆಯನ್ನು ಆದಷ್ಟು ಬೇಗ ತಪ್ಪಿಸುವುದು. ಒಳ್ಳೆಯದೆಂದು ನನ್ನ ಅಭಿಪ್ರಾಯ. ಈ ಮನೆಯಲ್ಲಿ ಇದೇ ವಿಚಾರದಲ್ಲಿ ಮಾನ್ಯ ಸದಸ್ಯರುಗಳು ಅನೇಕರು ಲೆವಿಯ ವಸೂಲಿಯಿಂದ ಆಗುತ್ತಿರುವ ತೊಂದರೆಗಳನ್ನು ಸರ್ಕಾರದ ಗಮನಕ್ಕೆ ತರುವುದಕ್ಕೆ ಪ್ರಯತ್ನ ಪಟ್ಟರು. ಸರ್ಕಾರದವರು ಹೇಳುವ ಮಾರುವ ಅಂತರದಲ್ಲಿ ಇಷ್ಟೊಂದು ವ್ಯತ್ಯಾಸ ಇರುವುದನ್ನು ತಪ್ಪಿಸುವುದಕ್ಕೆ ಸಾಧ್ಯವಿಲ್ಲವೆಂದು ಆಹಾರ ಖಾತೆಯ ಮಂತ್ರಿಗಳು ಹೇಳಿದರು. ಈ ರೀತಿಯ ವ್ಯತ್ಯಾಸವನ್ನು ತಪ್ಪಿಸುವುದಕ್ಕೆ ಸಾಧ್ಯವಿಲ್ಲದಿದ್ದ ಮೇಲೆ ಈ ಪದ್ಧತಿಯನ್ನೇ ಕೈ

ಬಿಡುವುದು ಒಳ್ಳೆಯದೆಂದು ನನಗನಿಸುತ್ತದೆ. ಕಾರ್ಖಾನೆಗಳಲ್ಲಿರುವ ನೌಕರರಿಗೆ ಮತ್ತು ಸರ್ಕಾರಿ ನೌಕರರಿಗೆ ಆಹಾರವನ್ನು ಒದಗಿಸುವುದು ಸರ್ಕಾರದ ಕರ್ತವ್ಯವಾದರೆ ಬಹಿರಂಗ ಮಾರುಕಟ್ಟೆಯಲ್ಲಿ ಕೊಂಡು ಹಂಚುವುದು ಒಳ್ಳೆಯದು. ಇದರಿಂದ ರೈತರಿಗೆ ಅನುಕೂಲ ಮಾಡಿದಂತಾಗುತ್ತದೆ. ಇದು ಸಾಧ್ಯವಾಗದಿದ್ದರೆ ಅಮೇರಿಕಾ ಮುಂತಾದ ಬೇರೆ ರಾಷ್ಟ್ರಗಳಿಂದ ಬರುವ ಆಹಾರವನ್ನು ಮಾತ್ರ ಸರ್ಕಾರಿ ನೌಕರರಿಗೆ ಮತ್ತು ಇತರರಿಗೆ ಹಂಚಬಹುದು. ಆಹಾರದ ಉತ್ಪಾದನೆ ನಮ್ಮ ರಾಜ್ಯದಲ್ಲಿ ಹೆಚ್ಚಬೇಕಾದರೆ ಲೆವಿ ಪದ್ಧತಿ ತೊಡಲು ಹೋಗಬೇಕು. ಸರ್ಕಾರದವರು ರೈತರಿಂದ ಕೊಂಡು ಮಾರುವ ಬೆಲೆಯಲ್ಲಿ 100 ಕ್ಕೆ 40 ರಷ್ಟು ಹಣವನ್ನು ವ್ಯಯ ಮಾಡುತ್ತಿರುವುದು ಸರಿಯಲ್ಲವೆಂದು ಹೇಳಬಯಸುತ್ತೇನೆ. **ಕೋಟ್ಯಾಂತರ ರೂಪಾಯಿಗಳನ್ನು ಆಹಾರದ ಇಲಾಖೆಗಾಗಿ ಸರ್ಕಾರದವರು ಖರ್ಚು ಮಾಡುತ್ತಿದ್ದಾರೆ. ಮತ್ತು ಬಂಡವಾಳವನ್ನು ತೊಡಗಿಸುತ್ತಿದ್ದಾರೆ. ಇದೇ ಹಣವನ್ನು ಒಕ್ಕಲುತನಕ್ಕೆ ಉಪಯೋಗಿಸಿದರೆ, ರೈತರಿಗೆ ಬೇಕಾಗುವ ಉಪಕರಣಗಳನ್ನು ಹಂಚಿದರೆ ಹೆಚ್ಚು ಆಹಾರಧಾನ್ಯವನ್ನು ಬೆಳೆಯುವುದಕ್ಕೆ ಪ್ರೋತ್ಸಾಹ ಕೊಟ್ಟಂತೆ ಆಗುತ್ತದೆ. ಅಲ್ಲದೇ ಮೈಸೂರು ರಾಜ್ಯ ಆಹಾರದ ವಿಷಯದಲ್ಲಿ ಸ್ವಾವಲಂಬಿಯಾಗುವುದಕ್ಕೆ ಪ್ರೋತ್ಸಾಹ ಕೊಟ್ಟಂತೆ ಆಗುತ್ತದೆ. ಹೆಚ್ಚು ಆಹಾರ ಧಾನ್ಯಗಳನ್ನು ಬೆಳೆದು ಬೇರೆ ರಾಜ್ಯಗಳಿಗೂ ಒದಗಿಸುವುದಕ್ಕೆ ಅವಕಾಶವಾಗುತ್ತದೆ. ಮತ್ತು ಇದರಿಂದ ಹೆಚ್ಚು ಲಾಭ ಬರುತ್ತದೆ.** ಮುಸುಕಿನ ಜೋಳದ ಬೆಳೆ ಮತ್ತು ಸುಧಾರಿತ ಬೀಜಗಳನ್ನು ಉಪಯೋಗಿಸಿ ರೈತರು ಇವತ್ತಿನ ದಿವಸ ಹೆಚ್ಚು ಹೆಚ್ಚು ಆಹಾರ ಧಾನ್ಯಗಳನ್ನು ಬೆಳೆಯುತ್ತಿದ್ದಾರೆ. ಇದೇ ರೀತಿ ಅತ್ಯಂತ ದೊಡ್ಡ ಪ್ರಮಾಣದಲ್ಲಿ ಬೆಳೆ ಬೆಳೆದರೆ ಇನ್ನು ಒಂದೆರಡು ವರ್ಷಗಳಲ್ಲಿಯೇ ಬೇರೆ ರಾಜ್ಯಗಳಿಗೆ ಆಹಾರ ಧಾನ್ಯಗಳನ್ನು ಒದಗಿಸಬಹುದು. ಆದ್ದರಿಂದ ಸರ್ಕಾರದವರು ಒಕ್ಕಲುತನದ ಕಡೆಗೆ ಹೆಚ್ಚು ಹೆಚ್ಚು ಲಕ್ಷ್ಯ ಕೊಟ್ಟು, ಹೆಚ್ಚು ಆಹಾರ ಧಾನ್ಯಗಳನ್ನು ಬೆಳೆಯುವಂತೆ ತಕ್ಕ ಅನುಕೂಲಗಳನ್ನು ಒದಗಿಸಿ ಕೊಡುವುದು ಅವಶ್ಯಕವಿದೆ.

**ಪರಿಹಾರ ಕಾಮಗಾರಿ ನೀತಿ :** ಇನ್ನು ಪರಿಹಾರ ಕಾಮಗಾರಿಗಳ ಬಗ್ಗೆ ಸ್ವಲ್ಪ ಹೇಳುತ್ತೇನೆ. ಸರ್ಕಾರದವರು ಪರಿಹಾರ ಕಾಮಗಾರಿಗಳನ್ನು ತೆಗೆದುಕೊಳ್ಳುವಾಗ ಒಂದು ಸರಿಯಾದ ನೀತಿಯನ್ನು ಅನುಸರಿಸುತ್ತಿಲ್ಲ, ನಮ್ಮ ರಾಜ್ಯದ ಕೆಲವು ಕಡೆಗಳಲ್ಲಿ ಗೋ ಕಟ್ಟೆಗಳನ್ನು ಕಟ್ಟಿಸಬೇಕೆಂದು ಆ ಬಗ್ಗೆ ಪ್ಲ್ಯಾನ್ ಮತ್ತು ಎಸ್ಟಿಮೇಟ್‌ಗಳು ತಯಾರಾದವು. 10-15 ದಿವಸಗಳ ಕೆಳಗೆ ಸರ್ಕಾರದವರು ಒಂದು ಸರ್ಕ್ಯುಲರ್

ಹೊರಡಿಸಿ ಗೋ ಕಟ್ಟೆಗಳನ್ನು ಸಧ್ಯಕ್ಕೆ ತೆಗೆದುಕೊಳ್ಳುವುದು ಬೇಡ ಎಂದು ತೀರ್ಮಾನಿಸಿದ್ದಾರೆ. ಯಾವುದಾದರೂ ಪರಿಹಾರ ಕಾಮಗಾರಿಗಳನ್ನು ತೆಗೆದುಕೊಳ್ಳಬೇಕೆಂದು ಆ ಬಗ್ಗೆ ಪ್ಲ್ಯಾನ್ ಮತ್ತು ಎಸ್ಟಿಮೇಟ್ ತಯಾರಾದ ಮೇಲೆ, ಆ ಕಾಮಗಾರಿ ಕೆಲಸವನ್ನು ತಪ್ಪಿಸಿ ಬೇರೆ ಕಾಮಗಾರಿ ಕೆಲಸವನ್ನು ತೆಗೆದುಕೊಳ್ಳುತ್ತಾರೆ. ಮತ್ತೇ ಪ್ಲ್ಯಾನ್ ಮತ್ತು ಎಸ್ಟಿಮೇಟ್ ತಯಾರಾಗಬೇಕಾಗುತ್ತದೆ. ಪ್ಲ್ಯಾನ್ ಮತ್ತು ಎಸ್ಟಿಮೇಟ್ ತಯಾರಾಗುವುವವರೆಗೂ ಕೆಲಸ ತೆಗೆದುಕೊಳ್ಳಲಿಕ್ಕಾಗುವುದಿಲ್ಲ. ಇದರಿಂದ ಕೆಲಸ ತೆಗೆದುಕೊಳ್ಳುವುದು ನಿಧಾನವಾಗಿ ಜನರಿಗೆ ತೊಂದರೆಯಾಗುತ್ತದೆ. ಆದ್ದರಿಂದ ಸರ್ಕಾರದವರು ಮೇಲಿಂದ ಮೇಲೆ ತಮ್ಮ ಧೋರಣೆಗಳನ್ನು ಬದಲಾವಣೆ ಮಾಡಿ ಸರ್ಕ್ಯುಲರ್‌ಗಳನ್ನು ಹೊರಡಿಸುವುದು ಸರಿಯಲ್ಲ. ಆದ್ದರಿಂದ ಜನರಿಗೆ ಸಾಕಷ್ಟು ಪರಿಹಾರ ಕಾಮಗಾರಿ ಕೆಲಸಗಳು ಸಿಗುತ್ತಿಲ್ಲ. ಪ್ಲ್ಯಾನ್ ಮತ್ತು ಎಸ್ಟಿಮೇಟ್‌ಗಳನ್ನು ಇಂಜನಿಯರ್ ಅವರು ತಯಾರು ಮಾಡುವುದರಿಂದ, ಆಗಾಗ್ಗೆ ಬದಲಾವಣೆ ಮಾಡಿದರೆ ವಿನಾಕಾರಣ ಹಣ ಖರ್ಚಾಗುತ್ತದೆ. ಇನ್ನು ಮುಂದೆ ಈ ರೀತಿಯಾಗದಂತೆ ಸರ್ಕಾರದವರು ನೋಡಿಕೊಳ್ಳಬೇಕು.

**ಸರಕಾರಿ ಖಜಾನೆಗೆ ಭಾರವಾಗುವ ಬಿಳಿಯಾನೆಗಳು :** ಇನ್ನು ಆಡಳಿತದ ಬಗ್ಗೆ ಸರ್ಕಾರದವರು ಏನು ಹಣ ಖರ್ಚು ಮಾಡುತ್ತಿದ್ದಾರೆ, ಆ ಹಣವನ್ನು ಎಷ್ಟೋ ರೀತಿಯಿಂದ ಕಡಿಮೆ ಮಾಡುವುದಕ್ಕೆ ಸಾಧ್ಯವಿದೆ ಎಂಬುದನ್ನು ಹೇಳುತ್ತೇನೆ. ಒಂದೇ ವಿಭಾಗದಲ್ಲಿ ಹಲವಾರು ಅಧಿಕಾರಿಗಳನ್ನು ನೇಮಕ ಮಾಡುತ್ತಿದ್ದಾರೆ. ವ್ಯವಸಾಯದ ಇಲಾಖೆಯನ್ನೇ ತೆಗೆದುಕೊಂಡರೆ, ಪ್ರತಿಯೊಂದು ತಾಲ್ಲೂಕಿನಲ್ಲೂ ಸಹ ಕಾಟನ್ ವಿಭಾಗಕ್ಕೆ ಒಬ್ಬ ಆಫೀಸರ್, ಶುಗರ್ ವಿಭಾಗಕ್ಕೆ ಒಬ್ಬ ಆಫೀಸರ್, ಟೊಬ್ಯಾಕೋ ವಿಭಾಗಕ್ಕೆ ಒಬ್ಬ ಆಫೀಸರ್, ಆ ಭಾಗದಲ್ಲಿ ಇರಿಗೇಷನ್ ಇದ್ದರೆ ಅಲ್ಲಿಗೆ ಒಬ್ಬ ಆಫೀಸರ್ ಈ ಪ್ರಕಾರ ಒಂದೊಂದು ತಾಲ್ಲೂಕಿಗೂ 7-8 ಜನ ಅಧಿಕಾರಿಗಳನ್ನು ನೇಮಕ ಮಾಡುತ್ತಿದ್ದೀರಿ, ಅಲ್ಲದೇ ಪ್ರತಿಯೊಬ್ಬ ಆಫೀಸರ್ ಕೈ ಕೆಳಗೆ ಒಬ್ಬ ಎರಡನೇಯ ದರ್ಜೆಯ ಗುಮಾಸ್ತ, ಒಬ್ಬ ಜವಾನ್ ಇರುತ್ತಾರೆ. ಈ ಆಫೀಸರ್‌ಗಳು ಯಾವಾಗಲೂ ತಾಲ್ಲೂಕ್‌ನಲ್ಲಿಯೇ ಇರುತ್ತಾರೆಯೇ ಹೊರತು ಹಳ್ಳಿಗಳಿಗೆ ಹೋಗಿ ನೋಡುವುದಿಲ್ಲ. ಆದಷ್ಟು ಕಡಿಮೆ ಆಪೀಸರ್‌ಗಳನ್ನು ನೇಮಕ ಮಾಡಿದರೆ ಸರ್ಕಾರಕ್ಕೆ ಹಣ ಉಳಿತಾಯವಾಗುತ್ತದೆ.

ಅಧಿಕಾರಿಗಳು ಹಳ್ಳಿಗಳಿಗೆ ಹೋಗಬೇಕಾದರೆ ಜೀಪು ಬೇಕಾಗುತ್ತದೆ. ಹಳ್ಳಿಯವರನ್ನು ಅವರು ಪ್ರತ್ಯಕ್ಷವಾಗಿ ಭೇಟಿಮಾಡಲಾಗುವುದಿಲ್ಲ. ತಾಲ್ಲೂಕು

ಮಟ್ಟದಲ್ಲಿ ಕೆಲಸ ಮಾಡಬೇಕಾದರೂ ಇವರು ರೈತರ ಕಡೆಗೆ ಹೋಗುವುದಿಲ್ಲ. ಇದನ್ನು ನಾವು ಇಂದು ತಪ್ಪಿಸಬೇಕು. ಇದರಿಂದ ಒಬ್ಬ ಆಫೀಸರ್‌ನ್ನು ಒಂದೊಂದು ಹಳ್ಳಿಗೆ ಕೊಟ್ಟರೆ ಅವರ ಪೂರ್ಣ ಸೇವೆಯನ್ನು ತೆಗೆದುಕೊಳ್ಳುವುದಕ್ಕೆ ಸಾಧ್ಯವಾಗುತ್ತದೆ. ಮಲ್ಟಿಪ್ಲಿಸಿಟಿ ಆಫ್ ಆಫೀಸರನ್ನು ತಪ್ಪಿಸುವುದಕ್ಕೆ ಪ್ರಯತ್ನ ಮಾಡಬೇಕು ನಾನು ಹಿಂದೆ ಹೇಳಿದಂತೆ ಎನ್.ಇ.ಎಸ್., ಡೆವಲಪ್‌ಮೆಂಟ್ ಡಿಪಾರ್ಟಮೆಂಟ್ ಇವನ್ನೆಲ್ಲಾ ಆಹಾಗ ಇಲಾಖೆಯಂತೆ ಅಬಾಲಿಶ್ ಮಾಡಿದರೆ ಒಳ್ಳೆಯದು ಎಂದು ನನಗನಿಸುತ್ತದೆ. ಈ ಎನ್.ಇ.ಎಸ್. ಅಧಿಕಾರಿಗಳು ನಿರುಪಯೋಗವಾಗಿ ಹಣವನ್ನು ಖರ್ಚು ಮಾಡುತ್ತಿದ್ದಾರೆ. ಈಗ ಸೋಶಿಯಲ್ ಎಜ್ಯುಕೇಶನ್ ಆಫೀಸರ್, ಇಂಡಸ್ಟ್ರೀಯಲ್ ಎಕ್ಸ್‌ಟೆನಶನ್ ಆಫೀಸರ್ ಇವರೆಲ್ಲಾ ಅನಗತ್ಯ. ಯಾರಿಗೆ ಇಂಡಸ್ಟ್ರೀಸ್ ಬಗ್ಗೆ ಏನೂ ಗೊತ್ತಿಲ್ಲದಿರುತ್ತಾರೋ, ಅಂಥವರಿಗೆ ಕೊಟ್ಟು ಎಲ್ಲಾ ಹಾಳು ಮಾಡುತ್ತಿದ್ದಾರೆ. ಇಂಥವರನ್ನು ಇಲ್ಲಿ ತಪ್ಪಿಸುವುದಕ್ಕೆ ನಾವು ಪ್ರಯತ್ನ ಮಾಡಬೇಕು. ಇದರಿಂದ ನಮ್ಮ ಹಣವನ್ನು ಸರಿಯಾಗಿ ಉಪಯೋಗ ಮಾಡಿದಂತೆ ಆಗುವದಿಲ್ಲ. **ಇವತ್ತು ಯಾರದೋ ದುಡ್ಡು ಎಂಬ ಮನೋಭಾವದಿಂದ ಸರ್ಕಾರದವರು ದುಡ್ಡನ್ನು ಖರ್ಚನ್ನು ಮಾಡಿದರೆ, ಅದು ಸರಿಯಾಗುವುದಿಲ್ಲ. ಇದರಿಂದ ಜನರಲ್ಲಿ ಒಂದು ರೀತಿಯ ತಪ್ಪು ಕಲ್ಪನೆ ಬರುವುದು ಸಹಜ.**

**ಸರಕಾರಕ್ಕೆ ಭಾರವಾಗುವ ಅನಗತ್ಯ ಕಮಿಟಿಗಳು :** ಇನ್ನೊಂದು ಮಾತು ಸಮಾಜದಲ್ಲಿ ಬೆಳೆಯುತ್ತಾ ಇದೆ. ಏನೆಂದರೆ ಈ ಕಮೀಟಿಗಳು, ಅದಕ್ಕೆ ಒಬ್ಬ ಚೇರಮನ್ ಮಾಡುವುದು ಒಬ್ಬ ಸೆಕ್ರೆಟರಿ ಮಾಡುವುದು ಅವರು ಅನೇಕ ರೀತಿಯ ಕಾನ್ಫರೇನ್ಸ್ ಸಮಾರಂಭಗಳನ್ನು ಬೆಳೆಸುವುದು, ಹಳ್ಳಿಗಳಲ್ಲಿ ನೋಡಿದರೆ, ಪಂಚಾಯತಿ ಸದಸ್ಯರು, ಸೊಸೈಟಿಯ ಸದಸ್ಯರು, ಹಾಗೂ ಇನ್ನು ಅನೇಕ ರೀತಿಯ ಸದಸ್ಯರನ್ನೆಲ್ಲಾ ಉಂಟು ಮಾಡಿ ಇವತ್ತು ಅನೇಕ ಜನರು ಮನೆಯ ಕೆಲಸ ಬಿಟ್ಟು ಊರು ಊರು ಅಲೆಯುತ್ತಿರಬೇಕಾಗುತ್ತದೆ. ಅದು ಅಷ್ಟಕ್ಕೆ ನಿಲ್ಲುವುದಿಲ್ಲ. ಅವರು ಆ ರೀತಿ ಹೋಗುವಾಗ ಅವರಿಗೆ ಖರ್ಚಿಗೆ ಬೇರೆ ಬೇರೆ ತರದ ವ್ಯವಸ್ಥೆ ಮಾಡಬೇಕಾಗುತ್ತದೆ. ಇದರಿಂದ ಅವರು ಒಳ್ಳೆಯ ಹಣವನ್ನು ದುರುಪಯೋಗ ಮಾಡುವ ಸಂಭವ ವಿದೆ. ಈ ರೀತಿ ಸೋಮಾರಿಗಳನ್ನು ಬೆಳೆಸುತ್ತಿದ್ದೇವೆ. ಆದ್ದರಿಂದ, ಈ ಕಾನ್ಫರೆನ್ಸಾ, ಕಮೀಟಿ, ಅಲ್ಲಲ್ಲಿ ಸೆಮಿನಾರ್ ಮಾಡುವುದು ಇದೆಲ್ಲಾ ಕಡಿಮೆ ಮಾಡಬೇಕು. ಮತ್ತು ಇದಕ್ಕೆ ಎಂದೂ ಮಹತ್ವ ಕೊಡಬಾರದು.ಈವತ್ತು ಇದು ಸ್ವಾಮಿಗಳ ಆಚಾರ್ಯರ ರೀತಿಯಲ್ಲಿ ಆಗಿದೆ. ಎಲ್ಲೋ ನಾಲ್ಕು ರೀತಿಯ ಫಂಡನ್ನು ಕೂಡಿಸಿಕೊಂಡು ಇವರಿಗೆ

ಹಂಚುವದು. ಇದರಿಂದ ಅವರು ದೊಡ್ಡ ಮನುಷ್ಯನಾಗಿದ್ದಾರೆ ಅದನ್ನು ಆದಷ್ಟು ತಪ್ಪಿಸಬೇಕು. ಈಗ ಈ ಬಿ.ಡಿ.ಓ ಗಳು ಇವರು ಒಂದು ಫಂಡನ್ನು ಕೂಡಿಸುವ ಅಧಿಕಾರಿಗಳಾಗಿದ್ದಾರೆ. ಸ್ಮಾರಕ ನಿಧಿಗಳಿಗೆ ಹಣವನ್ನು ಸಂಗ್ರಹಣೆ ಮಾಡುವುದು, ಹಾಗೂ ಇನ್ನಿತರ ಬೇರೆ ಬೇರೆ ರೀತಿಯಲ್ಲಿ ಹಣವನ್ನು ಸಂಗ್ರಹಣೆ ಮಾಡುವುದು, ಇಂಥ ಕೆಲಸವನ್ನು ಅಧಿಕಾರಿಗಳಿಗೆ ಹಚ್ಚಬಾರದು ಎನ್ನುವ ಮಾತನ್ನು ಇಲ್ಲಿ ಹೇಳುತ್ತೇನೆ. ಅನೇಕ ಕಡೆ ಈ ರೀತಿಯ ಪರಿಸ್ಥಿತಿಯಿಂದಾಗಿ ಅಧಿಕಾರಿಗಳಿಗೆ ಹೊಗಳುವುದು, ಸಮಾರಂಭಗಳನ್ನು ಇದಕ್ಕೋಸ್ಕರ ಮಾಡುವುದು ಇದೆಲ್ಲಾ ತಪ್ಪಬೇಕು. ಇದರಿಂದ ಜನರ ಶೋಷಣೆಯನ್ನು ಇವರು ಮಾಡುತ್ತಿದ್ದಾರೆ. ಮತ್ತು ತಮ್ಮ ಕೆಲಸ ಕೂಡ ಅಲಕ್ಷ್ಯ ಮಾಡುತ್ತಿದ್ದಾರೆ ಆದ್ದರಿಂದ ಇದು ಇನ್ನು ಮುಂದಕ್ಕೆ ಆಗದ ರೀತಿಯಲ್ಲಿ ನೋಡಿಕೊಳ್ಳಬೇಕು ಎಂದು ಇಲ್ಲಿ ಹೇಳಬಯಸುತ್ತೇನೆ.

ಇನ್ನು ಬೇರೆ ಬೇರೆ ನೌಕರರುಗಳ ಅಸಮಾಧಾನ ಕೇಳಿ ಬರುತ್ತಿದೆ. ಇದಕ್ಕೆ ಕಾರಣ ಸೀನಿಯಾರಿಟಿ, ಪೇಸ್ಕೇಲ್ ಮುಂತಾದವುಗಳು. ಇದನ್ನು ಈವರೆಗೂ ಕೊಡಿಸಲಿಕ್ಕೆ ನಮಗೆ ಸಾಧ್ಯವಾಗಲಿಲ್ಲ. ಕೆಲವು ಕಡೆ ಯಾರು ತಮ್ಮ ಕೈ ಕೆಳಗ ಕಲಿತು ಹೋಗಿದ್ದಾರೋ, ಅವರೇ ಕೆಲವು ವರ್ಷಗಳ ನಂತರ ಮೇಲಿನ ಆಫೀಸರ್‌ಗಳಾಗಿ ಬರುತ್ತಿದ್ದಾರೆ. ಉದಾಹರಣೆಗೆ ಜ್ಯುಡಿಸಿಯಲ್ ಇಲಾಖೆ. ಯಾರು ಜ್ಯೂನಿಯರ್ ಇದ್ದಾರೋ ಅವರಿಗೆ ಇವತ್ತು ಅವರ ಸೀನಿಯರ್‌ಗಿಂತ ಹೆಚ್ಚಿನ ಪಗಾರ ಸಿಗುತ್ತಿದೆ. ಯಾರು ಸೀನಿಯರ್ ಇದ್ದಾರೆ, ಅವರಿಗೆ ಜ್ಯೂನಿಯರ್‌ಗಿಂತ ಕಡಿಮೆ ಬರುತ್ತಿದೆ. ಈ ರೀತಿಯಲ್ಲಿ ಅಲ್ಲಿ ವಿಷಮ ಪರಿಸ್ಥಿತಿ ಉಂಟಾಗಿದೆ. ಆದ್ದರಿಂದ ನೌಕರರಿಗೆ ಅವರ ಸ್ಥಾನಮಾನಕ್ಕೆ ಸರಿಯಾಗಿ, ಯೋಗ್ಯ ರೀತಿಯ ಸೌಲಭ್ಯಗಳನ್ನು ಕೊಡಬೇಕು, ಮತ್ತು ಅವರಲ್ಲಿ ಒಂದು ರೀತಿಯ ನೆಮ್ಮದಿಯ, ಶಾಂತಿಯ ವಾತಾವರಣ ಕಲ್ಪಿಸುವ,ತೆ ಮಾಡಬೇಕು. ಆಗ ಯಾವ ಉದ್ಯಮವಾಗಲೀ ಅಥವಾ ಸರ್ಕಾರಿ ಕೆಲಸವಾಗಲೀ ಮಾಡುವುದಕ್ಕೆ ಹುರುಪು ಬಂದರೆ ಆಡಳಿತ ಸುವ್ಯವಸ್ಥಿತವಾಗಿ ನಡೆಯುವುದು. ಎಲ್ಲಾ ಸರ್ಕಾರಿ ನೌಕರರದು ಸೀನಿಯಾರಿಟಿ, ಟ್ರಾನ್ಸ್‌ಫರ್ ವಿಚಾರ ಇದೆ, ಟಿ.ಎ.ಡಿ.ಎ ಎಂದು ಏನಾದರೂ ಇದ್ದೇ ಇರುತ್ತದೆ. ಇದನ್ನು ಪರಿಹರಿಸಲಿಕ್ಕೆ ಸರ್ಕಾರದವರು ಪ್ರಯತ್ನ ಮಾಡಬೇಕೆಂದು ಹೇಳುತ್ತೇನೆ.

**ನೌಕರರ ವರ್ಗಾವರ್ಗಿ :** ಇನ್ನು ಅಧಿಕಾರಿಗಳು ವರ್ಗಾವರ್ಗಿ ವಿಚಾರ. ಒಬ್ಬೊಬ್ಬನನ್ನು 2-3 ತಿಂಗಳಿಗೊಮ್ಮೆ ಟ್ರಾನ್ಸ್‌ಫರ್ ಮಾಡಿದಂತ ಉದಾಹರಣೆಗಳು ಸಾಕಷ್ಟು ಇವೆ. ಸರ್ಕಾರಿ ನೌಕರರನ್ನು ಒಂದು ಉತ್ತಮವಾದ ಪರಿಸ್ಥಿತಿಯಲ್ಲಿ

ಇಡಬೇಕು. ಮೊನ್ನೆ ಒಂದು ಕಡೆ ಒಬ್ಬ ಮಂತ್ರಿಯವರು ಹೇಳಿದರು ಹೊರದೇಶದಲ್ಲಿ ಹೋಗಿದ್ದಾಗ ಅಲ್ಲಿ ಕ್ಲಾಸ್ 4 ನೌಕರರು ಬಹಳ ಕಡಿಮೆ ಇದ್ದಾರೆಂದು. ಆ ಪದ್ಧತಿಯನ್ನು ನಮ್ಮ ದೇಶದಲ್ಲೂ ತಂದರೆ ಬಹಳ ಉತ್ತಮವೆಂದು ನಾನು ಹೇಳುತ್ತೇನೆ. ಏಕೆಂದರೆ, ನಮ್ಮಲ್ಲಿ **ಯಾವ ಒಂದು ಸಣ್ಣ ಸಾಮಾನನ್ನು, ಇಲ್ಲವೇ ಸಣ್ಣ ಒಂದು ಪುಸ್ತಕವನ್ನು ತೊತ್ತುಕೊಂಡು ಹೋಗಲು ಒಬ್ಬ ಆಳು ಬೇಕು. ಅದನ್ನು ತಪ್ಪಿಸಿ, ನಮ್ಮ ನಮ್ಮ ಸಣ್ಣ ಸಣ್ಣ ಸಾಮಾನುಗಳನ್ನು ನಾವೇ ತೆಗೆದುಕೊಂಡು ಹೋದರೆ ಅದರಿಂದ ಎಷ್ಟೋ ಹಣವನ್ನು ಉಳಿಸಬಹುದು. ಅದರಿಂದ ಒಂದು ದೇಶಕ್ಕೇನೇ ಉಳಿತಾಯವಾಗುತ್ತದೆ.** ಆ ಹಣವನ್ನು ಬೇರೆ ಉತ್ತಮವಾದ ಕೆಲಸಗಳಿಗೆ ಉಪಯೋಗಮಾಡಬಹುದು. ಅಂತಹ ಪದ್ಧತಿಯನ್ನು ಇಲ್ಲಿಯೂ ಮಾಡುವುದು ಉತ್ತಮ ಮತ್ತು ಒಳ್ಳೆಯದು. ಏಕೆಂದರೆ ಇವತ್ತು ಕ್ಲಾಸ್ 4 ಕೆಲಸಕ್ಕೆ ಅವನನ್ನು ನೇಮಿಸಿಕೊಂಡು, ಅವನ ಜೀವನಕ್ಕೂ ಒಂದು ಸರಿಯಾದ ಮಾರ್ಗವಿಲ್ಲ ಮತ್ತು ಅವನನ್ನು ಒಬ್ಬ ಗುಲಾಮನಾಗಿ ನೋಡಿಕೊಳ್ಳುತ್ತಿದ್ದಾರೆ ಎಂದು ಒಂದು ರೀತಿಯ ಜಿಗುಪ್ಸೆಯ ಭಾವನೆ ಅವನಲ್ಲಿ ಬರುವುದು ಸಹಜ. ಅದನ್ನು ತಪ್ಪಿಸಲು ಸರ್ಕಾರದವರು ತಕ್ಕ ವ್ಯವಸ್ಥೆ ಮಾಡುವುದು ಸೂಕ್ತವೆಂದು ನನಗನಿಸುತ್ತದೆ. ಇದರಲ್ಲಿ ಏನೋ ಜನರಿಗೆ ನೌಕರಿ ಒದಗಿಸುವುದಕ್ಕೆ ಒಂದು ಮಾರ್ಗವಿದ್ದರೂ, ಅದನ್ನು ಎಷ್ಟು ತೀವ್ರವಾಗಿ ಮಾಡಿದರೆ ಅದರಿಂದ ನಾವು ಏನು ಸುಖೀ ರಾಜ್ಯ ಕಟ್ಟಬೇಕೆಂದಿದ್ದೇವೆ ಅದನ್ನು ಮಾಡುವುದಕ್ಕೆ ಅಷ್ಟು ಒಳ್ಳೆಯದು ಎಂದು ಹೇಳಿ ನನ್ನ ನಾಲ್ಕು ಮಾತುಗಳನ್ನು ಮುಗಿಸುತ್ತೇನೆ.

## ಮೇಟಿ ವಿದ್ಯೆಯೇ ಮೇಲು :

**ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆ ಒಕ್ಕಲುತನವೇ ಮೇಲು ಒಕ್ಕಲುತನದ ಜ್ಞಾನ ಸುಧಾರಿಸದೆ ಒಕ್ಕಲಿಗರು ಸುಧಾರಿಸದೆ ದೇಶ ಸುಧಾರಿಸುವದು ಅಸಾಧ್ಯ ! ಒಕ್ಕಲುತನದ ಶಿಕ್ಷಣ ಎಲ್ಲರಿಗೂ ಕಡ್ಡಾಯವಾಗಬೇಕು. ಸರಕಾರಿ ಅಧಿಕಾರಿ ಇತರ ಉದ್ಯೋಗಸ್ಥರಲ್ಲಿ ಒಕ್ಕಲುತನದ ಜ್ಞಾನ ಇರಲೇಬೇಕು.**

**ಒಕ್ಕಲುತನಕ್ಕೆ ಅಗ್ರಸ್ಥಾನ - ಒಕ್ಕಲಿಗನಿಗೆ ಪ್ರಾಧಾನ್ಯತೆ ಸಿಕ್ಕಾಗ ದೇಶದ ಅಭ್ಯುದಯ ಸಾಧ್ಯ. ಒಕ್ಕಲಿಗ ಒಕ್ಕದಿದ್ದಲ್ಲಿ - ಜಗವೆಲ್ಲ ಬಿಕ್ಕೀತು.**

ಒಕ್ಕಲುತನವು ನಮ್ಮ ದೇಶದಲ್ಲಿರತಕ್ಕ ಮುಖ್ಯ ಉದ್ಯೋಗವಾಗಿದೆ. ಈ ಉದ್ಯೋಗಕ್ಕೆ ಸಾಕಷ್ಟು ಶಕ್ತಿ ಇಲ್ಲದೇ ಇರುವುದರಿಂದ ಜನರಲ್ಲಿ ತಾತ್ಸರ ಭಾವನೆ ಬಂದಿದೆ. ಅಧಿಕಾರಿಗಳಲ್ಲಿ, ಇತರ ಉದ್ಯೋಗಸ್ಥರಲ್ಲಿ ಒಕ್ಕಲುತನದ ಬಗ್ಗೆ ಒಂದು ರೀತಿಯ ತಾತ್ಸರ ಭಾವನೆ ಉಂಟಾಗಿದೆ. ಅದಕ್ಕೆ ಯೋಗ್ಯ ಶಿಕ್ಷಣದ ಅಭಾವವೇ ಕಾರಣ ಯಾವುದೇ ಖಾತೆಯಲ್ಲಿ ಕೆಲಸ ಮಾಡುತ್ತಿರಲಿ ಎಲ್ಲರೂ ಒಕ್ಕಲುತನದ ಶಿಕ್ಷಣ ಪಡೆಯಲೇಬೇಕೆಂದು ಒಂದು ಯೋಜನೆ ಮಾಡಬೇಕು. ಹೀಗೆ ಮಾಡಿದರೆ ತಿರಸ್ಕಾರ ಭಾವನೆ ಹೊರಟು ಹೋಗುವುದು. ಯಾರಿಗೂ ಅನ್ಯಾಯವಾಗಬಾರದು ಜನರಲ್ಲಿರುವ ಅಜ್ಞಾನವೇ ಈ ಉದ್ಯೋಗ ಬೆಳೆದು ಬರದಿರುವುದಕ್ಕೆ ಕಾರಣವಾಗಿದೆ. ಆದ್ದರಿಂದ ಒಕ್ಕಲುತನದ ಶಿಕ್ಷಣವನ್ನು ಪ್ರತಿಯೊಬ್ಬರು ಕಡ್ಡಾಯವಾಗಿ ತೆಗೆದುಕೊಳ್ಳಬೇಕೆಂದು ಮಾಡಿದರೆ ಒಕ್ಕಲುತನದ ಬಗ್ಗೆ ಜನರಲ್ಲಿ ಆದರ ಭಾವ ಬರುತ್ತದೆ. ಹಾಗೂ ತಿರಸ್ಕಾರ ಭಾವನೆ ಅಳಿಯುತ್ತದೆ. ನಮ್ಮ ಕಾಂಗ್ರೇಸ್ ಸರ್ಕಾರ ಅಧಿಕಾರದಲ್ಲಿ ಬಂದ ನಂತರ ಒಕ್ಕಲುತನದ ಬಗ್ಗೆ ಅವರು ಹೇಳುತ್ತಿರುವ ಕಾಳಜಿ ಪೂರ್ವಕ ಧೋರಣೆಯಿಂದ ಒಕ್ಕಲುತನವು ಸುಧಾರಿಸಬಹುದು ಎಂಬ ಆಸೆ ನಮಗೆ ಇದೆ. ಒಕ್ಕಲುತನಕ್ಕೆ ಅಗ್ರ ಪ್ರಾಧಾನ್ಯ ಕೊಡಬೇಕು ಎಂದು ನಾನು ಹೇಳುತ್ತೇನೆ. ಮೊದಲನೇಯ ಪಂಚವಾರ್ಷಿಕ ಯೋಜನೆಯಲ್ಲಿ ಒಕ್ಕಲುತನಕ್ಕೆ ಪ್ರಾಧಾನ್ಯ ಕೊಟ್ಟಿದೆ. ಹೊಸ ಹೊಸ ಯೋಜನೆಗಳನ್ನು ತೆಗೆದುಕೊಳ್ಳಲಾಗಿದೆ. ಮುಖ್ಯವಾಗಿ ನೀರಾವರಿ ಬಾವಿಗಳ ಸಹಾಯ ಕೊಡುವುದು ಬಹಳ ಮಹತ್ವದ್ದಾಗಿದೆ. ನಮ್ಮ ಪ್ರದೇಶದಲ್ಲಿ ನೀರಾವರಿಗಾಗಿ 1100 ಬಾವಿಗಳನ್ನು ಕೊಡಬೇಕೆಂದು ಇದೆ. ಇದರಿಂದ ಒಕ್ಕಲುತನ ಸುಧಾರಿಸುತ್ತದೆ. ಎಷ್ಟು ಕೆಲಸ ಆಗಬೇಕೊ ಅಷ್ಟು ಕೆಲಸವಾಗಿಲ್ಲ. ಯೋಜನೆಯ ಪೂರ್ತಿ ಲಾಭ ತೆಗೆದುಕೊಂಡಿಲ್ಲ. ಏಕೆಂದರೆ ಈ ಯೋಜನೆಯ ಬಗ್ಗೆ

ಸಾಕಷ್ಟು ಪ್ರಚಾರ ವಾಗಿಲ್ಲ. ಸಾಕಷ್ಟು ಮಾಹಿತಿ ಜನರಿಗೆ ಇಲ್ಲದೇ ಇರುವ ಮೂಲಕ ರೈತರು ಅರ್ಜಿಗಳನ್ನು ಕೊಟ್ಟಿಲ್ಲ ಮತ್ತು ಅವರಿಗೆ ಸಹಾಯ ಸಿಕ್ಕುತ್ತಿಲ್ಲ. ಈ ಬಾವಿ ಯೋಜನೆಯಲ್ಲಿ 250 ರೂಪಾಯಿ ಸಬ್ಸಿಡಿ ಮತ್ತು 750 ರೂಪಾಯಿ ಸಾಲ ಕೊಡುತ್ತಾರೆ. ಇದು ಒಂದು ಹೊಸ ಯೋಜನೆ ಆಗಿರುವುದರಿಂದ ಇನ್ನೂ ಹೆಚ್ಚು ಹಣ ಕೊಡಲಿಕ್ಕೇ ಬೇಕು. ಯಾಕೆಂದರೆ ಹೆಚ್ಚು ಖರ್ಚು ಬರುವುದರಿಂದ ಬಾವಿಗೆ 2000 ರೂಪಾಯಿ ಕೊಡಬೇಕು. ಈ ಬಗ್ಗೆ ಒಕ್ಕಲಿಗರಿಗೆ ಸಾಕಷ್ಟು ಮಾಹಿತಿ ಗೊತ್ತಿಲ್ಲ. ಸರಿಯಾದ ಪ್ರಚಾರ ಕಾರ್ಯ ನಡೆದಿಲ್ಲ. ಆದ್ದರಿಂದ ಸಾಕಷ್ಟು ಪ್ರಚಾರ ಕೆಲಸವಾಗಬೇಕು. ಒಕ್ಕಲಿಗರು ಮುಂದೆ ಬಂದು ಇದರ ಪೂರ್ತಿ ಲಾಭ ತೆಗೆದುಕೊಳ್ಳಬೇಕು.

ಇನ್ನು ಈ ಯೋಜನೆಗಳಲ್ಲಿ ಪಶು ಅಭಿವೃದ್ಧಿ ಸುಧಾರಣೆಯ ಬಗ್ಗೆ ಸರ್ಕಾರದವರು ಮಾಡಿರುವ ಕಾರ್ಯ ಅತ್ಯಂತ ಮಹತ್ವವಾದುದು ಅಂತಹ ಯೋಜನೆಗಳಿಂದ ಅನಾವಶ್ಯಕವಾಗಿ ಹಾಳಾಗಿ ಹೋಗುತ್ತಿರುವ ಸಂಪತ್ತನ್ನು ಸುಧಾರಿಸಬೇಕು. ಮುಂದಿನ ವರ್ಷದಲ್ಲಿ 12000 ಹಳ್ಳಿಗಳಲ್ಲಿ ಉತ್ತಮ ರೀತಿಯಲ್ಲಿ ಗೊಬ್ಬರವನ್ನೊದಗಿಸಲು ಪ್ರಯತ್ನವನ್ನು ಸರ್ಕಾರದವರು ನಡೆಸುತ್ತಿರುವದು ಅತ್ಯಂತ ಉತ್ತಮವಾದ ಯೋಜನೆ. ಇದು ಒಕ್ಕಲುತನದ ಪರಿಸ್ಥಿತಿ ಬಹಳ ಮಟ್ಟಿಗೆ ಸುಧಾರಿಸುವುದೆಂದು ನನ್ನ ಭಾವನೆ ಆಗಿದೆ. ಹಳ್ಳಿಗಳಲ್ಲಿ ಕಸ ಕಡ್ಡಿಗಳನ್ನು ಸಿಕ್ಕಾಪಟ್ಟೆ ಹಾಕಿ ಅಲ್ಲಿನ ಸುತ್ತಮುತ್ತಲಿರುವ ಜನರು ಮಲಮೂತ್ರಗಳನ್ನು ವಿಸರ್ಜನೆ ಮಾಡಿ ಹಳ್ಳಿಯನ್ನು ಹೊಲಸು ಮಾಡುತ್ತಿದ್ದಾರೆ. ಇದರ ಉಪಯೋಗವನ್ನು ಪಡೆಯುವಂತೆ ಅವರಿಗೆ ತಿಳುವಳಿಕೆ ಕೊಟ್ಟು ಸ್ವಚ್ಛವಾದ ರೀತಿಯಲ್ಲಿ ಗ್ರಾಮವನ್ನು ಇಡಲು ವ್ಯವಸ್ಥೆ ಮಾಡಬೇಕು. ಕಸವನ್ನು ರಸವನ್ನಾಗಿ ಮಾಡು ಎಂದು ಹೇಳುವುದಾದರೆ ಬಂಗಾರದಂತಹ ಮಾತು. ಇದಕ್ಕೆ ಹಳ್ಳಿಗಾಡಿನವರಿಂದ ಸ್ವಾಗತ ಸಿಗಬೇಕು. ಹಳ್ಳಿಗಳಲ್ಲಿ ಅನೇಕ ಕಡೆ ಇದರ ಬಗ್ಗೆ ತಿರಸ್ಕಾರ ಭಾವನೆ ಇದೆ ಇಂತಹ ಭಾವನೆ ಒಕ್ಕಲಿಗರ ಮನಸ್ಸಿನಲ್ಲಿರುವುದು ಹೋಗಬೇಕು. ಗೊಬ್ಬರದ ಅಭಾವ ಎಲ್ಲಾ ಕಡೆಯೂ ಹೆಚ್ಚಾಗಿದೆ ನೀರಾವರಿ ಯೋಜನೆಗಳಾದ ಮೇಲೆ ಗೊಬ್ಬರದ ಬಗ್ಗೆ ಹಳ್ಳಿಗಾಡಿನವರಲ್ಲಿ ತಿರಸ್ಕಾರ ಭಾವನೆ ಹೋಗುವುದಕ್ಕೆ ಪ್ರಾರಂಭ ವಾಗಿದೆ. ಹಳ್ಳಿಗಳಲ್ಲಿ ಪಂಚಾಯತಿಯವರು ಪಾಯಖಾನೆಗಳನ್ನು ಕಟ್ಟಿಸಬೇಕು. ಗೊಬ್ಬರದಿಂದ ಎಷ್ಟು ಲಾಭ ವಾಗುತ್ತದೆಂಬುದನ್ನು ಸರ್ಕಾರದವರು ಚೆನ್ನಾಗಿ ಅರಿತು ಮುಂದಿನ ವರ್ಷದೊಳಗೆ ಸುಮಾರು 12000 ಹಳ್ಳಿಗಳಿಗೆ ಗೊಬ್ಬರದ ಸರಬರಾಜನ್ನು ಕಾಲಕ್ಕೆ ಸರಿಯಾಗಿ ಒದಗಿಸುವಂತೆ ಏರ್ಪಾಡು ಮಾಡಬೇಕು ಇದರಿಂದ ಹಳ್ಳಿಗಳ ಸುತ್ತಮುತ್ತಲಿರುವ ಒಕ್ಕಲಿಗರ ಪರಿಸ್ಥಿತಿ ಸುಧಾರಿಸಬಹುದು ಎಂದು ಹೇಳಿ ನನ್ನ ಭಾಷಣವನ್ನು ಮುಗಿಸುತ್ತೇನೆ.

# ಆಧುನಿಕ ಬೇಸಾಯ ಪದ್ಧತಿ ಯ ಅನಿವಾರ್ಯತೆ

25ನೇ ಮಾರ್ಚ್ 1968

**ಶಾಸಕ ಪಂಚಗಾವಿ ವೃತ್ತಿಯಿಂದ ವಕೀಲ ಪ್ರವೃತ್ತಿಯಿಂದ ರಾಜಕಾರಣಿ ಆದರೂ ಮೂಲತ: ಕೃಷಿಕರು ಬೇಸಾಯದಲ್ಲಿ ಅಪಾರ ಆಸಕ್ತಿ ಬಿಡುವಿನಲ್ಲಿ ಮನೆಗೆ ಬಂದಾಗ ಹೊಲಕ್ಕೆ ಹೋಗಿ ಒಕ್ಕಲುತನದಲ್ಲಿ ಪ್ರತ್ಯಕ್ಷ ತೊಡುಗುವಲ್ಲಿ ಅವರಿಗೆ ಬಹಳ ಪ್ರೀತಿ.**

ಈ ಒಕ್ಕಲುತನಕ್ಕೆ ಸಂಬಂಧಪಟ್ಟ ಬೇಡಿಕೆಗಳನ್ನು ಸಮರ್ಥಿಸುತ್ತಾ ಕೆಲವು ಮಾತುಗಳನ್ನು ಹೇಳುವುದಕ್ಕೆ ಇಷ್ಟ ಪಡುತ್ತೇನೆ. ಒಕ್ಕಲುತನದ ಬಗ್ಗೆ ಉತ್ತಮ ರೀತಿಯಿಂದ ಪ್ರಗತಿ ನಡೆದಿದೆ ಎಂದು ಶ್ರೀಮಾನ್ ಜಿ. ರಾಮೇಗೌಡರು ಮತ್ತು ಹಳೆಯ ಹುಲಿಗಳಾದಂಥಹ ಶ್ರೀಮಾನ್ ಡಾ॥ ನಾಗನಗೌಡರು ಹೇಳಿ ಬಹಳ ವಿಚಾರಪೂರಿತವಾದಂಥಹ ಸಲಹೆಗಳನ್ನು ಈ ಸಭೆಯ ಮೂಲಕ ಸರ್ಕಾರದ ಮುಂದೆ ಇಟ್ಟಿದ್ದಾರೆ. ನಮ್ಮ ದೇಶದ ಒಕ್ಕಲುತನದವರ ಮೇಲೆ ಇರತಕ್ಕಂತ ಒಂದು ಮುಖ್ಯವಾದಂತಹ ಒಂದು ಶಾಪವೆಂದರೆ ಶಿಕ್ಷಣದ ಕೊರತೆ ಇರುವುದು. ಒಕ್ಕಲುತನದವರಿಗೆ ಶಿಕ್ಷಣ ಕೊಡುವುದಕ್ಕಾಗಿ ಸರ್ಕಾರದವರು ಮಂಜೂರು ಮಾಡಿರತಕ್ಕ ಹಣ ಕೇವಲ ಅತ್ಯಲ್ಪ ಒಂದು ಸಣ್ಣ ಸಸಿಯನ್ನು ಯಾವ ರೀತಿಯಿಂದ ಸಾಕಬೇಕು, ಅದಕ್ಕೆ ಏನಾದರೂ ರೋಗಬಂದರೆ ಯಾವ ರೀತಿ ಔಷಧ ಉಪಯೋಗಿಸಬೇಕು ಎಂಬುದು ರೈತರಿಗೆ ತಿಳಿಯುತ್ತಿಲ್ಲ. ಯಾವ ಯಾವ ವಾತಾವರಣದಲ್ಲಿ ಯಾವ ಯಾವ ಬೆಳೆಗಳನ್ನು ಬೆಳೆಯಬೇಕೆಂಬುದು ಆಗಲೀ ಆ ಬೆಳೆಗಳಿಗೆ ರೋಗಗಳು ಬಂದರೆ ಯಾವ ರೀತಿ ಕ್ರಿಮಿನಾಶಕ ಔಷಧವನ್ನು ಉಪಯೋಗಿಸಬೇಕೆಂಬುದಾಗಿ ಮತ್ತು ಯಾವ ರೀತಿ ಆಧುನಿಕ ರೀತಿಯ ಗೊಬ್ಬರಗಳನ್ನು ಉಪಯೋಗಿಸಬೇಕೆಂಬುದಾಗಲಿ ರೈತರುಗಳಿಗೆ ತಿಳಿಯುತ್ತಿಲ್ಲ. 100 ಕ್ಕೆ 80 ರಷ್ಟು ರೈತರಿರುವ ಈ ದೇಶದಲ್ಲಿ ಶೇಕಡಾ 30 ರಷ್ಟು ಸಹಾ ಶಿಕ್ಷಣ ಪಡೆದವರು ಇಲ್ಲಾ ಹಳ್ಳಿಗಾಡಿನಲ್ಲಿ ಶೇಕಡಾ 15 ಕ್ಕಿಂತ ಕಡಿಮೆ ಇದ್ದಾರೆ ಎಂದು ಹೇಳಬಹುದು. ಇವತ್ತಿನ ವರೆಗೆ ಹಳ್ಳಿಯವರ ಜೀವನ ಮಟ್ಟ ಮತ್ತು ಅವರಿಗೆ ಸಿಗುತ್ತಿರುವ ಮನ್ನಣೆ ಕೂಡ ಬಹಳ ಕೀಳು ದರ್ಜೆಯಲ್ಲಿದೆ ಎಂದು ಹೇಳಬಹುದು. ಅಮೇರಿಕಾದಲ್ಲಿ 100 ಕ್ಕೆ 8 ಜನ ಮಾತ್ರ ವ್ಯವಸಾಯವನ್ನು ಅವಲಂಬಿಸಿದ್ದರೆ ನಮ್ಮ ದೇಶದಲ್ಲಿ 100 ಕ್ಕೆ 80 ರಷ್ಟು ವ್ಯವಸಾಯವನ್ನು ಅವಲಂಬಿಸಿದ್ದಾರೆ. ಇದನ್ನು ಲೆಕ್ಕ ಹಾಕಿದರೆ ಒಬ್ಬನಿಗೆ ಮುಕ್ಕಾಲು ಎಕರೆಯು ಸಹ ಸಿಗುವುದು ಕಷ್ಟವಾಗಿದೆ. ನಮ್ಮ

ವ್ಯವಸಾಯದ ಪದ್ಧತಿಯನ್ನು ಅಮೇರಿಕಾದ ರೀತಿಯಲ್ಲಿ ರೂಪಿಸಿಕೊಳ್ಳುತ್ತಾ ಹೋದರೆ ನಮ್ಮ ಒಕ್ಕಲುತನ ಬೆಳೆಯಬಹುದೇ ಹೊರತು ಈಗಿನ ನಮ್ಮ ಪದ್ಧತಿಯಿಂದ ಮುಂದುವರಿಯುವುದು ಕಷ್ಟವಾಗಿದೆ. ಇವತ್ತಿನ ದಿವಸ ಒಂದು ಕುಟುಂಬಕ್ಕೆ ಎಷ್ಟು ಎಕರೆ ಜಮೀನು ಸಿಗಬಹುದು ಮತ್ತು ಆ ಕುಟುಂಬಕ್ಕೆ ಯಾವ ರೀತಿ ವ್ಯವಸಾಯದ ಸಲಕರಣೆಗಳನ್ನು ಒದಗಿಸುವುದಕ್ಕೆ ಸಾಧ್ಯವಿದೆ ಎಂಬುದನ್ನು ನೋಡಬೇಕಾಗಿದೆ. ಜಪಾನ ಮಾದರಿಯ ಸಣ್ಣ ಸಣ್ಣ ಯಂತ್ರಗಳನ್ನು ಉಪಯೋಗಿಸಿ ನಮ್ಮ ಒಕ್ಕಲುತನವನ್ನು ಬೆಳೆಸುವುದಕ್ಕೆ ಅವಕಾಶ ವಿದೆ. ಆದರೆ ಜಪಾನ ಮಾದರಿಯ ಯಂತ್ರಗಳನ್ನೇ ಆಗಲೀ ಅಥವಾ ಜಪಾನ ಮಾದರಿಯ ಟ್ರ್ಯಾಕ್ಟರಗಳನ್ನೇ ಆಗಲಿ ಸಾಕಷ್ಟು ಪ್ರಮಾಣದಲ್ಲಿ ತರಿಸಿ ಹಂಚುವುದಕ್ಕೆ ಸಾಧ್ಯವಾಗುತ್ತಿಲ್ಲ. ಈ ರೀತಿಯ ಯಂತ್ರಗಳು ನಮ್ಮ ದೇಶದಲ್ಲಿ ತಯಾರಾಗುತ್ತಿಲ್ಲ. ಈ ಯಂತ್ರಗಳನ್ನು ನಮ್ಮ ದೇಶದಲ್ಲಿ ತಯಾರು ಮಾಡುವುದು ಅವಶ್ಯಕವಿದೆ. ಆದಷ್ಟು ಜಾಗ್ರತೆ ಇಂತಹ ಯಂತ್ರಗಳನ್ನು ತಯಾರು ಮಾಡಿ ರೈತರಿಗೆ ಒದಗಿಸದಿದ್ದರೆ ಮುಂದೆ ಜಮೀನುಗಳು ಹಾಳು ಬೀಳಬಹುದು. ಒಂದು ಕಡೆ ಜನಸಂಖ್ಯೆ ಜಾಸ್ತಿಯಾಗುತ್ತಿದ್ದರೆ ಮತ್ತೊಂದು ಕಡೆ ಒಕ್ಕಲುತನದಲ್ಲಿ ಕೆಲಸ ಮಾಡತಕ್ಕಂಥ ಕೂಲಿಯ ಜನರು ಕಡಿಮೆಯಾಗುತ್ತಿದ್ದಾರೆ. ಈ ರೈತರ ಕಷ್ಟಗಳನ್ನು ನಿವಾರಣೆ ಮಾಡದಿದ್ದರೆ ಭೂಮಿಯು ಹಾಳು ಬೀಳಬಹುದು.

ಅಂದ ಮೇಲೆ ಯಾಂತ್ರೀಕರಣ ನಾವು ಮಾಡಲೇಬೇಕು. ಸಣ್ಣ ಮಶೀನುಗಳು, ಟ್ರ್ಯಾಕ್ಟರುಗಳು ಬರಲೇಬೇಕು. ಇಂದು ನಮಗೆ ಪಂಪ್‌ಸೆಟ್ಟುಗಳು ಎಷ್ಟು ಉಪಯುಕ್ತವಾಗಿವೆ, ಅದೇ ರೀತಿ ಪ್ರತಿಯೊಂದು ಕಡೆಗಳಲ್ಲೂ ಈ ವಿದ್ಯುಚ್ಛಕ್ತಿಯನ್ನು ಒದಗಿಸಿಕೊಡಬೇಕೆಂದು ಕೇಳಿಕೊಳ್ಳುತ್ತೇನೆ. ಹಾಗಿದ್ದರೆ ಮಾತ್ರ ಒಕ್ಕಲುತನ ಬೆಳೆಯುತ್ತಾ ಹೋಗುತ್ತದೆ. ಆದರೆ ನಮ್ಮ ವ್ಯವಸಾಯದ ಪ್ರಗತಿಯು ಬಹಳ ನಿಧಾನವಾಗುತ್ತದೆ. ಯಾಂತ್ರೀಕರಣ ನೋಡಿದರೆ, ನಮಗೆ ಏನೂ ಸಾಲದು. ನಮ್ಮ ರಾಜ್ಯದಲ್ಲಿ 100 ಕ್ಕೆ 9 ರಷ್ಟು ನೀರಾವರಿಯಿಲ್ಲವೆಂದು ಹೇಳುತ್ತಾರೆ. ಎಲ್ಲಾ ನದಿಯ ನೀರನ್ನು ಭೂಮಿಯ ಒಳಗಿಂದ ಎತ್ತಲಿಕ್ಕೆ ಏನೂ ಸಾಧನೆ ಮಾಡದೆ, ಬಹಳ ಹಿಂದುಳಿದಿದ್ದೇವೆ. ಇವತ್ತು ಲ್ಯಾಂಡ್ ಮಾರ್ಟಗೇಜ್ ಬ್ಯಾಂಕಿನ ಮುಖಾಂತರ ಒಂದು ಬಾವಿಗೆ 500 ರೂಪಾಯಿಯನ್ನು ಕೊಡುತ್ತಿದ್ದಾರೆ. ಅದರ ಜೊತೆಗೆ ಯಾಂತ್ರೀಕರಣ ಸೌಕರ್ಯವಾದ ಬೋರಿಂಗ್ ಮಶೀನ್ ಕೊಡದಿದ್ದರೆ ಬಾವಿಗಳೆಲ್ಲಾ ಹಾಳಾಗಿ ಹೋಗುತ್ತವೆ. ಗೋಕಾಕ ತಾಲ್ಲೂಕಿನಲ್ಲಿ ಸುಮಾರು ಒಂದು ಸಾವಿರ ಬಾವಿಗಳಲ್ಲಿ ನೀರೇ ಇಲ್ಲ. ಪೂರ್ತಿಯಾಗಿ ಒಣಗಿ ಹೋಗಿವೆ. ಇಡೀ ವರ್ಷ

ದುಡಿಯುತ್ತಿರುವ ರೈತ ತನ್ನ ಸಂಸಾರವನ್ನು ಕಟ್ಟಿಕೊಂಡು, ತಮ್ಮ ಜನರನ್ನು ಕಟ್ಟಿಕೊಂಡು ಈ ಪರಿಸ್ಥಿತಿಯಲ್ಲಿ ನಾಲ್ಕು ತಿಂಗಳು ಕೆಲಸವಿಲ್ಲದೇ, ತನ್ನ ಜಮೀನನ್ನು ಬಂಜರು ಬಿಟ್ಟು ಹೇಗೆ ಇರುತ್ತಾನೆ. ಅವನ ಜೀವನದಲ್ಲಿ ಎಷ್ಟು ಬದಲಾವಣೆಯಾಗಬಹುದೆಂಬುದನ್ನು ವಿಚಾರ ಮಾಡಬೇಕಾಗಿದೆ. ಇದರಿಂದ ಒಕ್ಕಲುತನದ ಆರ್ಥಿಕ ಪರಿಸ್ಥಿತಿ ಹಾಳಾಗಿ ಹೋಗುತ್ತದೆ. ಇದನ್ನು ತಪ್ಪಿಸಬೇಕು. ಶಾಶ್ವತವಾದ ಒಂದು ನೀತಿಯನ್ನು ಅನುಸರಿಸಲೇಬೇಕು ನಾನು ಮೂರು ತಿಂಗಳಿಂದ ಬೋರಿಂಗ್ ಮಿಷಿನ್ ಕೊಡಿ ಎಂದು ಕೇಳುತ್ತಿದ್ದೇನೆ ಆದರೆ ಬೆಳಗಾವಿ ಡಿವಿಜನ್‌ಗೆ ನಾಲ್ಕು ಬೋರಿಂಗ್ ಮೀಷನ್ ಕಳಿಸಿದ್ದಾರಂತೆ ಆದರೆ ಅದು ಎಲ್ಲೆಲ್ಲಿ ಹೋಗಬೇಕೋ ಅಲ್ಲಿ ಮುಟ್ಟಲಿಲ್ಲ. ಆಪರೇಟರ್ಸ್ ಆದವರು ಕೂಡ ಟ್ರೇನಿಂಗ್‌ಗೆ ಬಂದರೆ ನಾಲ್ಕು ದಿವಸಗಳಲ್ಲಿ ಓಡಿ ಹೋಗುತ್ತಾರೆ. ಈ ರೀತಿಯ ಪರಿಸ್ಥಿತಿ ಇರುವಾಗ ಹೇಗೆ ಅವರು ಕೆಲಸ ಮಾಡಬೇಕು ಎಂಬುದು ಮುಖ್ಯ ವಿಚಾರ. ಇವತ್ತು ಒಳ್ಳೆಯ ಖಾತೆ ಇದೆ, ಅಧಿಕಾರಿಗಳು ಇದ್ದಾರೆ ಬಹಳ ಕೆಲಸ ಮಾಡುತ್ತಿದ್ದಾರೆ. ಆದರೆ ಅವರಿಗೆ ಯಾವ ತರದ ಸೌಕರ್ಯ ಅನುಕೂಲತೆ ಕಲ್ಪಿಸದಿದ್ದರೆ ಕೆಲಸ ಸರಿಯಾಗಿ ನಡೆಯುವುದಕ್ಕೆ ಅಡಚಣೆ ಉಂಟಾಗುತ್ತದೆ. ಒಬ್ಬ ಗ್ರಾಮ ಸೇವಕನನ್ನು 8-10 ಹಳ್ಳಿಗಳಿಗೆ ನೇಮಿಸಿದ್ದಾರೆ. ಅವನು ಪ್ರತಿ ಜಮೀನಿಗೆ ಹೋಗಿ ಹೇಳಬೇಕು. ಈಗ ಎಸ್.ಇ.ಎಸ್. ನಿಂದ ತೆಗೆದು ಒಕ್ಕಲುತನದ ಖಾತೆಗೆ ಅವರು ಬಂದಿದ್ದಾರೆ. ಆದರೆ ಅವರು ಪ್ರತ್ಯಕ್ಷವಾಗಿ ಬೆಳೆ ಬೆಳೆಯುವ ಜಾಗಕ್ಕೆ ಹೋಗುವುದಿಲ್ಲ. ಯಾವ ಬೆಳೆಗೆ ರೋಗ ಬಂದಿದೆ ಅದನ್ನು ನಿವಾರಣೆ ಮಾಡುವುದು ಹೇಗೆ ಎಂಬುದನ್ನು ನೋಡುವುದಿಲ್ಲ. ರೈತರಿಗೆ ಏನು ಸಲಹೆ ಕೊಡಬೇಕು. ಏನು ಪರಿಹಾರವನ್ನು ಹೇಳಬೇಕೆಂಬುದರಲ್ಲಿ ಅವರು ಆಶಕ್ತಿ ವಹಿಸುತ್ತಾ ಇಲ್ಲ. ತಾಲ್ಲೂಕು ಮಟ್ಟದಲ್ಲಿ 8-0 ಆಫೀಸರುಗಳು ಇದ್ದಾರೆ. ಆದರೆ ಹಳ್ಳಿಗಳಲ್ಲಿ ಒಬ್ಬನು ಕೂಡಾ ಇಲ್ಲ. ಈ ರೀತಿ ವ್ಯವಸ್ಥೆಯಲ್ಲಿ ಬದಲಾವಣೆ ಯಾಗಬೇಕು. ಬೆಳೆಗಳಿಗೆ ರೋಗ ಬಂದಲ್ಲಿ ಹಳ್ಳಿಯ ಜನರಿಗೆ ಉಪದೇಶ ಕೊಡುವುದಕ್ಕೆ , ಸಲಹೆ ಕೊಡುವುದಕ್ಕೆ , ಸಹಾಯ ಮಾಡುವುದಕ್ಕೆ ಅಧಿಕಾರಿಗಳು ಸಿಗಲೇಬೇಕು. ಅದು ಸಿಗದಿದ್ದರೆ ಅನಕ್ಷರಸ್ಥ ರೈತ ಒಳ್ಳೆಯ ಬೆಳೆ ಬೆಳೆಯುತ್ತಾನೆ ಎಂದು ಹೇಳುವುದಕ್ಕೆ ಆಗುವುದಿಲ್ಲ. ಎಲ್ಲೋ ಒಬ್ಬೊಬ್ಬ ಪ್ರೋಗ್ರೆಸಿವ್ ಕಲ್ಟಿವೇಟರ್ ಮೇಲಿಂದ ಮೇಲೆ ಕಛೇರಿಗೆ ಹೋಗಿ ಅಧಿಕಾರಿಗಳ ಸೌಲಭ್ಯ ಪಡೆದು ಯಶಸ್ವಿಯಾಗಿ ಮಾಡಬಹುದು. ಆದರೆ ಕೆಲವು ರೈತರನ್ನು ಮೋಸ ಮಾಡುವ ಜನರು ಇದ್ದಾರೆ. ರಾಮಬಾಣ ಔಷಧಿ ಎಂದು ಹೇಳಿ ರೈತರನ್ನು ಮೋಸ ಮಾಡುವ ಜನರು ಇದ್ದಾರೆ. ಒಂದು ಸಾರಿ ಯಾರೋ ಒಬ್ಬ ಈ ಸೊಸೈಟಿಯ ಅಧಿಕಾರಿಗಳಿಗೆ 8-10 ಸಾವಿರ ಲಂಚ ಕೊಟ್ಟ

ಎಂದು ಅವನು ತೋರಿಸಿದ ಯಾವುದೋ ಒಂದು ಕುರ್ಲಾ ಎಂಬ ಹೆಸರಿನ ಔಷಧವನ್ನು ರೈತರಿಗೆ ಕೊಡುತ್ತಿದ್ದಾರೆ. ಒಕ್ಕಲುತನ ಖಾತೆಯವರು ಇಂಥದ್ದೇ ಔಷಧಿಯನ್ನು ಹಾಕಬೇಕೆಂದು ಒಂದು ಪಟ್ಟಿ ಮಾಡಿದ್ದಾರೆ. ಆದರೆ ಇವರು ಏನೋ ಒಂದು ಆಸೆಗೆ ಸಿಕ್ಕಿ ಬಿದ್ದು ರೈತರ ಮೇಲೆ ಒತ್ತಾಯವನ್ನು ಮಾಡುತ್ತಿದ್ದಾರೆ. ಇದು ಬಹಳ ಅನ್ಯಾಯವಾಗುತ್ತದೆ. ಇದು ಎಲ್ಲಾ ಕಡೆಗಳಲ್ಲೂ ನಡೆದಿದೆ. ಅವನು ಇಡೀ ವರ್ಷ ದುಡಿದ ಬದುಕು ಏನಾಗುತ್ತದೆ? ನಮ್ಮಲ್ಲಿ ಅಗ್ರಿಕಲ್ಚರಲ್ ಮಾರ್ಕೇಟಿನಲ್ಲಿ ಒಂದು ತೊಂದರೆ ಬಂದಿದೆ. ಎಲ್ಲಾ ಅಗ್ರಿಕಲ್ಚರಲ್ ಮಾರ್ಕೆಟಿಂಗ್‌ನ ಚೇರಮನ್ನ್ ಕೂಡಿ ಏನೋ ಒಂದು ನಿರ್ಣಯ ತೆಗೆದುಕೊಂಡಿದ್ದಾರೆ. ಹತ್ತಿಗೆ 2 ಪೌಂಡು ಸೂಟ್ ಕೊಡಬೇಕೆಂದು ನಿರ್ಣಯ ತೆಗೆದುಕೊಂಡಿದ್ದಾರೆ. ಅವರಿಗೆ ಏನು ಅಧಿಕಾರ? ಅವರಿಗೆ ವ್ಯಾಪಾರಸ್ಥರು ಮಾರುವಾಗ ಪರೀಕ್ಷೆ ಮಾಡಿ ತೆಗೆದುಕೊಳ್ಳುತ್ತಾರೆ. ಅದರ ಮೇಲೆ 2 ಪೌಂಡು ಸೂಟ್ ಕೊಡಬೇಕೆಂದು. ಒಂದು ರೀತಿಯ ನಿರ್ಣಯ ತೆಗೆದು ರೈತರ ಮೇಲೆ ಹಾಕಿದರೆ ಹೇಗೆ? ಅದನ್ನು ತಪ್ಪಿಸಲು ಖಾತೆಯವರು ಯೋಗ್ಯ ಕ್ರಮವನ್ನು ತೆಗೆದುಕೊಳ್ಳಬೇಕೆಂದು, ಮತ್ತು ಈ ತರದ ಅನ್ಯಾಯ ಎಲ್ಲೆಲ್ಲಿ ನಡೆಯುತ್ತದೆ, ಅದನ್ನು ಉಳಿದ ಖಾತೆಗೆ ಸಹಕಾರದೊಂದಿಗೆ ತಪ್ಪಿಸಬೇಕು.

ಇನ್ನು ಕೊನೆಯದಾಗಿ ಒಂದು ಮಾತು. ಈ ಬೆಳೆಯ ಸಂರಕ್ಷಣೆಗೆ ವಿಮಾ ಯೋಜನೆಯ ಮೂಲಕ ಕೈಕೊಳ್ಳುವ ಒಂದು ಯೋಜನೆ ಮಾಡಬೇಕು. ಕೆಲವು ರಾಜ್ಯಗಳಲ್ಲಿ ಈ ವಿಚಾರ ನಡೆದಿದೆ. ನಮ್ಮ ರಾಜ್ಯದಲ್ಲೂ ಕೂಡ ಇದು ಎಷ್ಟು ಬೇಗ ಬರುತ್ತದೆ, ಅಷ್ಟು ರೈತನಿಗೆ ತನ್ನ ಬೆಳೆಯಲ್ಲಿ ಅನುಕೂಲವಾಗಿ, ಒಂದು ಯೋಗ್ಯ ಭರವಸೆ ಸಿಕ್ಕಿದ ಹಾಗೆ ಆಗುತ್ತದೆ. ಅದನ್ನು ಸರ್ಕಾರದವರು ಪೂರ್ತಿ ವಿಚಾರ ಮಾಡಿ ನಮ್ಮ ರಾಜ್ಯದಲ್ಲೂ ಜಾರಿಗೆ ತರಬೇಕು.

# ರಾಜಕೀಯ ದಿಗಿಲುಗಳು

13ನ ಜನವರಿ 1969

ರಾಜ್ಯಪಾಲರ ಭಾಷಣಕ್ಕೆ ವಂದನೆ:

**ಸ್ವತಂತ್ರ್ಯ ಭಾರತದಲ್ಲಿ ರಾಜ್ಯ ವಿಧಾನಸಭೆಗೆ ಸತತ ನಾಲ್ಕು ಬಾರಿ ಪುನರಾಯ್ಕೆಯಾಗಿ ಅತ್ಯಂತ ಪ್ರಾಮಾಣಿಕ ಮತ್ತು ಸಮರ್ಥ ರೀತಿಯಲ್ಲಿ ತನ್ನ ಕ್ಷೇತ್ರವನ್ನು ಪ್ರತಿನಿಧಿಸಿದ್ದ ಶ್ರೀ ಅಪ್ಪಣ್ಣ ರಾಮಪ್ಪ ಪಂಚಗಾವಿ ಅಪ್ಪಟ ಗಾಂಧೀವಾದಿ ಸರಳ ಶುದ್ಧ - ಸಜ್ಜನಿಕೆಯ ಅಪರೂಪದ ರಾಜಕಾರಣಿ. ಚುನಾವಣೆಗಳಲ್ಲಿ ಹೆಚ್ಚುತ್ತಿರುವ ಹಣದ ವಹಿವಾಟು ಕುಡಿತದ ಪಾತ್ರ ಕುರಿತು ನಾಲ್ಕು ದಶಕಗಳ ಹಿಂದೆಯೇ ಅವರು ತಮ್ಮ ಆತಂಕ - ಕಳವಳ ವ್ಯಕ್ತಪಡಿಸುತ್ತ ನಮ್ಮ ಪ್ರಜಾಪ್ರಭುತ್ವ ಎಲ್ಲಿಗೆ ಹೋಗಿ ಮುಟ್ಟುತ್ತದೆಯೋ ಎಂದು ಶಾಸನ ಸಭೆಯ ಲಕ್ಷ್ಯವನ್ನು ಸೆಳೆದಿದ್ದರು.**

ರಾಜ್ಯಪಾಲರು ಮಾಡಿದ ಭಾಷಣಕ್ಕೆ ಮತ್ತು ಈಗ ತಂದಿರುವ ವಂದನಾಪೂರ್ವಕವಾದ ನಿರ್ಣಯಕ್ಕೆ ನಾನು ಸಂಪೂರ್ಣ ಬೆಂಬಲವನ್ನು ಕೊಡುತ್ತೇನೆ. ರಾಜ್ಯಪಾಲರು ಮಾಡಿದ ಭಾಷಣದಲ್ಲಿ ಈಗ ರಾಜ್ಯ ಪ್ರಗತಿ ಹೇಗೆ ನಡೆದಿದೆ, ಮತ್ತು ನಾವು ಮುಂದೆ ಯಾವ ದಾರಿಯಲ್ಲಿ ನಡೆಯಬೇಕು ಎಂಬ ಬಗ್ಗೆ ಅಭಿಪ್ರಾಯಗಳನ್ನು ಇಟ್ಟಿದ್ದಾರೆ.

**ಚುನಾವಣಾ ವೆಚ್ಚಕ್ಕೆ ಕಡಿವಾಣ ಅನಿವಾರ್ಯ :**

ಮೊಟ್ಟ ಮೊದಲನೆಯದಾಗಿ ನಮ್ಮ ರಾಜ್ಯದಲ್ಲಿ ತಾಲ್ಲೂಕು ಬೋರ್ಡ ಚುನಾವಣೆಗಳು ಬಹಳ ಶಾಂತರೀತಿಯಲ್ಲಿ ನಡೆದಿವೆ. ಆ ಬಗ್ಗೆ ಬಹಳ ಕೆಲಸವಾಗಿದೆ. ನಮ್ಮಲ್ಲಿ ಪಂಚಾಯತಿ ರಾಜ್ಯ ಸಂಸ್ಥೆಗಳು ಇನ್ನು ಉತ್ತಮ ರೀತಿಯಲ್ಲಿ ಬೆಳೆಯಬೇಕೆಂದು ವ್ಯಕ್ತಪಡಿಸಿದ್ದಾರೆ. ನಮ್ಮ ರಾಜ್ಯದಲ್ಲಿ ತಾಲ್ಲೂಕು ಬೋರ್ಡುಗಳಲ್ಲಿ ಬಹಳ ಚೆನ್ನಾಗಿ ಕೆಲಸಗಳು ನಡೆದಿವೆ. ಆದರೆ ತಾಲ್ಲೂಕು ಬೋರ್ಡುಗಳು ರಚನೆ ಆದಂತೆ ಜಿಲ್ಲಾ ಪರಿಷತ್ತು ಇನ್ನು ಆಗಿಲ್ಲವೆಂದು ಕೆಲವರು ಸ್ವಲ್ಪ ವಿಷಾಧ ವ್ಯಕ್ತಪಡಿಸುತ್ತಿದ್ದಾರೆ. ನಾವೇನೋ ಪ್ರಜಾಪ್ರಭುತ್ವ ಎಲ್ಲಾ ಹಂತದಲ್ಲಿಯೂ ಸರಿಯಾಗಿ ನಡೆಯಬೇಕೆಂದು ವ್ಯಕ್ತಪಡಿಸುತ್ತಿದ್ದೇವೆ. ಪ್ರಜಾಪ್ರಭುತ್ವ ಸರಿಯಾದ ಮಟ್ಟದಲ್ಲಿ ಆಚರಣೆಗೆ ತರುವ

ವಿಷಯದಲ್ಲಿ ಜನತೆಗೆ ತಕ್ಕ ತಿಳುವಳಿಕೆ ಕೊಡಬೇಕೆಂದು ನಾನು ಹೇಳಬಯಸುತ್ತೇನೆ. ಮೊನ್ನೆ ತಾಲ್ಲೂಕು ಬೋರ್ಡುಗಳ ಚುನಾವಣೆಗಳು ಅನೇಕ ಕಡೆಗಳಲ್ಲಿ ಯಶಸ್ವಿಯಾಗಿ ನಡೆದರೂ ಕೂಡ ಅದರಲ್ಲಿ ಆದಂಥ ಖರ್ಚು ವೆಚ್ಚ ಬಹಳ ಜಾಸ್ತಿಯಾಗಿದೆ. ಮೊಟ್ಟ ಮೊದಲನೆಯದಾಗಿ ಆ ಸಂದರ್ಭದಲ್ಲಿ ಆದಂತಹ ಕುಡಿತ ಮತ್ತು ಇತರ ದಾಂದಲೆಗಳು ಸರ್ಕಾರದ ಲಕ್ಷ್ಯಕ್ಕೆ ಸಾಕಷ್ಟು ಬಂದಿವೆಯೋ ಏನೋ ಗೊತ್ತಿಲ್ಲ. ಈ ಚುನಾವಣೆಯಲ್ಲಿ ಬಹಳ ಮಟ್ಟಿಗೆ ಹಣ ದುಂದುವೆಚ್ಚವಾಗಿದೆ. ಇದು ಪ್ರಜಾಪ್ರಭುತ್ವಕ್ಕೆ ಒಳ್ಳೆಯ ಲಕ್ಷಣವಲ್ಲ, ಒಬ್ಬೊಬ್ಬ ಸದಸ್ಯರು ಅನೇಕ ಕಡೆ 30,000 ರೂಪಾಯಿಗಳವರೆಗೂ ಖರ್ಚು ಮಾಡಿದ್ದು ಉಂಟು. ಕೆಲವರು 200-300 ರೂಪಾಯಿನಲ್ಲಿಯೇ ಆರಿಸಿ ಬಂದವರು ಇದ್ದಾರೆ. ತಾಲ್ಲೂಕು ಬೋರ್ಡ ಚುನಾವಣೆಗೆ 20-30 ಸಾವಿರ ಖರ್ಚು ಮಾಡಿರುವುದನ್ನು ನೋಡಿದರೆ ಮುಂದೆ ನಾವು ಎಲ್ಲಿ ಮುಟ್ಟುತ್ತೇವೆ ಎಂಬುದನ್ನು ಪರಿಶೀಲಿಸಬೇಕಾಗಿದೆ. ಪಾನ ನಿರೋಧ ರದ್ದು ಮಾಡಿದ ಮೇಲೆ ಕುಡಿತ ಓಟ ನೋಡಿದರೆ, ಮುಂದಿನ ಸಾರ್ವತ್ರಿಕ ಚುನಾವಣೆಯಲ್ಲಿ ನಾವು ಎಲ್ಲಿಗೆ ಹೋಗಿ ಮುಟ್ಟುತ್ತೇವೆಯೋ ಎಂಬ ವಿಚಾರ ಗೊತ್ತಾಗದಂತಾಗಿದೆ. ಮುಂದೆ ಎಲ್ಲೆಲ್ಲಿ ಹಣದ ಪ್ರಭಾವ ಜಾಸ್ತಿ ಇರುತ್ತದೆಯೋ ಅಂತಹ ಕಡೆಗಳಲ್ಲಿ ಲೋಕರ್‌ಬಾಡಿ ಕಂಟ್ರ್ಯಾಕ್ಟರುಗಳ ಪ್ರಭಾವ ಜಾಸ್ತಿ ಯಾಗಿ ಬೆಳೆದು ಅಧಿಕಾರವನ್ನು ಅವರೇ ಉಳಿಸಿಕೊಂಡಿರುವಂತಾಗಿದೆ. ಆದ್ದರಿಂದ ಸರ್ಕಾರವನ್ನೇ ಅವರ ವಶಕ್ಕೆ ಕಟ್ಟಿಕೊಂಡಿದ್ದಾರೆ ಎಂಬ ಮಾತನ್ನು ನಾವು ಈಗ ತಿಳಿದು ವಿಚಾರ ಮಾಡಬೇಕಾಗುತ್ತದೆ. ಅಲ್ಲದೇ ಈಗಿನ ಪ್ರಜಾಪ್ರಭುತ್ವ ಮುಂದೆ ಎಲ್ಲಿ ಹೋಗಿ ಮುಟ್ಟುತ್ತದೆಯೋ ಎಂಬ ವಿಚಾರವನ್ನು ನಾವು ಈಗಲೇ ಪರಿಶೀಲನೆ ಮಾಡಬೇಕಾಗುತ್ತದೆ. ಆದರೆ ಅದರ ಜೊತೆಗೆ ಈಗ ಆಡಳಿತವನ್ನು ವಿಕೇಂದ್ರಿಕರಣ ಮಾಡಿ ಎಲ್ಲಾ ಕಡೆಯೂ ವ್ಯವಸ್ಥಿತವಾಗಿ ಸ್ಥಾನಿಕ ಸಂಸ್ಥೆಗಳ ಕೆಲಸ ಪಡೆಯಬೇಕು ಎನ್ನುವ ವಿಚಾರ ಮಾಡುತ್ತಿದ್ದಾರೆ. ತಾಲ್ಲೂಕು ಭೋರ್ಡುಗಳಿಗೆ ಅಧಿಕಾರ ಕೊಡುತ್ತಿದ್ದಾರೆ ಅದರ ಜೊತೆಗೆ ಅನೇಕ ಸಿಬ್ಬಂದಿಯನ್ನು ಕೊಡುತ್ತಿದ್ದಾರೆ. ಆದರೆ ನಾವು ಅಂದಾಜು ಮಾಡಿದಷ್ಟು ಅವರ ಕೆಲಸ ನಡೆಯುತ್ತಾ ಇಲ್ಲ, ಎನ್.ಇ.ಎಸ್. ಸಂಸ್ಥೆಗಳನ್ನು ರದ್ದು ಮಾಡಿ ಎಂದು ಹೇಳಬೇಕಾಗಿದೆ. ಕೇಂದ್ರದಲ್ಲಿ ಈ ಖಾತೆಗೆ ಸಂಬಂಧವಾಗಿ ಯಾರು ಮಂತ್ರಿಗಳು ಇದ್ದಾರೋ ಅವರು ಅದನ್ನೇ ಉಳಿಸಿಕೊಳ್ಳಬೇಕೆಂದು ಎಲ್ಲಿ ಉತ್ತಮ ರೀತಿಯಲ್ಲಿ ಕೆಲಸಗಳು ಆಗುತ್ತವೆಯೋ ಅದಕ್ಕೆ ಧ್ವನಿಗೂಡಿಸುವುದು ನಮ್ಮ ಚಾಳೀ. ಇಲ್ಲಿನ ಎಕ್ಸಟೆನ್‌ಷನ್ ಆಫೀಸರು ಸಮರ್ಪಕವಾಗಿ ಕೆಲಸ ನಿರ್ವಹಿಸುತ್ತಿಲ್ಲ. ಇನ್ನು ಕೆಲವು ಅಧಿಕಾರಿಗಳಿಗೆ ಎನ್.ಇ.ಎಸ್. ಎಜ್ಯುಕೇಶನ್ ಡಿಪಾರ್ಟಮೆಂಟನವರು, ಕೋ - ಆಪ್‌ರೇಟ್ಟಿವ್ ಡಿಪಾರ್ಟಮೆಂಟಿನವರು, ಅಗ್ರಿಕಲ್ಚರಲ್ ಡಿಪಾರ್ಟಮೆಂಟಿನವರು ಅವರವರ ಕೆಲಸ ಮಾಡುತ್ತಾರೆ. ಆದರೆ

ಎಕ್ಸಟೆನ್‌ಷನ್ ಆಫೀಸರುಗಳ ಖಾತೆ ನಾನು ಸ್ವತಃ ನೋಡಿರುವ ಹಾಗೆ ಅವು ನ್ಯಾಯವಾಗಿ ಕೆಲಸ ಮಾಡುವುದಿಲ್ಲ. ಅಲ್ಲಿ ಸರಿಯಾಗಿ ಕೆಲಸವೂ ಆಗುವುದಿಲ್ಲ. ಇಂಡಸ್ಟ್ರೀಯಲ್ ಎಕ್ಸಟೆನ್‌ಷನ್ ಆಫೀಸರುಗಳಿಗೆ ಇಂಡಸ್ಟ್ರೀ ಬಗ್ಗೆ ಏನೂ ಗೊತ್ತಿರುವುದಿಲ್ಲ. ಅನೇಕ ಸಲ ಇಂಥದ್ದು ಮಾಡಬೇಕೆಂದು ಹೇಳಿದರೆ ನಮ್ಮಿಂದ ತಪ್ಪಿಸಿಕೊಂಡು ಹೋಗುವುದು ಮಾಡುತ್ತಾರೆ. ಯಾವುದೇ ಕೆಲಸ ಅವರಿಂದ ಆಗುವುದಿಲ್ಲ. ಹೀಗಾಗಿ ನಮ್ಮ ರಾಜ್ಯಕ್ಕೆ ಹಣಕಾಸಿನ ತೊಂದರೆ, ಅನಾವಶ್ಯಕವಾದ ಹೆಚ್ಚು ಸಿಬ್ಬಂದಿ ತೊಂದರೆ ಎಂದು ತಪ್ಪುವುದಿಲ್ಲ. ಇದಲ್ಲದೇ ಈ ತರಹ ತೊಂದರೆಗಳೇ ಇತ್ತೀಚೆಗೆ ಜಾಸ್ತಿ ಯಾಗುತ್ತಾ ಇವೆ.

ಇನ್ನು ತುಕೋಳ್ ಕಮೀಷನ್ನಿನ ವರದಿಯ ಪ್ರಕಾರ 16 ಕೋಟಿ ರೂಪಾಯಿಗಳನ್ನು ಸರ್ಕಾರದವರು ಪ್ರತಿ ವರ್ಷವೂ ಖರ್ಚು ಮಾಡಬೇಕು. ಇದನ್ನು ಸರಾಸರಿಯಾಗಿ ಲೆಕ್ಕ ಹಾಕಿ ನೋಡಿದರೆ, ಯಾವ್ಯಾವ ಸಿಬ್ಬಂದಿಯನ್ನು ಖೋತ ಮಾಡಬೇಕು, ಯಾವ್ಯಾವ ತರಹ ವ್ಯವಸ್ಥೆ ನಡೆದಿದೆಯೋ ಅವನ್ನು ಸರಿಮಾಡಬೇಕು. ಇಲ್ಲದಿದ್ದರೆ ನಾವು ತಪ್ಪಿ ನಡೆದಂತಾಗುತ್ತದೆಂದು ನಾನು ಹೇಳಬಯಸುತ್ತೇನೆ.

ಇದರ ಜೊತೆಗೆ ಸ್ಥಾನಿಕ ಸಂಸ್ಥೆಗಳ ವಿಚಾರದಲ್ಲಿ ಹೇಳಬೇಕಾಗಿದೆ . ನಮ್ಮ ಎಲ್ಲಾ ಜಿಲ್ಲೆಯಲ್ಲಿ ಡಿಸ್ಟ್ರಿಕ್ಟ ಡೆವಲೆಪ್‌ಮೆಂಟ ಕೌನ್ಸಿಲ್ ಎಂದು ಇಟ್ಟುಕೊಂಡಿದ್ದಾರೆ. ಮಹಾರಾಷ್ಟ್ರ ರಾಜ್ಯದ ಕೆಲವು ಕಡೆ ಎಲ್ಲಿ ಒಳ್ಳೆಯ ಜನರು ಇಂಥ ಸಂಸ್ಥೆಗಳಲ್ಲಿದ್ದಾರೋ, ಅಲ್ಲಿ ಈ ಜಿಲ್ಲಾ ಪರಿಷತ್ತುಗಳು ಚೆನ್ನಾಗಿ ನಡೆಯುತ್ತವೆ. ಎಲ್ಲಿ ಜನರು ಸರಿಯಾಗಿ ಇಲ್ಲವೋ, ಅಲ್ಲಿ ಇವು ಸರಿಯಾಗಿ ನಡೆಯದೇ ವಿಫಲವಾಗಿವೆ.

ಇನ್ನೊಂದು ಮಾತು, ನಾವು ಅಧಿಕಾರ ಕೊಡುವಾಗ ಆದಷ್ಟು ಸಂಶಯ ದೃಷ್ಟಿಯಿಂದ ಕೊಡುತ್ತಾ ಹೋಗುತ್ತೇವೆ. ತಾಲ್ಲೂಕು ಬೋರ್ಡಿಗೆ ಪ್ರಾಥಮಿಕ ಶಿಕ್ಷಣ ಕೊಡಲು ಏಕೆ ಹಿಂದು ಮುಂದು ನೋಡುವುದು ಎಂದು ಕೇಳಬೇಕಾಗಿದೆ. ಜಿಲ್ಲಾ ಸ್ಕೂಲು ಬೋರ್ಡು ಇದ್ದರೆ, ಒಳ್ಳೆಯದೆಂದು ಹೇಳುತ್ತಾರೆ. ಈಗ ಬೆಳಗಾವಿ ವಿಭಾಗದಲ್ಲಿ ಮತ್ತು ಅನೇಕ ಇತರ ಕಡೆಗಳಲ್ಲಿದ್ದ ಸ್ಕೂಲು ಬೋರ್ಡುಗಳನ್ನು ನೋಡಿದರೆ, ಎಲ್ಲವೂ ಒಳ್ಳೆಯ ರೀತಿಯಲ್ಲಿ ನಡೆಯುತ್ತಾ ಇಲ್ಲ. ಸ್ಕೂಲು ಬೋರ್ಡುಗಳನ್ನು ತಮಗೆ ಬೇಕಾದ ರೀತಿ ನಾಮಿನೇಟ ಮಾಡಿದ್ದಾರೆ, ಮತ್ತು ಇದರಿಂದಾಗಿ ಲಂಚಗುಳಿತನ, ಅವ್ಯವಹಾರ ನಡೆಯುತ್ತಾ ಇದೆ. ಹಳೆಯ ಮೈಸೂರಿನಲ್ಲಿ ಸ್ಕೂಲು ಬೋರ್ಡುಗಳಿಲ್ಲ. ಅಲ್ಲಿಯೂ ಆಡಳಿತ ಚೆನ್ನಾಗಿ ನಡೆಯುತ್ತಿದೆ. ಮತ್ತು ಸ್ಕೂಲು ಬೋರ್ಡು ಏಕೆ ಬೇಕು ! ಸ್ಕೂಲು ಬೋರ್ಡು ಮಾಡುವುದಾದರೆ, ಅವರಿಗೆ ಪೂರ್ಣ ಅಧಿಕಾರ ಕೊಡಬೇಕು. ಇಲ್ಲದಿದ್ದರೆ

ಖಾತೆಯ ಮುಖಾಂತರ ನಡೆಸಬೇಕು. ನಾಮಿನೇಟ ಮಾಡಿ ಸ್ಕೂಲು ಬೋರ್ಡು ಇಟ್ಟುಕೊಂಡರೆ ಸರಿಯಾಗಿ ರುವುದಿಲ್ಲ. ಆದ್ದರಿಂದ ಆ ದೋಷ ಬರದ ಹಾಗೆ ಮಾಡಿಕೊಂಡು ಹೊಗಬೇಕಾಗುತ್ತದೆ.

ಇನ್ನು ಬರಗಾಲದ ಕೆಲವು ಮಾತುಗಳನ್ನು ಹೇಳುತ್ತೇನೆ. ಸರ್ಕಾರದವರು ಒಳ್ಳೆಯ ಸಮರ್ಥ ರೀತಿಯಿಂದ ಎದುರಿಸಿ ನಮ್ಮ ರಾಜ್ಯದಲ್ಲಿ ಎಲ್ಲಾ ಕಡೆಗೂ ಸಾಕಷ್ಟು ಕಾಮಗಾರಿಗಳನ್ನು ಕೊಟ್ಟು ಜನರಿಗೆ ಎಲ್ಲಾ ಸೌಕರ್ಯಗಳನ್ನು ಒದಗಿಸಿ ಕೊಟ್ಟಿದೆ. ಆದರೆ ಕಳೆದ ಒಂದು ತಿಂಗಳಿಂದ ಅನೇಕ ಕೆಲಸ ಕಾರ್ಯಗಳನ್ನು ಬಂದ ಮಾಡಿದ್ದಾರೆ. ಇದರಿಂದ ಕೆಲವು ಕಡೆ ಕೆರೆಗಳ ಕೆಲಸ ಅರ್ಧದಲ್ಲಿ ನಿಂತು ಹೋಗಿ ನೀರು ಬಂದರೆ ಅದರಿಂದ ಮಾಡಿದ ಕೆಲಸವೂ ನಿಷ್ಪ್ರಯೋಜನವಾಗುವುದು. ಆದ್ದರಿಂದ ಮಾಡಿದ ಕೆಲಸಗಳನ್ನು ಒಂದು ಉಪಯೋಗ ಮಟ್ಟಕ್ಕೆ ತರುವುದು ಒಳ್ಳೆಯದು. ಇಂಥ ಕೆಲಸಗಳನ್ನು ಬರಗಾಲ ಭೀತಿಗೆ ಮಾತ್ರ ಮಾಡಿದರೆ ಸಾಲದು. ನಾವು ಖಾಯಂ ಆಗಿ ಇವುಗಳನ್ನು ಮಾಡಿ ಜನರಿಗೆ ಉಪಯೋಗ ವಾಗುವ ಹಾಗೆ ಮಾಡಿದರೆ ಬಹಳ ಒಳ್ಳೆಯದು ಎಂದು ಹೇಳುತ್ತೇನೆ. ಬೆಳಗಾಂ ಜಿಲ್ಲೆಯ ವಿಷಯ ಹೇಳುವುದಾದರೆ ಘಟಪ್ರಭಾ ಬಲದಂಡೆಯ ಯೋಜನೆಯನ್ನು ನಾಲ್ಕನೇಯ ಪಂಚವಾರ್ಷಿಕ ಯೋಜನೆಯಲ್ಲಿ ಕೈ ಬಿಡಲಾಗಿದೆ ಎಂದು ಕಂಡು ಬರುತ್ತದೆ. ಹಿಡಕಲ್ ಡ್ಯಾಂ 1973 ರಲ್ಲಿ ಪೂರ್ತಿಯಾಗುವ ಸಂಭವವಿದೆ. ಘಟಪ್ರಭಾ ಯೋಜನೆಯೂ ಈಗಿನಿಂದಲೇ ಪ್ರಾರಂಭವಾಗದಿದ್ದರೆ ಮುಂದೆ 3 ಲಕ್ಷ ಎಕರೆ ಭೂಮಿಯನ್ನು ಸರಿಯಾಗಿ ಉಪಯೋಗ ಮಾಡಲಾಗದೇ ಬರಗಾಲ ಬರಬಹುದು. ಮುಂದಿನ ಜನರು ಇದಕ್ಕೆ ಶಾಪವನ್ನು ಹಾಕಬಹುದು. ಇನ್ನು ಹತ್ತು ವರ್ಷ ಮುಂದುವರಿಸಿ ಹೋಗುವುದೆಂದರೆ ಅದು ದುರ್ದೈವದ ಸಂಗತಿ. ಈ ಕೆಲಸ ಹಿಡಕಲ್ ಯೋಜನೆ ಪೂರ್ತಿಯಾಗುವದರೊಳಗೆ ನಾಲ್ಕನೇಯ ಪಂಚವಾರ್ಷಿಕ ಯೋಜನೆಯಲ್ಲಿ ಮಾಡಿದರೆ, ಜನರಿಗೆ ಬಹಳ ಉಪಯೋಗವಾಗುತ್ತದೆ. ಮತ್ತು ಅಲ್ಲಿಯ 3 ಲಕ್ಷ ಎಕರೆಯನ್ನು ಸರಿಯಾಗಿ ವ್ಯವಸಾಯಕ್ಕೆ ಉಪಯೋಗಿಸಿಕೊಂಡು ಬರುವಂತಹ ಬರಗಾಲವನ್ನು ತಪ್ಪಿಸಬಹುದು. ಅದರ ಬಗ್ಗೆ ರಾಜ್ಯಪಾಲರ ಭಾಷಣದಲ್ಲಿ ಯಾವ ರೀತಿಯ ಉಲ್ಲೇಖವೂ ಇಲ್ಲ. ಅದಲ್ಲದೇ ಇದು ನೂರು ವರ್ಷಕ್ಕಿಂತಲೂ ಹಿಂದಿನದು. ಹಿಂದಿನ ಕಾಲದಿಂದಲೂ ಅದನ್ನು ಪೂರ್ಣ ಮಾಡುತ್ತೇವೆಂಬ ಭರವಸೆಯನ್ನು ಕೊಡುತ್ತಿದ್ದಾರೆ. ಈಗ ಮೈಸೂರು ರಾಜ್ಯವಾಗಿಯೂ ಕೂಡ 11-12 ವರ್ಷಗಳಾದರೂ ಆ ಯೋಜನೆ ಅಲ್ಲೇ ಉಳಿಯಿತು. ಆದ್ದರಿಂದ ಸರ್ಕಾರ ಇದರ ಬಗ್ಗೆ ಸೂಕ್ತ ಗಮನ ಕೊಟ್ಟು ಆದಷ್ಟು ಜಾಗೃತೆಯಾಗಿ ಇದನ್ನು ಕೈಕೊಳ್ಳಬೇಕೆಂದು ಕೇಳಿಕೊಳ್ಳುತ್ತೇನೆ.

**ಭೂ ಸುಧಾರಣೆ :** ಇನ್ನು ಭೂ ಸುಧಾರಣೆಯ ಬಗ್ಗೆ ಹೇಳುವುದಾದರೆ ಮೈಸೂರು ರಾಜ್ಯದಲ್ಲಿ ಭೂ ಸುಧಾರಣೆ ಇಲ್ಲವೇ ಎನ್ನುವ ಮಟ್ಟಕ್ಕೆ ಬಂದಿದೆ. ನಮ್ಮ ಟೆನೆನ್ಸಿ ಆಕ್ಟ್ ನಿರುಪಯೋಗವಾಗಿ ಹೋಗಿದೆ. ಇವತ್ತು ಅನೇಕ ರೀತಿಯ ಭೂ ಸುಧಾರಣೆ ನಡೆಯದೇ ನಿಂತು ಹೋಗಿದೆ. ರೈತರಿಗೆ ಜಮೀನು ಸಿಗಲಿಲ್ಲ. ಉಳಿದವರಿಗೂ ಜಮೀನು ಸಿಗುತ್ತಾ ಇಲ್ಲ. ಬಡ ರೈತರು ಇನ್ನು ಹೆಚ್ಚು ಹೆಚ್ಚು ಗೇಣಿ ಕೊಡಬೇಕಾದ ಪರಿಸ್ಥಿತಿ ಬಂದಿದೆ. ಈ ಆಕ್ಟನ್ನು ಕೋರ್ಟಿನಲ್ಲಿ ಅನೇಕ ರೀತಿಯಲ್ಲಿ ಅರ್ಥ ಮಾಡಿಕೊಂಡು ಹೆಚ್ಚು ಹೆಚ್ಚು ಗೇಣಿಯನ್ನು ಕೊಡುವ ಹಾಗೆ ಆಗಿದೆ. ಮುಂಚೆ ರಾಜ್ಯದಲ್ಲಿ ನಿಶ್ಚಿತ ಗೇಣಿ ಇತ್ತು. ಅದು ಹೋಗಿ ಈಗ ಎಷ್ಟು ಫಸಲು ಬರುತ್ತದೆ ಅವರ ಮೇಲೆ ಕೊಡಬೇಕೆಂದಾಗಿದೆ. 50 ರೂಪಾಯಿ ಕೊಡುವವನಿಗೆ ಈ ಕ್ರಮದ ಪ್ರಕಾರ ಸಾವಿರ ರೂಪಾಯಿ ಕೊಡುವ ಪರಿಸ್ಥಿತಿ ಬಂದಿದೆ. ಇದರಿಂದ ಅವರು ಸಾಗುವಳಿ ಮಾಡದೇ ಮಾಲೀಕರಿಗೆ ಬಿಟ್ಟುಕೊಡುವ ಪರಿಸ್ಥಿತಿ ಬರಬಹುದು. ಈ ಭೂ ಸುಧಾರಣೆಗೆ ತಿದ್ದುಪಡಿಮಾಡದೇ ಹೋದರೆ ರೈತರಿಗೆ ಪ್ರೋತ್ಸಾಹ ಕೊಟ್ಟ ಹಾಗೆ ಆಗುವದಿಲ್ಲ. ಆದ್ದರಿಂದ ಅದನ್ನು ಕಂದಾಯ ಮಂತ್ರಿಯವರು ಈ ವಿಚಾರದಲ್ಲಿ ಸಾಕಷ್ಟು ಅನುಭವವುಳ್ಳವರಾಗಿದ್ದಾರೆ. ಅವರು ಇದಕ್ಕೆ ಒಂದು ಯೋಗ್ಯ ಕ್ರಮವನ್ನು ತೆಗೆದುಕೊಳ್ಳಬಹುದು ಎಂದು ನಾನು ತಿಳಿದುಕೊಂಡಿದ್ದೇನೆ. ನಾಲ್ಕನೇಯ ಯೋಜನೆಯಲ್ಲಿ ನಮಗೆ ಹಣದ ಕೊರತೆ ಸಾಕಷ್ಟು ಆಗಬಹುದೆಂದು ಕಂಡು ಬರುತ್ತದೆ. ಧಾರಣೇಗಳು ಒಂದು ಕಡೆ ಏರುತ್ತಾ ಇವೆ. ಇದಕ್ಕೆ ಸರಿಯಾಗಿ ನಾವು ನಮ್ಮ ಯೋಜನೆಗೆ ಕಂದಾಯದ ಮೂಲಕ ಸರಿದೂಗಿಸಬೇಕಾಗಿದೆ. ಇದರಿಂದ ನಾವು ಎಷ್ಟು ತೊಂದರೆಗೆ ಒಳಗಾಗಬಹುದೆಂಬುದನ್ನು ವಿಚಾರಿಸಬೇಕು. ಏಕೆಂದರೆ ನಾಳೆ ತುಕೋಳ್ ಆಯೋಗದ ರಿಪೋರ್ಟ ಏನು ಮಾಡಿದ್ದಾರೆ ಅದನ್ನು ಲೆಕ್ಕಕ್ಕೆ ತೆಗೆದುಕೊಂಡರೆ ನಮಗೆ ಎಷ್ಟು ಹಣವಾಗಬೇಕು; ಇದನ್ನೆಲ್ಲಾ ಗಮನಕ್ಕೆ ತಗೆದುಕೊಳ್ಳಬೇಕು ಆದರೆ ಇದರ ಬಗ್ಗೆ ರಾಜ್ಯಪಾಲರು ಭಾಷಣದಲ್ಲಿ ಹೆಚ್ಚಿನ ವಿವರ ಕೊಟ್ಟಿಲ್ಲ ಏಕೆಂದು ಗೊತ್ತಾಗಿಲ್ಲ.

ಯೋಜನೆಯ ಬಗ್ಗೆ ಮಾನ್ಯ ರಾಜ್ಯಪಾಲರು ಕೆಲವೊಂದು ಮಾತುಗಳನ್ನು ಹೇಳಿದ್ದಾರೆ ಇದಕ್ಕೆ ಸರ್ಕಾರದವರು ಹೊಸದಾಗಿ ತೆರಿಗೆಯನ್ನು ಹಾಕುವುದರ ಮೂಲಕವೋ ಅಥವಾ ಇನ್ನು ಯಾವುದಾದರೂ ಮುಖಾಂತರವೋ ಹಣವನ್ನು ಒದಗಿಸಿಕೊಳ್ಳಬೇಕಾಗುತ್ತದೆ. ಮತ್ತು ಯಾವುದೇ ರೀತಿಯಲ್ಲಾದರೂ ಕೇವಲ ಕೇಂದ್ರ ಸರ್ಕಾರಕ್ಕೆ ಕೈ ಒಡ್ಡಬೇಕು.

ನಮ್ಮ ರಾಜ್ಯದಲ್ಲಿ ಸಾಕಷ್ಟು ಆಹಾರ ಧಾನ್ಯವನ್ನು ಬೆಳೆಯುತ್ತಿದ್ದಾರೆ ಅದರಲ್ಲಿಯೂ ನಮ್ಮಲ್ಲಿ ಹೊಸ ತಳಿ ಬಂದಾಗಿನಿಂದ ಉತ್ತಮ ರೀತಿಯಲ್ಲಿ ರೈತರು ಬೆಳೆಗಳನ್ನು ಬೆಳೆಯುತ್ತಿದ್ದಾರೆ. ರೈತರಿಗೆ ಉತ್ತೇಜನ ಸಿಕ್ಕಬೇಕಾದರೆ ಅವರು ಬೆಳೆದಂತಹ ಧಾನ್ಯಕ್ಕೆ ಸರಿಯಾದ ಬೆಲೆ ಸಿಕ್ಕುವಂತಾಗಬೇಕು. ಘಟಪ್ರಭಾ ಯೋಜನೆಯ ಕೆಳಗೆ ಮುತ್ತು ಇನ್ನು ಉಳಿದ ಕಡೆಗಳಲ್ಲಿ ಮುಸುಕಿನ ಜೋಳವನ್ನು ಸಾಕಷ್ಟು ಬೆಳೆಯುತ್ತಿದ್ದಾರೆ. ಮುತ್ತು ಮಿಶ್ರ ತಳಿ ಜೋಳವನ್ನು ಸಾಕಷ್ಟು ಬೆಳೆಯುತ್ತಿದ್ದಾರೆ. ಮೈಸೂರು ಕಡೆಯಲ್ಲೂ ಸಹ ಮಿಶ್ರ ತಳಿ ಗೋವಿನ ಜೋಳವನ್ನು ಸಾಕಷ್ಟು ಬೆಳೆಯುತ್ತಿದ್ದಾರೆ. ಆದರೆ ದುರ್ದೈವವಶಾತ್ ರೈತರಿಗೆ ಅವರು ಬೆಳೆದಂತಹ ಮಾಲಿಗೆ, ಧಾನ್ಯಕ್ಕೆ ಸಾಕಷ್ಟು ಧಾರಣೆ ಸಿಕ್ಕುತ್ತಾ ಇಲ್ಲ. 1 ಕ್ವಿಂಟಲ್‌ಗೆ 55 ರೂಪಾಯಿಗಳು ಇದ್ದದ್ದು 50 ರೂಪಾಯಿಗಳಿಗೆ ಇಳಿದಿದೆ. ಇದರಿಂದ ರೈತರಿಗೆ ಸರಿಯಾದಂತಹ ಪ್ರೋತ್ಸಾಹ ಸಿಕ್ಕುತ್ತಾ ಇಲ್ಲ. ಮುಸುಕಿನ ಜೋಳದ ಬೆಳೆಯನ್ನು ಮಾಡಬೇಕೋ ಬೇಡವೋ ಎನ್ನುವ ಸಮಸ್ಯೆ ರೈತರಿಗೆ ಬಂದಿದೆ. ಹೈಬ್ರಿಡ್ ಜೋಳವನ್ನು ಎಲ್ಲಾ ಕಡೆಗಳಲ್ಲಿಯೂ ರೈತರು ಸಾಕಷ್ಟು ಬೆಳೆಯುತ್ತಿದ್ದಾರೆ. ಆದರೆ ಆ ಜೋಳಕ್ಕೆ ಸರಿಯಾದಂತಹ ಧಾರಣೆಗಳು ಸಿಕ್ಕುತ್ತವೆಯೋ ಇಲ್ಲವೋ ಎನ್ನುವ ಪರಿಸ್ಥಿತಿ ಬಂದಿದೆ. ಮುಸುಕಿನ ಜೋಳವನ್ನು ಕೆಲವು ಜನ ತಿನ್ನಬಹುದು. ಹೈಬ್ರಿಡ್ ಜೋಳವನ್ನು ಸಾಕಷ್ಟು ಜನ ತಿನ್ನುತ್ತಾ ಇಲ್ಲ. ಎಲ್ಲಾ ಕಡೆಗೂ ಇದು ಸರಿಯಾದ ಆಹಾರ ಎನ್ನುವ ಮಾತನ್ನು ಜನ ಒಪ್ಪಿಕೊಂಡಿಲ್ಲ. ಮಂಗಳೂರು ಮತ್ತು ಹಳೇ ಮೈಸೂರು ಪ್ರದೇಶಗಳಲ್ಲಿ ಜೋಳವನ್ನು ತಿನ್ನುವುದು ಕಡಿಮೆ. ಧಾರವಾಡ ಜಿಲ್ಲೆಯಲ್ಲಿಯೂ ಮುಸುಕಿನ ಜೋಳವನ್ನು ತಿನ್ನುವ ಜನ ಬಹಳ ಕಡಿಮೆ. ಆದ್ದರಿಂದ ಈ ಜೋಳಕ್ಕೆ ಸರಿಯಾದ ಧಾರಣೇ ಸಿಕ್ಕುತ್ತಾ ಇಲ್ಲ. ಇದನ್ನು ಹೊರಗಡೆ ಕಳುಹಿಸಬೇಕಾಗುತ್ತದೆ. ಹಿಂದೆ ಅಹಮದಾಬಾದ್‌ನಲ್ಲಿ ಹೊರಗಡೆಯಿಂದಾ ಮುಸುಕಿನ ಜೋಳವನ್ನು ತರಿಸುತ್ತಿದ್ದರು. ಅದಕ್ಕಾಗಿ ಈ ವರ್ಷ ಕೇಂದ್ರದವರು ಮುಸುಕಿನ ಜೋಳವನ್ನು ಹೊರಗಡೆಯಿಂದ ತರಿಸುವುದಕ್ಕೆ ನಿರ್ಬಂಧವನ್ನು ಹಾಕಿ ನಮ್ಮ ದೇಶದಲ್ಲಿಯೇ ಸಾಕಷ್ಟು ಮುಸುಕಿನ ಜೋಳ ಸಿಕ್ಕುತ್ತಾ ಇರುವಾಗ ಹೊರಗಡೆಯಿಂದಾ ಅದನ್ನು ತರಿಸಬೇಡಿ ಎಂದು ಮಾಡಿದ್ದಾರೆ. ಹೀಗೆಯೇ ಬೆಲೆಗಳು ಇಳಿಯುತ್ತಾ ಹೋದರೆ ಹೊಸ ತಳಿಯ ಮುಸುಕಿನ ಜೋಳ, ಹೈಬ್ರಿಡ್ ಜೋಳ ಏನಿದೆ ಅದನ್ನು ಬೆಳೆಯುವುದಕ್ಕೆ ತೊಂದರೆಯಾಗುತ್ತದೆ. ಆದ್ದರಿಂದ ಸರ್ಕಾರದವರು ಇದನ್ನು ವಿಚಾರ ಮಾಡಿ ಮೈಸೂರು ರಾಜ್ಯಕ್ಕೆ ಒಂದು ಸ್ಟಾರ್ಚ್ ಕೈಗಾರಿಕೆಗಳನ್ನು ಸ್ಥಾಪನೆ ಮಾಡಿದರೆ ಒಳ್ಳೆಯದಾಗುತ್ತದೆ. ಆದುದರಿಂದ ಕೈಗಾರಿಕೆಯನ್ನು ಬೆಳೆಸಿದಂತಾಗುತ್ತದೆ. ಇದನ್ನು ಸರ್ಕಾರದವರು ವಿಚಾರ ಮಾಡಬೇಕು ಎಂದು ಹೇಳುತ್ತೇನೆ.

# ಮೈಸೂರು ಭೂ ಪುನರ್ ಯೋಜನಾ ಮಸೂದೆ

**ಪಂಚಗಾವಿ ಅವರಷ್ಟು ರೈತಾಪಿ ಕಷ್ಟ ಸಮಸ್ಯೆ ಅರಿತವರು ವಿರಳ! ಶಾಸನ ಸಭೆಯ ಒಳಗೂ - ಹೊರಗೂ ಅನವರತ ಕೃಷಿಕರ ಪರವಾಗಿ ಚಿಂತನೆ ಮಾಡುತ್ತ ಹೋರಾಟ ಮಾಡುತ್ತ ಬಂದ ಅಪರೂಪದ ರಾಜಕಾರಣಿ! ಶಾಸನ ಸಭೆಯಲ್ಲಿ ರೈತರು ರಾಯಭಾರಿಯಾಗಿ ಪಂಚಗಾವಿಯವರ ವುತ್ತಷ್ಟು ಚಿಂತನೆಗಳು ಇಲ್ಲಿವೆ.**

ಈ ಮಹತ್ವದ ಬಿಲ್ಲಿನ ಮೇಲೆ ಭಾಷಣ ಮಾಡಲು ನನಗೆ ಅವಕಾಶ ಸಿಕ್ಕಿದ್ದಕ್ಕಾಗಿ ನಾನು ಅಧ್ಯಕ್ಷರ ಆಭಾರ ಮನ್ನಿಸಿ ನನ್ನ ಭಾಷಣವನ್ನು ಪ್ರಾರಂಭಿಸುತ್ತೇನೆ. ಮಾನ್ಯ ಮಂತ್ರಿಗಳು ತಮ್ಮ ಭಾಷಣದಲ್ಲಿ ಈ ಬಿಲ್ಲಿನ ಬಗ್ಗೆ ಕೆಲವೊಂದು ಉಪಯುಕ್ತವಾದ ಮಾಹಿತಿಗಳನ್ನು ಕೊಟ್ಟಿದ್ದಲ್ಲದೇ ಆ ಬಗ್ಗೆ ಕೆಲವು ಮಾತುಗಳನ್ನು ಅಭಿಮಾನದಿಂದ ಹೇಳಿದ್ದಾರೆ. ಪ್ಲ್ಯಾನಿಂಗ್ ಕಮೀಷನ್‌ನವರು ಗೇಣಿದಾರರಿಗೆ ಹಕ್ಕುಗಳನ್ನು ಕೊಡುವ ಬಗ್ಗೆ ಕೆಲವಾರು ಯೋಜನೆಗಳನ್ನು ಮಾಡಿದ್ದಾರೆ. ಅದಲ್ಲದೇ ಆಕ್ಯುಪೆನ್ಸಿನ್‌ಗಳನ್ನು ಕೊಡುವುದು ಒಂದು ಅದಲ್ಲದೇ ಅವರಿಗೆ ಹಿಡುವಳಿ ಭದ್ರತೆ ಮತ್ತು ಷೇರು, ರೇಂಟುಗಳನ್ನು ಒಂದು ನಿರ್ದಿಷ್ಟ ಗೇಣಿಯ ಮಿತಿ ಮತ್ತು ಸಣ್ಣ ಹಿಡುವಳಿದಾರರ ಮೇಲೆ ಜನತೆಯ ಅಭಿಪ್ರಾಯಗಳನ್ನು ಅದರ ಮೂಲಕ ಇಡಲು ಪ್ರಯತ್ನ ಮಾಡಿದ್ದಾರೆ. ಮಾನ್ಯ ಮಂತ್ರಿಗಳು ತಮ್ಮ ಭಾಷಣದಲ್ಲಿ ಹೇಳಿದಂತೆ ನಮ್ಮ ಮುಂದಿರುವ ಈ ಬಿಲ್ಲು ಹೆಚ್ಚಾಗಿ ಸಾಲದ ಇಂಟರೆಸ್ಟಿಗೆ ಸೇರಿದ್ದು ಎಂದು ಹೇಳಲಿಕ್ಕೆ ಅಡ್ಡಿಯಿಲ್ಲ. ಯಾರೂ ಸ್ವತಃ ಜಮೀನನ್ನು ಮಾಡದೇ ರೈತರ ಮೇಲೆ ತಮ್ಮ ಭಾರವನ್ನು ಪೂರ್ಣವಾಗಿಟ್ಟು ಜೀವನ ಮಾಡುವರೋ ಅವರೇ ವಿರೋಧಿಸುವವರು. ಇದರಲ್ಲಿ 5,600 ರೂಪಾಯಿಗಳನ್ನು ಐದು ಜನರಿರುವ ಕುಟುಂಬಕ್ಕೆ ಸಿಲಿಂಗ್ ಲಿಮಿಟ್ಟಾಗಿ ಇಡಲಾಗಿದೆ. ವಾಸ್ತವವಾಗಿ ನೋಡಿದರೆ ಈ 3,600 ರೂಪಾಯಿಗಳ ಹಿಡುವಳಿ ಎಂದು ಮಾಡಿರುವುದು ಜಾಸ್ತಿಯೆಂದು ಹೇಳಲು ಅಡ್ಡಿಯಿಲ್ಲ. ದುಡಿಯುವವನಿಗೆ ಭೂಮಿ ಸಿಕ್ಕಬೇಕು ಎಂದು ಇರುವಾಗ ಈ ರೀತಿ 3,600 ರೂಪಾಯಿಗಳನ್ನು ಪರಮಾವಧಿಯಾಗಿ ಮಾಡಿರುವುದನ್ನು ನೋಡಿದರೆ ಯಾರು ಕಷ್ಟ ಪಟ್ಟು ದುಡಿಮೆಯನ್ನು ಮಾಡುತ್ತಿರುತ್ತಾನೋ ಅವನು ಕಡೆಯವರೆಗೆ ಕೂಲಿಯ ಆಳಾಗಿಯೇ ಇದ್ದು, ಕೆಲಸಮಾಡಬೇಕಾಗಿದೆ. ನಿಜವಾಗಿಯೂ ನೋಡಿದರೂ ಬಡವನಿಗೆ ಸಿಕ್ಕುವುದು ಕಷ್ಟದ ಕೆಲಸವೆನ್ನಲು ಅಡ್ಡಿಯಿಲ್ಲ. 1952 ರ ಧಾರಣೆಯೇ ಕಡೆಯವರೆಗೂ ಇರುತ್ತದೆ

ಎಂದು ತಿಳಿದುಕೊಂಡು ಕೆಲವರಿಗೆ ಭೂಮಿಯೂ ಸಿಕ್ಕಬಹುದು ಎಂದು ಮಾನ್ಯ ಮಂತ್ರಿಗಳು ಲೆಕ್ಕ ಮಾಡಿ ಇಲ್ಲಿ ತಿಳಿಸಿದರು. ನಾವು ಲೆಕ್ಕವನ್ನು ಮಾಡುವಾಗ ಬೇರೆ ಬೇರೆ ಕಡೆಗೆ ಇರುವ ಉತ್ಪನ್ನಗಳ ಬಗ್ಗೆ ಕೆಲವೊಂದು ಮಾತುಗಳನ್ನು ಲಕ್ಷ್ಯದಲ್ಲಿಡಬೇಕು. ಈ ಉತ್ಪನ್ನದ ಮೇಲೆ ಲೆಕ್ಕ ಹಾಕುವಾಗ ಜಿರಾಯಿತ್ತಿಗೆ ಖರ್ಚು ಎಷ್ಟು ಬರಬಹುದು ಬಾಗಾಯತಿಗೆ ಎಷ್ಟು ಬರಬಹುದು ಎನ್ನುವುದರ ಸಂಬಂಧವಾಗಿ ವಾದ - ವಿವಾದಗಳು ಎದ್ದಿವೆ. ಬಾಗಾಯತಿನ ಖರ್ಚಿನ ಪ್ರಮಾಣವನ್ನು ಲೆಕ್ಕ ಹಾಕಿದರೆ ಖರ್ಚು ಕಡಿಮೆ ಮತ್ತು ಉತ್ಪನ್ನ ಜಾಸ್ತಿ. ಜಿರಾಯಿತಿನ ಭೂಮಿಗೆ ಮಳೆ ಬಾರದೇ ಬೆಳೆ ಬರದೇ ಹೋಗಿ ಬರಗಾಲದ ಪರಿಸ್ಥಿತಿ ಇದೆ. ಇದನ್ನು ಕೂಡ ಲೆಕ್ಕ ಹಾಕಿಕೊಂಡು ನೋಡಬೇಕು. ರೈತನಾದವನು ಇಡೀ ವರ್ಷ ದುಡಿದವನು ಎತ್ತುಗಳು ಮತ್ತು ಇತರ ಎಲ್ಲ ಸಾಮಾನುಗಳನ್ನು ಕೊಳ್ಳುವ ಖರ್ಚನ್ನು ಲೆಕ್ಕ ಹಾಕಿ ನೋಡಿದರೆ ಖುಷ್ಕಿ ಜಮೀನಿಗೆ ಖರ್ಚಿನ ಕಡಿಮೆಯಾಗುವುದಿಲ್ಲ. ಉತ್ಪನ್ನ ಕಡಿಮೆ ಹೀಗಾಗಿ ವರ್ಷದ ಕೊನೆಯಲ್ಲಿ ಅವನು ಎತ್ತುಗಳನ್ನು ಮಾರಿದರೂ ಕಂದಾಯವನ್ನು ಕೊಡಲು ಶಕ್ಯವಿಲ್ಲದಂತಹ ಸ್ಥಿತಿಗೆ ಬರುತ್ತಾನೆ. ನಮ್ಮ ಕಡೆಯಲ್ಲಿ ದುಷ್ಕಾಲದ ಪರಿಸ್ಥಿತಿ ಮೇಲಿಂದ ಮೇಲೆ ಬರುತ್ತದೆ. ವಿಜಾಪೂರ, ಬೆಳಗಾಂವ, ದಾರವಾಡ ಜಿಲ್ಲೆಯ ಕೆಲವು ಭಾಗಗಳು ಮತ್ತು ಹಳೆಯ ಮೈಸೂರಿನ ಭಾಗಗಳಾದ ಕೋಲಾರ ತುಮಕೂರ, ಇಲ್ಲಿಯೂ ಕೂಡ ಮೇಲಿಂದ ಮೇಲೆ ಬರಗಾಲದ ಪರಿಸ್ಥಿತಿ ಬರುತ್ತಿದೆ ಎನ್ನುವುದು ಎಲ್ಲರೂ ಕಂಡ ಮಾತು. ಇದನ್ನು ಲೆಕ್ಕ ಹಾಕಿದರೆ ನಮ್ಮ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಕೆಂಪಯ್ಯನವರು ಹೇಳಿದ ಮಾತುಗಳು ನಿರಾಧಾರವಾದವು. ಎಂದು ಹೇಳಲಿಕ್ಕೆ ಅಡ್ಡಿಯೇನಿಲ್ಲ. ನಾನು ಒಬ್ಬ ಪ್ರತ್ಯಕ್ಷವಾಗಿ ದುಡಿಯತಕ್ಕಂಥ ರೈತ ಅದರಿಂದ ನಮ್ಮ ಭಾಗದ ಅನುಭವ ಅವರಿಗೆ ಗೊತ್ತಿಲ್ಲ. ಮತ್ತು ನಮ್ಮ ಭಾಗದಲ್ಲಿರುವ ಕಷ್ಟಗಳೇನು ಎನ್ನುವುದ ಅವರಿಗೆ ಗೊತ್ತಿಲ್ಲ ಎಂದು ನನ್ನ ಭಾವನೆ. ಸಾಧಾರಣವಾಗಿ ನಮ್ಮ ಕಡೆಗೆ ನಾಲ್ಕು ಎಕರೆಗೆ 1 ಚೀಲ ಕಾಳು ಬರುವ ಜಮೀನುಗಳು ಉಂಟು. ಒಂದು ಚೀಲ ಸಜ್ಜೆ ಕೂಡ ಒಮ್ಮೊಮ್ಮೆ ಬರುವದಿಲ್ಲ. ಆಮೇಲೆ Black cotton soil land ನಲ್ಲಿ ಸಾಧಾರಣವಾಗಿ ಮಳೆ ಬಾರದಿರುವ ಭಾಗಗಳು ಇವೆ. ಕೆಲವರು ಈಗ 40 ವರ್ಷಗಳ ಹಿಂದೆ ಇದ್ದಂತಹ ಬೆಟರ್‌ಮೆಂಟನ್ನು ಕೂಡ ಕೊಡದೇ ಜಮೀನನ್ನು ಬಿಟ್ಟು ಹೋಗಿದ್ದಾರೆ. ಎಂದರೆ ಕಂದಾಯ ಕೊಡುವುದು ಕೂಡ ಅವರಿಗೆ ಒಂದು ಭಾರವಾಗಿದೆ. ಮೇಲಿಂದ ಮೇಲೆ ಬರಗಾಲಕ್ಕೆ ತುತ್ತಾಗುತ್ತಿರುವುದೇ ಇದಕ್ಕೆ ಕಾರಣವಾಗಿದೆ. ಇಂಥ ಪರಿಸ್ಥಿತಿ ಇರುವಾಗ ಕೆಲವು ಕಡೆ ಹೆಚ್ಚಿಗೆ ಬರಬಹುದು ಕೆಲವು ಕಡೆ ಕಡಿಮೆ ಬರಬಹುದು. ಫ್ಯಾಮಿಲಿ ಹೋಲ್ಡರಗೆ 1.200 ರೂಪಾಯಿಗಳೆಂದು ಮಾಡಿರುವದರಿಂದ ಸಾಧಾರಣವಾಗಿ 60-70 ಎಕರೆಗಳಷ್ಟು ಜಮೀನು ಬರುತ್ತದೆ. ಸೀಲಿಂಗ ಲಿಮಿಟ ಐ ಎಸ್. 200 ಎಕರೆಗಳವರೆಗೆ ಆಗಬಹುದು.

ಮತ್ತು ದೊಡ್ಡ ಕುಟುಂಬವಿದ್ದರೆ ಅಂದರೆ ಐದು ಜನಗಳಿಗಿಂತ ಹೆಚ್ಚು ಇದ್ದರೆ ಅದಕ್ಕೆ ಎರಡು ಪಟ್ಟು ಜಮೀನನ್ನು ರೈತರಿಗೆ ಬಿಡಬೇಕಾಗುತ್ತದೆ. ಇದು ಸ್ವಂತ ಜಮೀನು ಮಾಡುವವರೆಗೆ ಆಗುತ್ತದೆ. ನಮ್ಮ ಕಡೆಗೆ ಭೂಮಿ ಸಿಕ್ಕುವುದೇ ಕಷ್ಟ. ಜಮೀನು ಮಾಡುವವರಿಗೆ ಒಂಧೆರಡು ಎಕರೆ ಭೂಮಿ ಸಿಕ್ಕುವುದಿಲ್ಲ. ಶಿಲಿಂಗ್ ನಾವು ಹಾಕುವಾಗ **3.600** ಎಂದು ಮಾಡಿರುವ ಲಿಮಿಟಿಗಿಂತ ಇನ್ನು ಕಡಿಮೆ ಮಾಡಬೇಕು. ಅದನ್ನು ಮೊದಲೇ ಪರ್ಯಾಲೋಚಿಸಿದರೆ ಒಳ್ಳೆಯದೆಂದು ನನಗನಿಸುತ್ತದೆ. ಹೈದರಾಬಾದಿನಲ್ಲಿ ಒಂದು ಫ್ಯಾಮಿಲಿ ಹೋಲ್ಡರಗೆ **800** ರೂಪಾಯಿಗಳು ಎಂದು ಇಟ್ಟಿದೆ. **3.600** ಶಿಲಿಂಗ ಇಡುವುದಕ್ಕಿಂತ ಅಲ್ಲಿ **2.4** ರೂಪಾಯಿಗಳು ಯೋಗ್ಯವೆಂದು ನನಗನಿಸುತ್ತದೆ. ಜತ್ತಿ ಕಮೀಟಿಯೊಳಗೆ **5.400** ರೂಪಾಯಿಗಳು ಶಿಲಿಂಗ ಇದ್ದುದ್ದನ್ನೇ ಕಡಿಮೆ ಮಾಡಬಾರದೆಂದು ಕೆಲವರ ವಾದ. ಆದರೆ ಮಾನ್ಯ ಮಂತ್ರಿಗಳ ಭಾಷಣ ನೋಡಿದರೆ ಈಗ ಹಾಕಿರುವ ಶಿಲಿಂಗ್ ಲಿಮಿಟ್ ಪ್ರಕಾರ ಶೇ. **3** ರಷ್ಟು ಕೂಡ ಜಮೀನು ಹಿಡುವಳಿದಾರರಿಗೆ ಪರಿಣಾಮವಾಗುವುದಿಲ್ಲ. ಜಮೀನು ಸಿಕ್ಕುವುದಿಲ್ಲ. ನಮ್ಮ ರೈತರಿಗೆ ಭೂಮಿ ಸಿಕ್ಕುತ್ತದೆ ಎಂಬುದು ಕೂಡ ಕಷ್ಟ. ಈ ಕಾಯಿದೆ ರಾಜ್ಯದಲ್ಲೆಲ್ಲಾ ಜಾರಿಗೆ ಬರುತ್ತದೆಂಬುದು ಬಹಳ ದಿನಗಳಿಂದ ಜನರಿಗೆ ಆಸೆಯಿತ್ತು. ಮುಂಬೈ ರಾಜ್ಯದಲ್ಲಿ ಈ ಕಾಯಿದೆ ಮೊದಲೇ ಜಾರಿಗೆ ಬರಬೇಕಾಗಿತ್ತು ಅದು ಬರಲಿಲ್ಲ. ಕೆಲವರು ಈ ವಿಷಯವನ್ನು ತಿಳಿದು ಹೇಗಾದರೂ ಈ ಕಾಯಿದೆಯನ್ನು ಜಾರಿಗೆ ಕೊಡುವುದನ್ನೇ ತಪ್ಪಿಸಬೇಕೆಂಬ ಬಗ್ಗೆ ಯೋಚನೆ ಸಹ ಮಾಡಿಬಿಟ್ಟರು. ಏಕೆಂದರೆ ಭೂಮಿಯನ್ನು ರೈತರಿಗೆ ಕೊಡಿಸುತ್ತೇವೆಂದು ಸರ್ಕಾರ ಹೇಳುತ್ತಿರುವದು ಕೇವಲ ಒಂದು ಕಾಗದದ ಮಾತಾಯಿತೆ ವಿನಃ ಮತ್ತೆ ಬೇರೇನೂ ಆಗಲಿಲ್ಲ. ಅದಕ್ಕಾಗಿ ಸಾಧ್ಯವಾದಷ್ಟು ಶಿಲಿಂಗ್ ಲಿಮಿಟ್‌ನ್ನು ಈಗಿರುವದಕ್ಕಿಂತ ಕಡಿಮೆ ಮಾಡುವುದು ಯೋಗ್ಯ ಹೆಚ್ಚು ಮಾಡುವುದಕ್ಕೆ ನಾನು ಪೂರ್ಣ ವಿರೋಧಿ ಇದ್ದೇನೆ. ಮುಂಬೈ ರಾಜ್ಯದಲ್ಲಿ ಸಾಧಾರಣವಾಗಿ **48** ಎಕರೆಯೆಂದು ಖುಷ್ಕಿ ಜಮೀನಿಗೆ ಒಂದು ಶಿಲಿಂಗ್ ಲಿಮಿಟ್ ಅಲ್ಲಿಯ ಕಾಯಿದೆಯಲ್ಲಿ ಇತ್ತು.

ಇನ್ನೊಂದು ಮಾತು ಹೇಳುತ್ತೇನೆ. ಭೂ ಮಾಲೀಕರು ಸ್ವತ: ಸಾಗುವಳಿ ಮಾಡುತ್ತಿದ್ದರು ಅವರಿಗೆ ಸಿಲಿಂಗ್ ಲಿಮಿಟ್ ಅದನ್ನು ಇಲ್ಲಿ ಹಾಕಬೇಕೇ ಬೇಡವೇ ಎಂದು ನಾನು ಹೇಳುತ್ತೇನೆ. ಇದರ ವಿಷಯದ ಒಂದು ನಿರ್ದಿಷ್ಟವಾದ ಅಭಿಪ್ರಾಯವನ್ನು ಬೇಕಾದರೆ ಸೀಲಿಂಗ್ ಲಿಮಿಟ್ ಹಾಕುವುದು ಯೋಗ್ಯವೆಂದು ನನಗನಿಸುತ್ತದೆ. ಏಕೆಂದರೆ ಪರಿಸ್ಥಿತಿ ದಿನೇ ದಿನೇ ಬದಲಾಗುತ್ತಿದೆ. ಮುಂಚಿನ ಪರಿಸ್ಥಿತಿ ಉಳಿದಿಲ್ಲ.

ಇನ್ನು ಸೀಲಿಂಗ್ ವಿಚಾರಕ್ಕೆ ಬರುತ್ತೇನೆ ಇದರಿಂದ ಮಕ್ಕಳ ವಿದ್ಯಾಭ್ಯಾಸ ಮಾಡಿಸುವುದಕ್ಕೆ ಮತ್ತು ಸಾಧಾರಣವಾಗಿ ಜೀವನ ಸಾಗಿಸುವುದಕ್ಕೆ ಕೂಡ ಕಷ್ಟವಾಗಬಹುದು ಎಂಬ ಅಭಿಪ್ರಾಯವಿದೆ. ಈಗ ನೀವೇನು ಸೀಲಿಂಗ ನಿಶ್ಚಿತ ಮಾಡುತ್ತೀರಿ. ಪರಮಾವದಿ ಲಿಮಿಟ್ ಹಾಕುತ್ತೀರಿ ಅದನ್ನು ಉತ್ಪತ್ತಿಯ ಮೇಲೆ ಹಾಕುವುದಾದರೆ ಮುಂದೆ ಬರುಬರುತ್ತಾ ಹೆಚ್ಚು ಉತ್ಪತ್ತಿ ಮಾಡಲು ಪ್ರಾರಂಭಿಸಿದರೆ ಜಮೀನು ಬಿಟ್ಟು ಕೊಡಬೇಂದಿಲ್ಲ. ಒಮ್ಮೆ ನಿರ್ದಿಷ್ಟ ಮಾಡಿ ಇಷ್ಟು ಎಕರೆ ಒಬ್ಬನಿಗೆ ಸೇರಬೇಕು ಎಂದು ಹೇಳಿ ಅವನಿಗೆ ವಹಿಸಿದ ಮೇಲೆ, ಆತ ಉತ್ತು, ಬಿತ್ತಿ ಕುಟುಂಬ ಜೀವನ ಮಾಡಲು ಅಡ್ಡಿಯಿಲ್ಲವೆಂದು ನಿರ್ದಿಷ್ಟ ಮಾಡಿದ ಆತ ಆ ಜಮೀನನ್ನು ಸುಧಾರಿಸಿ ಹೆಚ್ಚು ಉತ್ಪತ್ತಿ ಮಾಡುವುದಕ್ಕೆ ಹತ್ತಿದರೆ ಪುನಃ ಸೀಲಿಂಗ್ ಹಾಕುವುದಿಲ್ಲ. ಉತ್ಪನ್ನದ ಮೇಲೆ ಸೀಲಿಂಗಿಲ್ಲ. ಹಿಡುವಳಿ ಮೇಲಿದೆ. ಈಗ ಸಧ್ಯಕ್ಕೆ ಹಿಡುವಳಿ ಇಷ್ಟು ಎಂದು ಉತ್ಪನ್ನದ ಆಧಾರದ ಮೇಲೆ ನಿರ್ಧಾರ ಮಾಡಿದ್ದೇವೆ. 3,600 ರೂಪಾಯಿಗಳ ಉತ್ಪತ್ತಿಯಿರಬೇಕೆಂದು ಗೊತ್ತು ಮಾಡಿದ್ದೇವೆ. ಉತ್ಪನ್ನದ ಆಧಾರದ ಮೇಲೆ ಪುನಃ ಪುನಃ ಬದಲ ಮಾಡಕೂಡದು, ಒಮ್ಮೆ ಇಷ್ಟು ಎಕರೆಯೆಂದು ನಿರ್ದಿಷ್ಟ ಮಾಡಿದ ಮೇಲೆ ಮತ್ತೆ ಬದಲಾಯಿಸುವ ಪ್ರಸಂಗ ಬರಬಾರದು. ಬಾವಿಯಿಂದ ಒಕ್ಕಲಿಗ ವ್ಯವಸಾಯಗಾರ ಜೀವನ ಸಾಗಿಸುವ ಪರಿಸ್ಥಿತಿ ಬರಬೇಕೆಂದು ಹೇಳುವುದಾದರೆ 36 ನೂರು ರೂಪಾಯಿಗಳಿಂತ ಪರವಾದರು ಕೆಳಗಿಳಿದರೂ ಅಡ್ಡಿಯಿಲ್ಲ ಎಂಬ ಅಭಿಪ್ರಾಯವಿದೆ.

## ಸರಕಾರ ಬಂಡವಾಳ ಶಾಹಿಗಳ ಕೈಗೊಂಬೆಯಾಗದಿರಲಿ

24ನೇ ಫೆಬ್ರವರಿ 1968

### ರಾಜ್ಯಪಾಲರ ಭಾಷಣ ಮೇಲಿನ ಚರ್ಚೆ :

**ದೇಶದಲ್ಲಿ ಹೆಚ್ಚುತ್ತಿರುವ ವಿಛಿದ್ರಕಾರಿ ವಿನಾಶಕಾರಿ ಶಕ್ತಿಗಳ ಕುರಿತು ಆತಂಕ ಭಾಷಾವಾರು ಪ್ರಾಂತ ರಚನೆ ಗೊಂದಲಗಳು ದೇಶದ ಸಮಗ್ರತೆ -ಪ್ರಗತಿಗೆ ಮಾರಕವಾಗಿದ್ದು, ಮಹಾಜನ ಕಮೀಷನ್ ನೇಮಿಸಲು ಆಗ್ರಹಿಸಿದ ಮಹಾರಾಷ್ಟ್ರೀಯರೇ ಈಗ ವಿರೋಧಿಸುತ್ತಿರುವ ದ್ವಂದ್ವ ನೀತಿ ಇತ್ಯಾದಿ.**

ರಾಜ್ಯಪಾಲರ ಭಾಷಣದ ಬಗ್ಗೆ ವಂದನಾರ್ಪಣೆಯನ್ನು ಸಮರ್ಪಿಸುವ ಬಗ್ಗೆ ಈ ಸಭೆಯ ಮುಂದೆ ಏನು ಒಂದು ಸೂಚನೆ, ನಿರ್ಣಯ ಬಂದಿದೆ ಅದನ್ನು ಸಮರ್ಥಿಸುತ್ತಾ ನಾನು ಕೆಲವು ಮಾತುಗಳನ್ನು ಹೇಳಬಯಸುತ್ತೇನೆ.

ಇವತ್ತಿನ ದಿವಸ ರಾಜ್ಯಪಾಲರ ಭಾಷಣದಲ್ಲಿ ಒಂದು ಮಹತ್ವದ ಮಾತು ಬಂದಿಲ್ಲವೆಂದು ಹೇಳಬಹುದು. ಮೊದಲನೆಯದಾಗಿ ನಾವು ಪ್ರಜಾಪ್ರಭುತ್ವದಲ್ಲಿ ಯಾವ ಸಮಾಜವಾದಿ ತಳಹದಿಯ ಮೇಲೆ ಯಾವ ಗುರಿಇಟ್ಟು ರಾಜ್ಯವನ್ನು ಕಟ್ಟಲು ಹೊರಟ್ಟಿದ್ದೇವೋ, ಅದು ಕುಸಿದು ಬಿದ್ದಿದೆ ಎಂದು ಹೇಳಬಹುದು. ಇಂದು ನಾವು ರಾಜ್ಯದಲ್ಲಿ ಬಂಡವಾಳಶಾಹಿ ರಾಜ್ಯವನ್ನು ನಿರ್ಮಾಣ ಮಾಡುತ್ತಿದ್ದೇವೆ. ಪಿ.ಡಬ್ಲ್ಯು. ಡಿ. ಯ ಖಾತೆಯನ್ನು ತೆಗೆದುಕೊಂಡರೆ ಮೊದಲು ಸುಮಾರು ಒಬ್ಬರು ಇಬ್ಬರು ದೊಡ್ಡ ದೊಡ್ಡ ಕಂಟ್ರ್ಯಾಕ್ಟರುಗಳನ್ನು ನಿರ್ಮಾಣ ಮಾಡಿದ್ದಾರೆ. ಇದರಿಂದ ಎಷ್ಟು ಸಾರ್ವಜನಿಕರ ದುಡ್ಡು ಬಂಡವಾಳಶಾಹಿಗಳಿಗೆ ಹೋಗುತ್ತಿದೆ. ಎಂದು ನಾವು ಲೆಕ್ಕ ಹಾಕಬಹುದು. ಅದೇ ರೀತಿಯಲ್ಲಿ ಉದ್ಯಮಗಳಲ್ಲಿಯೂ ಕೇವಲ ಬಂಡವಾಳ ಶಾಹಿಗಳದ್ದೇ ಉದ್ಯಮಗಳು ನಡೆಯುತ್ತಾ ಇವೆ. ಕೇವಲ ಇವತ್ತು ಅಂಥವರಿಗೇನೇ ಮಹತ್ವ ಕೊಡಲಾಗುತ್ತದೆ. ಮೈಸೂರು ರಾಜ್ಯದಲ್ಲಿ ಹೊರಗಿನವರು ಕೂಡ ಬಂಡವಾಳಶಾಹಿಗಳು ಬರುತ್ತಿದ್ದಾರೆ. ಅವರು ನಮ್ಮನ್ನು ಇಂದು ಶೋಷಿಸಿಕೊಂಡು ಹೋಗುತ್ತಿದ್ದಾರೆ. ಅನೇಕ ಸಲ ಸಹಕಾರಿ ತಳಹದಿಯ ಮೇಲೆ, ಸಾಮಾಜಿಕ ತಳಹದಿಯ ಮೇಲೆ ಬಂಡವಾಳ ಕೂಡಿಸಿ ಉದ್ಯಮಗಳನ್ನು ಪ್ರಾರಂಭ ಮಾಡಬೇಕಾದರೆ, ನಮ್ಮ ರಾಜ್ಯದಲ್ಲಿ ಸಾಕಷ್ಟು ಪ್ರೋತ್ಸಾಹ ಅದಕ್ಕೆ ಸಿಗುತ್ತಾ ಇಲ್ಲ.

ಆದರಿಂದಾಗಿ ನಮ್ಮ ಅನೇಕ ಉದ್ಯಮಗಳು ನಷ್ಟ ಹೊಂದಿ ಇದರಿಂದ ಸಾರ್ವಜನಿಕರ ಬಂಡವಾಳದ ಸಾಕಷ್ಟು ಪಾಲು ಸಿಗುತ್ತಾ ಇಲ್ಲ. ಇದು ಹೊರಗಿನ ಬಂಡವಾಳ ಶಾಹಿಗಳಿಗೆ ಮಾತ್ರ ಸಿಗುತ್ತದೆಂದು ಹೇಳಬಹುದು. ನಮ್ಮ ಸಮಾಜವಾದದ ಗುರಿ, ಸ್ವರೂಪ ಸಮಾಜವಾದವನ್ನು ನಾವು ಕಟ್ಟಲಿಕ್ಕೆ ಹೊರಟ ಮೇಲೆ, ಈ ರೀತಿಯಾಗುವುದಕ್ಕೆ ಆಸ್ಪದ ಇರಬಾರದು ಎಂದು ನಾನು ತಿಳಿದುಕೊಂಡಿದ್ದೇನೆ. ಶ್ರೀ ಕದಂರವರು ಹೇಳಿದ ಹಾಗೆ ಟೆನೆನ್ಸಿಗಳು ಮುಗ್ಗರಿಸಿದ್ದಾವೆ. ಎಲ್ಲೂ ಕೂಡ ರೈತರ ಕಲ್ಯಾಣ ಮಾಡಲಿಕ್ಕೆ ಸಾಧ್ಯವಾಗಿಲ್ಲ. ಏನಾದರೂ ಇದ್ದರೂ ಕೂಡ, ಅದನ್ನು ಜಾರಿಗೆ ತರಬೇಕಾದರೆ, ಬಹಳ ತೊಂದರೆ, ಅಡಚಣೆಗಳು ಬರುತ್ತಿವೆ . ರೈತನಿಗೆ ಮೂಲ ಹಿಡುವಳಿಯ ಹಕ್ಕು, ದುಡಿಯುವುದಕ್ಕೆ ಒಂದು ಹಿತ ಸಂಬಂಧ ಏರ್ಪಾಟಾಗಬೇಕಾದರೆ, ಅದಕ್ಕೆ ಅನೇಕ ತಡೆಗಳು ಬರುತ್ತಿವೆ. ಇದರ ಜೊತೆಗೆ ಇನ್ನು ಅನೇಕ ರೀತಿಯ ಸಾಮಾಜಿಕ ಬದಲಾವಣೆಗಳನ್ನು ಮಾಡಲು ನಮ್ಮ ರಾಜ್ಯದಲ್ಲಿ ಶಕ್ತರಾಗಿಲ್ಲ ಎಂದು ನಾನು ಹೇಳಬಯಸುತ್ತೇನೆ. ಮಹಾತ್ಮ ಗಾಂಧಿಯವರು ಸಾಮಾನ್ಯ ಮನುಷ್ಯನು ಕೂಡ ಆಡಳಿತದಲ್ಲಿ ಭಾಗವಹಿಸಬಹುದು ಎನ್ನುವ ರೀತಿಯಲ್ಲಿ ಒಂದು ಭಾಷೆ ತಳಹದಿಯ ಮೇಲೆ ರಾಜ್ಯಗಳ ನಿರ್ಮಾಣವಾಗಬೇಕೆಂದು ಗುರಿ ಇಟ್ಟುಕೊಂಡಿದ್ದರು. ಅದನ್ನು ಕಾಂಗ್ರೇಸ್ ಸರ್ಕಾರ ಸಮರ್ಥನೆ ಮಾಡುತ್ತಾ ಬಂತು. ಆದರೆ ದುರ್ದೈವವಶಾತ್ ಭಾಷಾ ಗೊಂದಲವು ಇಂದು ಇಡೀ ರಾಷ್ಟ್ರಕ್ಕೆ ಘಾತಕವನ್ನು ತರುವಂತಹ ಸ್ಥಿತಿಯಲ್ಲಿದೆ. ಇಂದು ಪತ್ರಿಕೆಗಳಲ್ಲಿ ನಾವು ನೋಡುತ್ತಿದ್ದೇವೆ. ರಾಷ್ಟ್ರ ಧ್ವಜವನ್ನು ಸುಟ್ಟು ಹಾಕಿದ ನಿದರ್ಶನಗಳಿವೆ. ಇದು ಒಳ್ಳೆಯ ಲಕ್ಷಣಗಳಲ್ಲ. ಈ ರೀತಿಯ ರಾಷ್ಟ್ರಕ್ಕೆ ಧಕ್ಕೆ ತರುವಂತಹ ಚಟುವಟಿಕೆಗಳನ್ನು ಹತ್ತಿಕ್ಕಲೇಬೇಕು. ಇಡೀ ರಾಷ್ಟ್ರ ಒಂದು ಎನ್ನುವ ಭಾವನೆ ನಮ್ಮಲ್ಲಿ ಮೂಡಿ ಬಂದು ಅದನ್ನು ಪೋಷಿಸಿಕೊಂಡು ಬರಲೇಬೇಕು. ಛಿದ್ರಕಾರಕ ಘಟನೆಗಳನ್ನು ಖಂಡಿಸಲೇಬೇಕು. ಇಂದು ವಿದ್ಯಾರ್ಥಿಗಳಲ್ಲಿ ಅಶಿಸ್ತು ಬೆಳೆಯುತ್ತಾ ಇದೆ. ಅವರಿಗೆ ನಾವು ಪಾಲಕರು ಕೂಡ ಸಾಕಷ್ಟು ಮಾರ್ಗದರ್ಶನ ಮಾಡಬೇಕಾಗುತ್ತದೆ. ವಿದ್ಯಾರ್ಥಿಗಳಲ್ಲಿ ಇಂತ ಭಾವನೆ ಬೆಳೆಯದಂತೆ ನೋಡಿಕೊಳ್ಳಬೇಕು. ಇಂದು ಕಾಲೇಜುಗಳಲ್ಲಿ ಮುಷ್ಕರಗಳು, ಬಂದುಗಳು ಎಲ್ಲಾ ನಡೆಯುವುದು ಒಳ್ಳೆಯ ಲಕ್ಷಣವಲ್ಲ. ನಾವು ನಮ್ಮ ಅಭಿಪ್ರಾಯ ವ್ಯಕ್ತಪಡಿಸುವುದಕ್ಕೂ ಒಂದು ಮಿತಿ ಇದೆ. ಅದನ್ನು ಬಿಟ್ಟು ಬಸ್ಸುಗಳನ್ನು ನಾಶಮಾಡುವುದು, ರೇಲ್ವೆಗಳನ್ನು ನಾಶ ಮಾಡುವುದು, ಮುಂತಾದ ವಿನಾಶಕಾರಿ ಕೆಲಸಗಳನ್ನು ಕೈಗೊಳ್ಳುವುದು ಒಳ್ಳೆಯ ಲಕ್ಷಣವಲ್ಲ ಇದು ದೇಶಕ್ಕೆ ಹಾನಿಯನ್ನು ತರುವಂಥದ್ದು. ಇದನ್ನು ನಾವೆಲ್ಲರೂ ತಿಳಿದುಕೊಳ್ಳಬೇಕು. ನಾವು ನಮ್ಮೆಲ್ಲರ

ಮಕ್ಕಳನ್ನು ಇಂಥ ಘಟನೆಗಳಿಗೆ ಒಳಗಾಗದಂತೆ ನೋಡಿಕೊಂಡು, ಶಾಲಾ ಅಭ್ಯಾಸ ಸುಸೂತ್ರವಾಗಿ ನಡೆಯುವಂತೆ ನೋಡಿಕೊಳ್ಳಬೇಕು. ನಮಗೆ ವಿದ್ಯಾರ್ಥಿ ದೆಸೆಯಲ್ಲಿ ಒಂದು ಭಾಷೆ ಕಲಿತರೆ ಏನೂ ಹಾನಿಯಾಗಲಿಕ್ಕಿಲ್ಲ. ಭಾರತವೆಲ್ಲಾ ಒಂದಾಗಿರುವಾಗ ಹಿಂದಿ ಕಲಿತರೂ ತೆಲಗು ಕಲಿತರೂ, ತಮಿಳು ಕಲಿತರೂ, ಅದರಿಂದ ಏನೂ ನಷ್ಟವಾಗುವುದಿಲ್ಲ. ಆದ್ದರಿಂದ ಆದಷ್ಟು ಮಟ್ಟಿಗೆ ಈ ಭಾಷೆ ಗೊಂದಲಕ್ಕೆ ನಮ್ಮ ವಿದ್ಯಾರ್ಥಿಗಳ ಬೀಳದಂತೆ ನೋಡಿಕೊಳ್ಳುವುದು ಅತ್ಯಾವಶ್ಯಕ. ಅದಕ್ಕಾಗಿ ಈ ಭಾಷಾ ಗೊಂದಲವನ್ನು ತಪ್ಪಿಸುವುದಕ್ಕೆ ನಾವು ಪ್ರಯತ್ನ ಮಾಡಬೇಕು. ಮಾನ್ಯ ಕದಂರವರು ಹೇಳಿದರು ಹಿಂದೂಸ್ಥಾನದ ಮಹಾ ನ್ಯಾಯಾದೀಶರಾದ ಮಹಾಜನರವರು ಕೊಟ್ಟ ವರದಿ ಮಿಶ್ಚಿವಸ್ ಎಂದು ಹೇಳುವ ಮಟ್ಟಕ್ಕೆ ಬಂದು ಮುಟ್ಟಿದ್ದಾರೆ. ಅವರು ಒಂದು ವೇಳೆ ತಪ್ಪು ಅಭಿಪ್ರಾಯ ಕೊಟ್ಟಿರಬಹುದು. ಅದಕ್ಕೆ ಏನಾದರೂ ದುಷ್ಟ ಶಬ್ದಗಳನ್ನು ಉಪಯೋಗಿಸುವುದು ಸರಿಯಲಯಲವೆಂದು ಹೇಳುತ್ತೇನೆ. ಮಹಾಜನ ಏಕ ಸದಸ್ಯ ಆಯೋಗ ನೇಮಕ ಮಾಡುವುದು ಬೇಡವೆಂದು ನಾವೆಲ್ಲರೂ ಒಕ್ಕೊರಳಿನಿಂದ ಹೇಳಿದ್ದೇವೆ. ಪುನಃ ಪುನಃ ಎತ್ತುವುದು ಬೇಡವೆಂದು ಹೇಳಿದರೂ ಕೇಂದ್ರ ಸರ್ಕಾರದವರು ಕೇಳದೆ ಕಮೀಷನ್ ನೇಮಿಸಿ ಈ ಚಳುವಳಿಗೆ ಅನ್ಯಾಯ, ಅತ್ಯಾಚಾರಗಳಿಗೆ ಆಸ್ಪದ ಮಾಡಿ ಕೊಟ್ಟಿದೆ. ದುರ್ದೈವದಿಂದ ನಮ್ಮ ಮರಾಥಿ ಬಂಧುಗಳು ಇದನ್ನು ಬೆಳೆಸಿಕೊಂಡು ಹೋಗುತ್ತಿದ್ದಾರೆ. ಯಾವ್ಯಾವ ಭಾಗ ಎಲ್ಲಿ ಇದ್ದರೂ, ಅದು ಭಾರತದ ಒಂದು ಭಾಗವೆಂದು ನಾವು ತಿಳಿದುಕೊಂಡು ನಡೆಯತಕ್ಕದ್ದು. ಇಂಥ ಗೊಂದಲಗಳಿಂದ ಅನೇಕ ರೀತಿಯಲ್ಲಿ ನಮ್ಮ ದೇಶಕ್ಕೆ ನಷ್ಟವಾಗುತ್ತದೆ. ಇದರಿಂದ ಅನೇಕ ಯೋಜನೆಗಳಿಗೆ ಕೂಡ ನಷ್ಟವಾಗುವುದು. ಕೃಷ್ಣಾ ನದಿ ನೀರಿನ ಬಗ್ಗೆ ವಾದ ವಿವಾದಗಳು ನಡೆಯುತ್ತಿವೆ. ಮತ್ತು ಇನ್ನು ಅನೇಕ ನೀರಾವರಿ ಯೋಜನೆಗಳು ಆಗದೇ ಉಳಿದಿವೆ. ಇದರಿಂದಾಗಿ ದೇಶದ ಅಭಿವೃದ್ಧಿ ಯೋಜನೆಗಳು ಆಗದೇ ಬಹಳ ಹಿಂದುಳಿಯುತ್ತಾ ಹೋಗುತ್ತಿವೆ ಎನ್ನುವುದು ನಾವೆಲ್ಲರೂ ಲಕ್ಷ್ಯದಲ್ಲಿಟ್ಟುಕೊಳ್ಳಬೇಕು. ಉದಾಹರಣೆಗಾಗಿ ನಮ್ಮ ಭಾಗದ ಘಟಪ್ರಭಾ ಯೋಜನೆಯನ್ನೇ ತೆಗೆದುಕೊಂಡರೆ, ಮೊದಲು ಚಂದಗಡದ ಹತ್ತಿರ ಹಡಲ್ಗ ಡ್ಯಾಂ ಕಟ್ಟಬೇಕೆಂದು ಇತ್ತು. ಈಚೆಗೆ ಇದರ ಎತ್ತರವನ್ನು ತಗ್ಗಿಸಿ ಬೇರೆ ಕಡೆ ಕಟ್ಟಬೇಕೆಂದು ಮಾಡಿ ಈಗ ಹಿಡಕಲ್ ಡ್ಯಾಂ ಕಟ್ಟುತ್ತಿದ್ದಾರೆ. ಇದರಿಂದ ಸುಮಾರು 150 ಅಡಿಯಷ್ಟು ಎತ್ತರವನ್ನು ಕಡಿಮೆ ಮಾಡಬೇಕಾಗಿ ಬಂತು ಮತ್ತು ಮೊದಲಿನಂತೆ ಕಟ್ಟಿದರೆ ಸುಮಾರು ಒಂದೂವರೆ ಲಕ್ಷ ಎಕರೆಗಳಷ್ಟು ಹೆಚ್ಚು ಭೂಮಿಗೆ ನೀರಾವರಿಯ ಸೌಕರ್ಯಗಳು ಸಿಕ್ಕಿ ಅದರಿಂದ ಇನ್ನೂ ಹೆಚ್ಚು ಉಪಯೋಗ ಪಡೆಯಬಹುದಾಗಿತ್ತು.

ಈಗ ಆಹಾರಧಾನ್ಯಗಳ ಅಭಾವ ಇದೆ. ಎಂದು ಅಮೇರಿಕಾ ಹಾಗೂ ಇನ್ನಿತರ ದೇಶಗಳಿಗೆ ಕೈ ಒಡ್ಡಬೇಕಾದ ಸ್ಥಿತಿ ಬಂದಿದೆ. ಇದಕ್ಕೆ ಬದಲಾಗಿ ಲಕ್ಷಾಂತರ ರೂಪಾಯಿಗಳನ್ನು ಖರ್ಚು ಮಾಡಿ ಈ ನೀರಾವರಿ ಯೋಜನೆಗಳನ್ನು ಮಾಡಿದ್ದರೆ ದೇಶದಲ್ಲಿ ಇನ್ನು ಹೆಚ್ಚು ಬೆಳೆ ಬೆಳೆಯಬಹುದಾಗಿತ್ತು ಎನ್ನುವುದನ್ನು ಎಲ್ಲರೂ ಲಕ್ಷ್ಯದಲ್ಲಿಡಬೇಕು. ಎಲ್ಲದಕ್ಕೂ ಒಂದು ಮಿತಿ ಇದೆ. ಆ ಮಿತಿಯೊಳಗೆ ನಮ್ಮ ಯೋಜನೆಗಳನ್ನು ಮಾಡುವುದು ಅವಶ್ಯ ಇದೆ. ಇನ್ನು ಇತ್ತೀಚೆಗೆ ನಡೆದ ಭಾಷಾವಾರು ಗೊಂದಲಗಳನ್ನು ನೋಡಿದರೆ ಇಂತಹ ಭಾಷಾವಾರು ರಾಜ್ಯಗಳು ಏತಕ್ಕಾಗಿ ಹುಟ್ಟಿದವೋ ಎನ್ನುವಷ್ಟರ ಮಟ್ಟಿಗೆ ಕೆಲವರಿಗೆ ಅನಿಸಿದೆ ಕರ್ನಾಟಕ ರಾಜ್ಯ ನಿರ್ಮಾಣವಾಗಬೇಕೆಂದು ಹೋರಾಟ ಮಾಡಿ ಭಾಷಾವಾರು ಪ್ರಾಂತ ಸಿಕ್ಕಿದರೂ ಕೂಡ ಭಾಷಾವಾರು ಪ್ರಾಂತಗಳು ಏತಕ್ಕಾದವು ಎನ್ನುವಷ್ಟು ಬೇಜಾರು ಈಚೆಗೆ ಕಂಡು ಬರುತ್ತಿದೆ. ಭಾಷಾವಾರು ಗೊಂದಲಗಳ ಬಗ್ಗೆ ಇತ್ತೀಚೆಗೆ ನಮ್ಮ ದೇಶದಲ್ಲಿ ನಡೆದಂತ ಚಳುವಳಿಗಳಿಂದ ಒಂದುಮಾತನ್ನು ನಾವೆಲ್ಲಾ ಲಕ್ಷ್ಯದಲ್ಲಿಡಬೇಕು. ಇಂತಹ ಚಳುವಳಿಗೆ ಎಳೆಯ ಮಕ್ಕಳನ್ನು ಕೂಡಿಸಿಕೊಂಡು ನಡೆಸಿಕೊಂಡರೆ ಅದು ಸರಿಯಾದ ಮಾರ್ಗವಲ್ಲ. ನಮ್ಮ ಮಕ್ಕಳನ್ನು ಒಳ್ಳೆಯ ಹಾದಿಗೆ ತರುವುದರಲ್ಲಿ ತಕ್ಕ ಪ್ರಯತ್ನಗಳನ್ನು ಎಲ್ಲರೂ ಮಾಡಬೇಕು.

ಇನ್ನು ನಮ್ಮ ರಾಜ್ಯದ ಆಡಳಿತದ ಬಗ್ಗೆ ಹೇಳುವುದಾದರೆ ಆಡಳಿತದ ಪರಿಸ್ಥಿತಿ ದಿನೇ ದಿನೇ ಹದಗೆಡುತ್ತಿದೆ. ಎಲ್ಲಿ ನೋಡಿದರೂ ಅಲ್ಲಿ ಲಂಚಗುಳತನ ಬೆಳೆದು ಆಡಳಿತ ಶಿಥಿಲವಾಗಿ ಸರ್ಕಾರದ ಕಚೇರಿಗಳಲ್ಲಿ ಸಾಕಷ್ಟು ಕೆಲಸಗಳು ಆಗುತ್ತಿಲ್ಲ. ಆಡಳಿತದಲ್ಲಿ ಸರಿಯಾದ ಬಿಗಿಯಿಲ್ಲದೇ ಇರುವುದರಿಂದಾಗಿ ಕೆಲಸಗಳು ನಡೆಯುತ್ತಿಲ್ಲ. ಆಡಳಿತ ಯಂತ್ರವನ್ನು ಇನ್ನು ಬಿಗಿಯಾಗಿ ನಡೆಸದೇ ಹೋದರೆ ಸರ್ಕಾರದ ಕೆಲಸಗಳು ಸುಸೂತ್ರವಾಗಿ ನಡೆಯುವುದಿಲ್ಲ. ಸಮಾಜ ಕಲ್ಯಾಣ ಮಾಡಬೇಕೆಂದು ಸಮಾಜ ಕಲ್ಯಾಣ ಖಾತೆಗಾಗಿಯಾಗಿಯೇ ಪ್ರತ್ಯೇಕವಾದ ವ್ಯವಸ್ಥೆ ಮಾಡಿಕೊಂಡಿದ್ದರೂ ಸರಕಾರ ಅದರ ಮೂಲಕ ಸರಿಯಾಗಿ ಕೆಲಸ ಮಾಡುತ್ತಿಲ್ಲ ಎಂದು ಸ್ಪಷ್ಟವಾಗಿ ನಾನು ಇಲ್ಲಿ ಹೇಳಬೇಕಾಗಿದೆ. ಲಂಚಗುಳಿತನ ಎನ್ನುವುದು ದಿನೇ ದಿನೇ ಅತಿಯಾಗಿ ಬೆಳೆಯುತ್ತಿದೆ. ಇವೊತ್ತು ನಾವು ನೋಡಬಹುದು. ಸಾಮಾನ್ಯವಾಗಿ ಒಂದು ಗ್ರಾಮದಲ್ಲಿ ಮುಖ್ಯನಾದವನು ಎಂದರೆ ತಲಾಠಿ. ಗ್ರಾಮದಲ್ಲಿ ಇವನೇ ಎಲ್ಲದಕ್ಕೂ ಮುಖಂಡನಾಗಿರುತ್ತಾನೆ. ಸಾಮಾನ್ಯವಾಗಿ ಒಬ್ಬ ರೈತ ಗ್ರಾಮದ ತಲಾಠಿಯ ಹತ್ತಿರ ಹೋಗಿ ಅವನ ಜಮೀನಿನ ಒಂದು ಉತಾರವನ್ನು ಪಡೆಯಬೇಕಾದರೆ ಅವನಿಗೆ ಲಂಚ

ಕೊಡದೇ ಕೆಲಸವೇ ಆಗುವುದಿಲ್ಲ. ಇಂತಹ ನಿದರ್ಶನಗಳು ಒಂದಲ್ಲ ಹತ್ತಾರು ಕಡೆಗಳಲ್ಲಿ ನಾವು ನೋಡಬಹುದು. ಸಾಮಾನ್ಯವಾಗಿ ನಾವು ಎಲ್ಲೇ ನೋಡಲಿ ಲಂಚಕೊಡದೇ ಯಾವ ಕೆಲಸವೂ ಈ ಸರಕಾರದಲ್ಲಿ ನಡೆಯುವುದಿಲ್ಲ ಎನ್ನುವ ಒಂದು ಅಭಿಪ್ರಾಯ ಬರತ್ತದೆ. ಇದನ್ನು ಹೇಗೆ ತಪ್ಪಿಸಬೇಕು ಎನ್ನುವುದನ್ನು ವಿಚಾರ ಮಾಡಬೇಕಾದ ಕಾಲ ಬಂದಿದೆ. ಚಿಕ್ಕ ತಲಾಠಿಯಿಂದ ಹಿಡಿದು ಅವನ ಮೇಲ್ಪಟ್ಟದಲ್ಲಿರತಕ್ಕ ಆಡಳಿತದವರೆಗೆ ಲಂಚವಿಲ್ಲದೆ ಯಾವ ಕೆಲಸಗಳೂ ಆಗುವುದಿಲ್ಲ. ಇದನ್ನು ತಪ್ಪಿಸಲು ಸೂಕ್ತವಾದ ಕ್ರಮಗಳನ್ನು ಕೈ ಗೊಳ್ಳದಿದ್ದರೆ ಜನತೆಗೆ ಕಲ್ಯಾಣ ಮಾಡಿದಂತಾಗುವುದಿಲ್ಲ. ಸಮಾಜದ ಜನತೆಯ ಕಲ್ಯಾಣ ಮಾಡಬೇಕು ಎಂದು ಆಹಾರ ಧಾನ್ಯವನ್ನು ಹೆಚ್ಚು ಬೆಳೆಸಬೇಕು ಎನ್ನುವುದು ನಮ್ಮ ದೇಶದಲ್ಲಿ ಬಹಳ ಮುಖ್ಯವಾಗಿ ಆಗಬೇಕಾದರೆ ಕೆಲಸ ಆದರೆ ಇದರ ಬಗ್ಗೆ ಬಹಳ ಅನಾಹುತಗಳಾಗುತ್ತಿವೆ. ಎಂದು ಇಲ್ಲಿ ಒತ್ತಿ ಹೇಳಬೇಕಾಗಿ ಬಂದಿವೆ. ಹೋದ ವರ್ಷ ಮಳೆಯಾಗದೇ ನಮ್ಮ ಭಾಗದಲ್ಲಿ ಕೆಲವು ಕಡೆ ದುಷ್ಕಾಲ ಪರಿಸ್ಥಿತಿಯುಂಟಾಯಿತು. ಈ ಸಾರಿ ಕೂಡ ನಮ್ಮ ದೇಶದ ಕೆಲವು ಭಾಗಗಳಲ್ಲಿ ದುಷ್ಕಾಲಕ್ಕೆ ಸಿಕ್ಕದ ಭಾಗಗಳೂ ಇವೆ ಎಂದು ಕೇಳುತ್ತೇವೆ. ಆದರೆ ಇದರ ರೀಲಿಫ್ ಮೆಷರ್ಸ್ ಬಗ್ಗೆ ಗವರ್ನರ್‌ರವರು ತಮ್ಮ ಭಾಷಣದಲ್ಲೂ ಉಲ್ಲೇಖ ಮಾಡಿದ್ದಾರೆ. ಈ ರೀಲಿಫ್ ಮೇಷರ್ಸ್ ಹೇಗೆ ನಡೆಯಬೇಕು. ಎಂದರೆ ಇಲ್ಲಿನ ಜನಕ್ಕೆ ಸಾಕಷ್ಟು ಕಾಮಗಾರಿ ಕೆಲಸಗಳು ಸಿಗುವಂತೆ ಒದಗಿಸಿಕೊಡಬೇಕೆಂದು ಸರಕಾರದವರೇನೋ ಮಾಡುತ್ತಿದ್ದಾರೆ. ಆದರೆ ಇದು ಹೇಗೆ ನಡೆದಿದೆ ಎಂದರೆ ಎಲ್ಲಿ ಮುಖ್ಯವಾಗಿ ಜನಕ್ಕೆ ಅನುಕೂಲ ಸಿಗುವಂತೆ ಕಾಮಗಾರಿಗಳಾಗಬೇಕೋ ಆ ಸ್ಥಳಗಳಲ್ಲಿ ಕೆಲಸಗಳು ಆಗುತ್ತಿಲ್ಲ. ಇದಕ್ಕೆ ಕಾರಣ ಎಲ್ಲಿ ಒಬ್ಬ ಆಫೀಸರು ಶ್ರದ್ಧೆ ವಹಿಸಿ ಜನರಿಗೆ ಒಳ್ಳೆಯ ಕೆಲಸಗಳನ್ನು ಮಾಡಬೇಕೆಂದು ಆಸೆಯಿಂದ ಮಾಡುತ್ತಿರುತ್ತಾರೋ ಅವರನ್ನು ಆ ಜಾಗದಿಂದ ವರ್ಗ ಮಾಡಿ ಬೇರೆ ಕಡೆಗೆ ಕಳುಹಿಸಿ ಬಿಡುತ್ತಾರೆ. ಅವರ ಜಾಗಕ್ಕೆ ಬೇರೆ ಒಬ್ಬರು ಆಫೀಸರನ್ನು ವರ್ಗ ಮಾಡುತ್ತಾರೆ. ಅವರಿಂದ ಜನಕ್ಕೆ ಎಷ್ಟು ಕೆಲಸಗಳು ಆಗಬೇಕೋ ಅದು ಆಗುತ್ತಿಲ್ಲ. ಈ ರೀತಿಯಾಗಿ ಅಧಿಕಾರಿಗಳ ವರ್ಗಾವರ್ಗಿ ಮಾಡುವುದನ್ನು ತಪ್ಪಿಸಬೇಕು ಎಂದು ಹೇಳುತ್ತೇನೆ. ತಮಗೆ ಬೇಕಾದ ಅಧಿಕಾರಿಗಳಿಂದ ಒಳ್ಳೆಯ ಕೆಲಸಗಳಾಗುತ್ತವೆ ಎಂದು ತಮಗೆ ಬೇಕಾದ ಸ್ಥಳಗಳಲ್ಲಿ ಅವರನ್ನು ಇಟ್ಟುಕೊಂಡು ಕೆಲಸ ಮಾಡಿಸುವುದು ಇನ್ನು ಕೆಲವು ಕಡೆಗಳಲ್ಲಿ ಕೆಲಸ ಮಾಡದೇ ಇರುವಂತಹ ಅಧಿಕಾರಿಗಳನ್ನು ಅಲ್ಲಿಗೆ ಕಳುಹಿಸಿ ಜನತೆಯ ಕೆಲಸಗಳು ನಡೆಯದಂತೆ ಮಾಡುವ ಮನೋವೃತ್ತಿಯನ್ನು ಆದಷ್ಟು ಬಿಡುವುದು ಒಳ್ಳೆಯದು. ಇದರಿಂದಾಗಿ ಸರಕಾರದಲ್ಲಿ ಈಗ ಕೆಲಸಗಳು ಸರಿಯಾಗಿ

ನಡೆಯುತ್ತಿಲ್ಲ. ಇದನ್ನು ತಪ್ಪಿಸುವುದರ ಕಡೆಗೆ ಲಕ್ಷ್ಯ ಕೊಡಬೇಕು. ಇದರಿಂದಾಗಿ ಸಾಕಾದಷ್ಟು ಗೊಂದಲಗಳಾಗುತ್ತಿವೆ. ಎಲ್ಲಿ ನೀರಾವರಿ ಯೋಜನೆ ಗಳಾಗಬೇಕೋ ಅಲ್ಲಿ ನೀರಾವರಿ ಯೋಜನೆಗಳು ಆಗುತ್ತಿಲ್ಲ. ಇದಕ್ಕೆ ಬೇಕಾದಷ್ಟು ನಿದರ್ಶನಗಳನ್ನು ನಮ್ಮ ಬೆಳಗಾವಿ ಜಿಲ್ಲೆಯಲ್ಲಿ ಕೊಡಬಹುದು. ಇದಕ್ಕಾಗಿ ಸರಕಾರದ ಈಗಿನ ನೀತಿಯನ್ನು ಬದಲಾಯಿಸುವುದು ಅವಶ್ಯವಿದೆ ಎಂದು ಕಾಣುತ್ತದೆ.

ಇನ್ನು ಬಾವಿಗಳನ್ನು ತೋಡಿಸುವುದರ ಸಲುವಾಗಿ ಸರಕಾರ ಸಾಕಷ್ಟು ಲಕ್ಷ್ಯಕೊಟ್ಟು ಹಣವನ್ನು ಸಹಾಯವಾಗಿ ಕೊಡುತ್ತಿದೆ. ಇದಕ್ಕಾಗಿ ಸಹಕಾರ ಸಂಘಗಳ ಮೂಲಕ ಸಾಲವನ್ನು ಕೊಡುವ ವ್ಯವಸ್ಥೆ ಮಾಡಿದರೂ ಅದರಿಂದ ಜನಕ್ಕೆ ಸಾಕಷ್ಟು ಸಿಗುತ್ತಿಲ್ಲ. ಅನೇಕ ಕಡೆ ಇಲ್ಲದ ಗೊಂದಲಗಳಿಂದಾಗಿ ತೀವ್ರವಾಗಿ ಯೋಜನೆಯಂತೆ ಕೆಲಸಗಳನ್ನು ಕೈ ಕೊಳ್ಳಲು ಆಗುತ್ತಿಲ್ಲ. ನಾನೂ ಕೂಡ ನಮ್ಮ ಕಡೆ ಅಗ್ರಿಕಲ್ಚರಲ್ ಇಲಾಖೆಯ ಮೂಲಕ ಬೋರಿಂಗ್ ಮೆಷಿನ್ ಪಡೆಯಲು ಪ್ರಯತ್ನ ಪಟ್ಟಾಗ ಅದಕ್ಕೆ ಆಪರೇಟರುಗಳು ಇಲ್ಲ. ಎಂದು ಕೆಲವು ಕಡೆ ಅವು ಹಾಗೇ ಖಾಲಿಯಾಗಿ ಇದ್ದವು. ಅದೇ ರೀತಿಯಾಗಿ ಜಿಯಾಲಾಜಿಕಲ್ ಇಲಾಖೆಯಲ್ಲಿ ಬೋರ್ ಮಷಿನ್‌ಗಳು ಇಲ್ಲ, ಇಲ್ಲಿ ಆಪರೇಟರುಗಳಿದ್ದಾರೆ. ಹೀಗೆ ಅಧಿಕಾರಿಗಳಲ್ಲಿ ಒಂದಕ್ಕೊಂದು ಹೊಂದಾಣಿಕೆ ಇಲ್ಲದಂತಹ ಪರಿಸ್ಥಿತಿ ಬಂದಿದೆ. ಒಂದು ಡಿಪಾರ್ಟಮೆಂಟನಿಂದ ಇನ್ನೊಂದು ಡಿಪಾರ್ಟಮೆಂಟಿಗೆ ಹೊಂದಾಣಿಕೆ ಇಲ್ಲದೇ ಇರುವ ಕಾರಣದಿಂದಾಗಿ ಸರಕಾರದ ಲಕ್ಷಾಂತರ ರೂಪಾಯಿನ ಕೆಲಸಗಳು ಆಗದೇ ಖಾಲಿ ಬಿದ್ದಿವೆ. ಹೀಗಾದರೆ ಜನತೆಗೆ ಉಪಯೋಗ ಮಾಡಿದಂತಾಗುತ್ತದೆಯೇ? ಇದನ್ನು ಗಮನದಲ್ಲಿಡಬೇಡು. ಇದನ್ನು ತಪ್ಪಿಸಿ ಸಾಮಾಜಿಕ ಸಂಪತ್ತು ಹಾಗೂ ಸಾರ್ವಜನಿಕರ ಸ್ಥಿತಿಯನ್ನು ಕಂಡುಕೊಂಡು ಅವರಿಗೆ ಅನುಕೂಲವಾಗುವಂತಹ ವ್ಯವಸ್ಥೆಯನ್ನು ಮಾಡಲು ಪ್ರಯತ್ನ ಮಾಡಬೇಕು.

ಇನ್ನು ಜನರಿಗೆ ಕಲ್ಯಾಣ ಮಾಡಬೇಕು ಸಮಾಜ ಕಲ್ಯಾಣ ಮಾಡಬೇಕು ಎಂದು ಸಮಾಜ ಕಲ್ಯಾಣ ಹಾಗೂ ಎನ್.ಇ. ಎಸ್. ಖಾತೆಯನ್ನು ನಡೆಸುತ್ತಿದ್ದಾರೆ. ಸಮಾಜ ಕಲ್ಯಾಣದ ಖಾತೆಯ ಮೂಲಕ ಲಕ್ಷಾಂತರ ರೂಪಾಯಿಗಳನ್ನು ಖರ್ಚು ಮಾಡುತ್ತಿದ್ದಾರೆ. ಇದರಿಂದ ಹಿಂದುಳಿದ ವರ್ಗದವರಿಗೆ ಅನುಕೂಲ ಮಾಡಬೇಕು ಅವರಿಗೆ ಲಾಭವಾಗಬೇಕು ಎಂದು ಮಾಡಿರುವ ಉದ್ದೇಶವೇನೋ ಒಳ್ಳೆಯದು. ಹಿಂದುಳಿದ ಜನರಿಗೆ ಉದ್ಯೋಗಗಳನ್ನು ಒದಗಿಸಿ ಕೊಡಬೇಕು. ಅವರಿಗೆ ಅನುಕೂಲಗಳನ್ನು ಮಾಡಬೇಕು. ಅವರ ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸಬೇಕು

ಎಂದು ಸರಕಾರ ಲಕ್ಷಾಂತರ ರೂಪಾಯಿಗಳನ್ನು ಖರ್ಚು ಮಾಡುತ್ತಿದೆ. ಇನ್ನೊಂದು ಕಡೆ ಸೇಂದಿ, ಸಾರಾಯಿ ಅಂಗಡಿಗಳನ್ನು ಹೆಚ್ಚು ಹೆಚ್ಚಾಗಿ ತೆರೆಯಬೇಕು ಎಂದು ಮಾಡುತ್ತಿದ್ದಾರೆ. ಇದರಿಂದ ನಮ್ಮ ಸರಕಾರಕ್ಕೇನೋ ಸುಮಾರು ಎಂಟು ಕೋಟಿಯಷ್ಟು ಹೆಚ್ಚು ಆದಾಯ ಬಂತು ಎಂದು ಇದೂ ಕೂಡ ಮೂರು ತಿಂಗಳಲ್ಲಿ ಬಂದಿದೆ ಎಂದು ಸರಕಾರದವರು ಒಂದು ಕಡೆ ಹೇಳಿದ್ದಾರೆ. ಇದರಲ್ಲಿ ಕುಡಿಯುವವರು ಯಾರು ಎನ್ನುವುದನ್ನು ನೋಡುವಾಗ ವಾಸ್ತವವಾಗಿ ಸಮಾಜದಲ್ಲಿ ಬಹಳ ಹಿಂದುಳಿದಿರುವ ವರ್ಗದವರೇ ಅದರಲ್ಲೂ ಬಡವರೇ ಹೆಚ್ಚಾಗಿ ದುಡ್ಡು ಕೊಟ್ಟು ಸರಕಾರಕ್ಕೆ ಹೆಚ್ಚು ಆದಾಯ ಬರುವಂತೆ ಮಾಡಿದ್ದಾರೆ. ಹೀಗೆ ಸರಕಾರದವರು ಒಂದು ಕೈಯಿಂದ ಕೊಟ್ಟು ಇನ್ನೊಂದು ಕಡೆ ಅದಕ್ಕೆ ನಾಲ್ಕು ಪಟ್ಟಿನಂತೆ ವಸೂಲು ಮಾಡುತ್ತಿದ್ದರೆ ಇದರಿಂದ ಸಮಾಜ ಕಲ್ಯಾಣ ಮಾಡಿದಂತಾಗುತ್ತದೆಯೇ? ಆದುದರಿಂದ ನಾನು ಸರಕಾರಕ್ಕೆ ಸಲಹೆ ಮಾಡುವುದು , ಈ ಸಮಾಜ ಕಲ್ಯಾಣದ ಖಾತೆ ಇರುವುದರ ಬದಲು ಇದನ್ನು ರದ್ದುಗೊಳಿಸುವುದು ಸೂಕ್ತವಾದೀತು! ಸುಮ್ಮನೆ ಸಮಾಜ ಕಲ್ಯಾಣ ಮಾಡುತ್ತೇವೆ. ಎಂದು ಇದನ್ನು ಬೆಳೆಸಿಕೊಂಡು ಹೋಗುವುದು ಸರಿಯಲ್ಲ. ಇದೇ ರೀತಿಯಾಗಿ ಎನ್.ಇ. ಎಸ್. ಇಲಾಖೆಯೂ ಕೂಡ ಆಗಿದೆ. ಈ ಖಾತೆಯಲ್ಲಿ ಸರಕಾರದ ಅಧಿಕಾರಿಗಳು ಒಂದು ಜೀಪನ್ನು ಇಟ್ಟುಕೊಂಡು ಬರೀ ತಿರುಗಾಡುವುದರಲ್ಲಿದ್ದಾರೆಯೇ? ವಿನಾಃ ಜನಕ್ಕೆ ಇವರಿಂದೇನೂ ಉಪಯೋಗವಾಗುತ್ತಿಲ್ಲ ! ಎನ್.ಇ. ಎಸ್.ಇಲಾಖೆಯಲ್ಲಿ ಎಕ್ಸ್‌ಟೆನ್‌ಷನ್ ಆಫೀಸರು, ಸೋಶಿಯಲ್ ಎಕ್ಸ್‌ಟೆನ್‌ಷನ್ ಆಫೀಸರು, ಅಗ್ರಿಕಲ್ಚರಲ್ ಎಕ್ಸಟೆನ್ ಆಫೀಸರು ಎಂದು ಬೇಕಾದಷ್ಟು ಎಕ್ಸ್‌ಟೆನ್‌ಷನ್ ಆಪೀಸರುಗಳನ್ನು ಮಾಡುವುದರಿಂದ ಯಾವ ಉಪಯೋಗವು ಆಗುವುದಿಲ್ಲ ಎಂದು ಇಲ್ಲಿ ಹಾಗೂ ಪಾರ್ಲಿಮೆಂಟ್‌ನಲ್ಲಿ ಕೂಡ ಒತ್ತಿ ಹೇಳುತ್ತಿದ್ದರೂ ಸರಕಾರ ಇದರ ಬಗ್ಗೆ ಪುನರ್ ಪರಿಶೀಲನೆ ಮಾಡುವುದರ ಕಡೆಗೆ ಗಮನ ಕೊಡುತ್ತಿಲ್ಲ. ಇಂತಹ ಕಾರ್ಯಕ್ರಮಗಳನ್ನು ಮುಂದುವರಿಸುವುದರಿಂದ ಜನತೆಗೆ ಉಪಯೋಗವಾಗುವುದಿಲ್ಲ. ಎಂದು ಮಂತ್ರಿಗಳಿಗೆ ಹೇಳುತ್ತಿದ್ದರೂ ಅವರು ಇದರ ಧೋರಣೆಯನ್ನು ಬದಲಾಯಿಸುವುದರ ಕಡೆಗೆ ಗಮನ ಕೊಡುತ್ತಿಲ್ಲ. ಮಂತ್ರಿಗಳು ಹಾಗೂ ಸರಕಾರದ ಅಧಿಕಾರಿಗಳು ಹೊರಗಡೆ ಇದಕ್ಕೆ ವಿರೋಧವಾಗಿ ಮಾತನಾಡುತ್ತಿದ್ದರೂ ಅಧಿಕಾರಕ್ಕೆ ಬಂದ ಕೂಡಲೇ ಅದಕ್ಕೆ ವಿರೋಧವಾಗಿ ಹೇಳುತ್ತಾ ಈ ಖಾತೆಗಳನ್ನು ಮುಂದುವರಿಸುತ್ತಾ ಬರುತ್ತಿದ್ದಾರೆ. ರೈತರಿಂದ ದುಡ್ಡನ್ನು ಪಡೆದು ಸರಕಾರದ ಪ್ರತಿಯೊಂದು ಕಾಸನ್ನು ಕೂಡ ಅವರ ಅನುಕೂಲಕ್ಕಾಗಿ ವ್ಯಯ ಮಾಡುತ್ತಿದ್ದೇವೆ. ಸಮಾಜದ ಕಲ್ಯಾಣ

ಮಾಡುತ್ತಿದ್ದೇವೆ ಎಂದು ಹೇಳುತ್ತಿದ್ದರೂ ಇದರಿಂದ ದೇಶದ ಬಡ ಜನತೆಗೆ ಕಲ್ಯಾಣವಾಗುತ್ತಿಲ್ಲ ಮತ್ತು ಜನರಿಗೆ ಇದರಿಂದೇನೂ ಲಾಭವಾಗುತ್ತಿಲ್ಲ. ಎನ್ನುವ ಒಂದು ಮಾತನ್ನು ಇಲ್ಲಿ ಹೇಳಬಯಸುತ್ತೇನೆ. ಆಲಸಿ ಅಧಿಕಾರಿಗಳನ್ನು ಸರ್ಕಾರದವರು ಬೆಳೆಸಿಕೊಂಡು ಹೋದರೆ ದೇಶ ಮುಂದುವರೆಯಲಾರದು. ಈಗ ದೇಶ ಹಿಂದುಳಿಯುತ್ತಿರುವುದಕ್ಕೆ ಕಾರಣ ಹಣದ ದುರುಪಯೋಗವಾಗುತ್ತಿರುವುದು. ಸರ್ಕಾರದವರು ಹಣದ ದುರುಪಯೋಗವಾಗುವುದನ್ನು ನಿಲ್ಲಿಸಬೇಕು. ಮತ್ತು ಆ ಬಗ್ಗೆ ತಕ್ಕ ಕ್ರಮಗಳನ್ನು ಕೈಕೊಳ್ಳಬೇಕು. ಈ ವಿಚಾರದಲ್ಲಿ ಸರ್ಕಾರದವರು ರಾಜ್ಯಪಾಲರ ಭಾಷಣದಲ್ಲಿ ಹೇಳಿಸಬೇಕಾಗಿತ್ತು.

ಇನ್ನು ವಿದ್ಯಾಭ್ಯಾಸಕ್ಕಾಗಿ ಸರ್ಕಾರದವರು ಸಾಕಷ್ಟು ಖರ್ಚು ಮಾಡುತ್ತಿದ್ದಾರೆ. ಸಾಕಷ್ಟು ರೀತಿಯಿಂದ ಸರ್ಕಾರದವರು ಒಳ್ಳೆಯ ಕೆಲಸಗಳನ್ನು ನಡೆಸಿಕೊಂಡು ಹೋಗುತ್ತಿದ್ದಾರೆ. ಆದರೂ ಸಹ ಎಲ್ಲ ಯೋಜನೆಗಳ ಬಗ್ಗೆಯೂ ಸಹ ಸರ್ಕಾರದವರು ಇನ್ನು ಹೆಚ್ಚಿನ ಲಕ್ಷ್ಯ ಕೊಟ್ಟು ಹಣದ ಅಪವ್ಯಯವಾಗದಂತೆ ನೋಡಿಕೊಂಡು ಹೋಗುತ್ತಾರೆಂದು ಭಾವಿಸುತ್ತೇನೆ.

# ವರ್ಷ ವರ್ಷವೂ ಅಪ್ಪಳಿಸುವ ಭೀಕರ ಬರಗಾಲ

12ನೇ ಅಕ್ಟೋಬರ್ 1970

**ತುತ್ತು ಕೂಳಿಗೆ ಪರಿತಪಿಸಬೇಕಾದ ಪರಿಸ್ಥಿತಿ - ಕೈ ಕೊಳ್ಳಬೇಕಾದ ಬರಕಾಮಗಿರಿ ಕುರಿತು ಪಂಚಗಾವಿ ಸರ್ಕಾರವನ್ನು ಆಗ್ರಹಿಸುತ್ತಾರೆ.**

**ಪಂಚಗಾವಿ ಅಂತವರ ನಿರಂತರ ಹೋರಾಟ ಫಲ ಇಂದಿನ ನೀರಾವರಿ ಯೋಜನೆಗಳು ಇಲ್ಲಿಯ ಜನ ಸಮುದಾಯ - ಮರೆಯಬಾರದ ಮಹಾನುನಾವ ಅವರು.**

ಈ ವರ್ಷ ನಾವು ಬಹಳ ಗಂಬೀರವಾದ ಭೀಕರ ಬರಗಾಲಕ್ಕೆ ತುತ್ತಾಗಿದ್ದೇವೆ. ಆದ ಕಾರಣ ಈ ಬಗ್ಗೆ ನಾವು ಈ ಚರ್ಚೆಯನ್ನು ಈ ಮನೆಯಲ್ಲಿ ಪ್ರಾರಂಭ ಮಾಡಿದ್ದೇವೆ. ಬರಗಾಲದ ದೆಶೆಯಿಂದ ಬದುಕುವುದು ಮತ್ತು ಮಕ್ಕಳನ್ನು ಸಾಕುವುದು ಕಷ್ಟವಾಗಿದೆ.ಒಬ್ಬನು ಕೆಲಸಕ್ಕೆ ಹೋಗಬೇಕಾದರೆ 8-10 ರೊಟ್ಟಿಗಳನ್ನು ಕಟ್ಟಿಕೊಂಡು ಹೋಗುತ್ತಾನೆ. ಆತನಿಗೆ ಕೊಡುವ ಸಂಬಳ ಆ ರೊಟ್ಟಿಗೆ ಸಾಲುವುದಿಲ್ಲ. ಇನ್ನು ಆತನು ಯಾವ ರೀತಿ ತನ್ನ ಹೆಂಡತಿ ಮಕ್ಕಳು ಮತ್ತು ತಂದೆತಾಯಿಂದಿರನ್ನು ಸಾಕುವುದು ಈ ಬಗ್ಗೆ ಸರ್ಕಾರದವರು ವಿಚಾರ ಮಾಡಬೇಕು. ಬರ ಬಂದರೆ ಅದರ ಹೊಡೆತ ಬೀಳುವುದು ಮಕ್ಕಳಿಗೆ, ಮುದುಕರಿಗೆ ಮತ್ತು ಗರ್ಭಿಣಿಯರಿಗೆ ಬರ ಬಂದ ಕಾಲದಲ್ಲಿ ಇಂತಹವರಿಗೆ ಸೂಕ್ತ ಏರ್ಪಾಡುಗಳನ್ನು ಸರ್ಕಾರದವರು ಮಾಡಬೇಕು. ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದು 23 ವರ್ಷ ಗಳಾದರೂ ಕೂಡ ಹಿಂದಿನ ಪರಿಸ್ಥಿತಿ ಬದಲಾವಣೆಯಾಗಿಲ್ಲ. ನಾವು ಹುಟ್ಟಿದ್ದು ಬರಗಾಲದಲ್ಲಿ ಬೆಳೆದಿದ್ದು ಬರಗಾಲದಲ್ಲಿ. ಸಾಯುವಾಗಲಾದರೂ ಕೂಡ ಇದರಿಂದ ಮುಕ್ತರಾಗದಿದ್ದರೆ ಹೇಗೆ? ಇದನ್ನು ನಾನು ಅತ್ಯಂತ ದುಃಖದಿಂದ ಹೇಳುತ್ತಿದ್ದೇನೆ. ಇದೇ ಪರಿಸ್ಥಿತಿ ಮುಂದುವರೆಯುವುದಕ್ಕೆ ಅವಕಾಶ ಕೊಡಬಾರದು. ಕೂಲಿ ದರವನ್ನು ಸರ್ಕಾರದವರು ಕೂಡಲೇ ಪುನರ್ವಿಮರ್ಶೆ ಮಾಡಬೇಕು. ಮತ್ತು ಈಗ ಕೂಲಿಯಲ್ಲಿ ಮೂರನೇ ಒಂದು ಭಾಗವನ್ನು ಹಿಡಿದುಕೊಂಡು ಅವರಿಗೆ ಏನು ಕೊಡಲಾಗುತ್ತಿದೆ ಅದನ್ನು ಕೂಡಲೇ ನಿಲ್ಲಿಸಬೇಕು. ಎಲ್ಲ ಕಡೆ ಸರ್ಕಾರಿ ನೌಕರರಿಗೆ ತುಟ್ಟಿ ಭತ್ಯವನ್ನು ಜಾಸ್ತಿ ಮಾಡಲಾಗುತ್ತಿದೆ. ಆದರೂ ಕೂಡ ಕೇಂದ್ರ ಸರ್ಕಾರ ನೌಕರರು, ರಿಜರ್ವ ಬ್ಯಾಂಕ ನೌಕರರು ತಮ್ಮ ತುಟ್ಟಿಬತ್ಯ ಜಾಸ್ತಿ ಕೊಡಬೇಕೆಂದು ಸಂಪು ಹೂಡುತ್ತಿದ್ದಾರೆ. ದೊಡ್ಡ ದೊಡ್ಡ ಸಂಬಳದಾರರಿಗೆ ಕೊಡುತ್ತಿರುವ ತುಟ್ಟಿಬತ್ಯವೇ ಸಾಲದು ಎಂದು

ಹೇಳುತ್ತಿರುವಾಗ ಬಡ ಕೂಲಿದಾರರಿಗೆ ಅವರ ಹೊಟ್ಟೆ ಬಟ್ಟೆಗೆ ಸಾಲುವಷ್ಟು ಆದರೂ ಕೂಡ ಕೂಲಿಯನ್ನು ಕೊಡದಿದ್ದರೆ ಅವರು ಯಾವ ರೀತಿ ಕೆಲಸ ಮಾಡಬೇಕು. ಬಡ ಕೂಲಿಕಾರರ ಬಗ್ಗೆ ಯಾರಾದರೂ ಯೋಚನೆ ಮಾಡಿದ್ದಾರೆಯೇ? ಎಂದು ನಾನು ಕೇಳುತ್ತೇನೆ. ಇವರಿಗೆ ಕೊಡುತ್ತಿರುವ ಕೂಲಿಯನ್ನು ನೋಡಿದರೆ ನಾವು ಇನ್ನೂ ಯಾವ ಶತಮಾನದಲ್ಲಿ ಇದ್ದೇವೆ ಎಂಬುದನ್ನು ಗೊತ್ತಾಗುತ್ತದೆ. ಇವರಿಗೆ ಕೊಡುತ್ತಿರುವ ಕೂಲಿಯನ್ನು ಕೂಡಲೇ ಮಾರ್ಪಾಡು ಮಾಡದಿದ್ದರೆ ಕಷ್ಟ ಪರಿಸ್ಥಿತಿಯಲ್ಲಿರುವ ಜನರು ಇನ್ನೂ ಕಂಗಾಲಾಗುತ್ತಾರೆ. ಕಾಲಕ್ಕೆ ತಕ್ಕಂತೆ ಇವರ ಸಂಬಳವನ್ನು ಬದಲಾವಣೆ ಮಾಡದಿದ್ದರೆ ಇನ್ನು ಮುಂದೆ ಈ ಜನರು ಸಹನೆಯಿಂದ ಇರುವುದಿಲ್ಲ ಎಂದು ಹೇಳುತ್ತಿದ್ದೇನೆ. ಈ ಬಡ ಜನರಿಗೆ ಕೆಲಸ ಕೊಡುವಾಗಲೂ ಕೂಡ 5-6 ಮೈಲಿ ದೂರ ಹೋಗಿ ಕೆಲಸ ಮಾಡಬೇಕು ಎಂದು ಹೇಳುತ್ತಾರೆ. ಆ ರೀತಿ ಇರುವ ಸ್ಥಳದಿಂದ 5-6 ಮೈಲಿ ದೂರ ಹೋಗಿ ಕೆಲಸ ಮಾಡುವುದಕ್ಕೆ ಸಾಧ್ಯವೇ ಎಂಬುದನ್ನು ಸರ್ಕಾರದವರು ಯೋಚನೆ ಮಾಡಬೇಕು. ಹಿಂದೆ ರೂಪಾಯಿಗೆ 28 ಸೇರು ಜೋಳ ಸಿಗುತ್ತಿದ್ದ ಕಾಲದಲ್ಲಿ ಕೆಲಸ ಹುಡುಕಿಕೊಂಡು ಗುಳೆಕಟ್ಟಿಕೊಂಡು ಹೋಗುತ್ತಿದ್ದರು. ಆದರೆ ಈಗಿನ ಕಾಲದಲ್ಲಿ ತಮ್ಮ ದನಕರುಗಳನ್ನು ಬಿಟ್ಟು ಬೇರೆ ಊರುಗಳಿಗೆ ಹೋಗುವುದು ಕಷ್ಟ. ಯಾವ ಮನುಷ್ಯ ಯಾವ ಸ್ಥಳದಲ್ಲಿ ಇರುತ್ತಾನೋ ಆ ಸ್ಥಳದಲ್ಲಿಯೇ ಆಗಲೀ ಅಥವಾ ಒಂದೆರಡು ಮೈಲಿ ಸುತ್ತಳತೆಯೊಳಗೆಯಾಗಲೀ ಕೆಲಸ ಒದಗಿಸಿಕೊಡುವುದಕ್ಕೆ ತಕ್ಕ ಏರ್ಪಾಡನ್ನು ಸರ್ಕಾರದವರು ಮಾಡಬೇಕು. ಇಲ್ಲವಾದಲ್ಲಿ ಚೆನ್ನಾಗಿರುವುದಿಲ್ಲವೆಂದು ಹೇಳುತ್ತೇನೆ. ಬರ ಬಂದ ಕಾಲದಲ್ಲಿ ಮುದುಕರು, ಮಕ್ಕಳು, ಗರ್ಭಿಣಿ, ಹೆಂಗಸರು, ಅನಾಥರು ಮತ್ತು ಅಂಗವಿಹೀನರುಗಳಿಗೆ ಆಹಾರವನ್ನು ಒದಗಿಸುವ ಬಗ್ಗೆ ತಕ್ಕ ಏರ್ಪಾಡನ್ನು ಮಾಡಬೇಕು. ಇಂತಹವರ ಸಲುವಾಗಿ ಇದುವರೆಗೆ ಯಾವ ಒಂದು ಏರ್ಪಾಡನ್ನು ಸಹ ಮಾಡಿಲ್ಲ. ಕಳೆದ 5 ವರ್ಷಗಳಿಂದಲೂ ಬರ ಬಂದಿತ್ತು. ಈಗ ನಾವು 6 ನೇ ವರ್ಷದಲ್ಲಿ ಇದ್ದೇವೆ. ಈ ವರ್ಷವೂ ಬರ ಬಂದಿದೆ. ದುಡಿಯುವುದಕ್ಕೆ ಸಾಧ್ಯವಿಲ್ಲದಿರುವವರ ಬಗ್ಗೆ ಏನೂ ಮಾಡಿಲ್ಲ. ಇಂತಹವರಿಗೆ ದಿನಕ್ಕೆ ಒಂದು ಊಟ ಸಿಗುವುದು ಕೂಡ ಕಷ್ಟವಾಗಿದೆ. ಸುಗ್ಗಿ ಕಾಲದಲ್ಲಿ ಇಂತಹವರಿಗೆ ಯಾರಾದರೂ ಕೂಡ ಸಹಾಯ ಮಾಡುತ್ತಾರೆ. ಆದರೆ ಬರಗಾಲದಲ್ಲಿ ಯಾರೂ ಸಹಾಯ ಮಾಡುವುದಿಲ್ಲ. ಇಂತಹ ಸಲುವಾಗಿ ಸರ್ಕಾರದವರು ಬರಗಾಲದಲ್ಲಿ ಅನ್ನ ಒದಗಿಸುವುದಕ್ಕೆ ಏರ್ಪಾಡು ಮಾಡಬೇಕು. ಇಲ್ಲದಿದ್ದರೆ ಇವರುಗಳು ಬದುಕುವುದು ಕಷ್ಟವಾಗುತ್ತದೆ. ಬರಗಾಲ ಬಂದ ಕೂಡಲೇ ಪರಿಹಾರ ಕಾಮಗಾರಿಗಳನ್ನು ಕೈಗೊಳ್ಳಬೇಕು. ನಮ್ಮ ಭಾಗದ ಕಲೆಕ್ಟರ್ ಅವರು ಪರಿಹಾರ ಕಾಮಗಾರಿಯನ್ನು ಕೈಕೊಳ್ಳುವ ಬಗ್ಗೆ ಸ್ವಲ್ಪ ಸಮಯ ಕಾದು ನೋಡೋಣ

ಎಂದು ಹೇಳುತ್ತಾರೆ. ಇದರಿಂದ ಬಡ ಜನರಿಗೆ ಬಹಳ ಕಷ್ಟವಾಗುತ್ತಾ ಇದೆ. ಜೂನ್ ತಿಂಗಳಲ್ಲಿ ಮಳೆ ಬರದಿದ್ದರೆ ಕೂಡಲೇ ಪರಿಹಾರ ಕಾಮಗಾರಿ ಕೆಲಸಗಳನ್ನು ಕೈಕೊಂಡು ಜನರಿಗೆ ಕೆಲಸ ಒದಗಿಸಬೇಕು. ಮಳೆ ಬಂದ ಕೂಡಲೇ ಈ ಪರಿಹಾರ ಕಾಮಗಾರಿ ಕೆಲಸಗಳನ್ನು ನಿಲ್ಲಿಸುವುದು ಕೂಡ ಸರಿಯಲ್ಲ. ಮಳೆ ಬಂದ ಕೂಡಲೇ ಬೆಳೆ ಬರುವುದಿಲ್ಲ. ಮಳೆ ಬಂದ 8-10 ದಿನಗಳು ಜನರಿಗೆ ಕೆಲಸ ಸಿಕ್ಕಿದರೂ ಕೂಡ ನಂತರ ಕೆಲಸ ಸಿಗುವುದಿಲ್ಲ. ಆದ್ದರಿಂದ ಮಳೆಯಾಗಿ ಬೆಳೆಯಾಗುವವರೆಗೂ ಕೂಡ ಕೆಲಸ ಒದಗಿಸಬೇಕು. ಸಕಾಲಕ್ಕೆ ಮಳೆ ಬರದೆ ಬಿತ್ತಿದ ಬೆಳೆಗಳು ಒಣಗಿ ಹೋಗಿರುತ್ತದೆ. ಮಳೆ ಬಂದರೂ ಕೂಡ ಎರಡಾಣೆಯಿಂದ ನಾಲ್ಕಾಣೆಯವರೆಗೆ ಮಾತ್ರ ಬೆಳೆ ಕೈಗೆ ಸಿಗುತ್ತದೆ. ಆದ್ದರಿಂದ ಮುಂದಿನ ಬೆಳೆ ಕೈಗೆ ಸಿಗುವವರೆಗೂ ಕೂಡ ಪರಿಸ್ಥಿತಿಯನ್ನು ನೋಡಿಕೊಂಡು ಜನರಿಗೆ ಕೆಲಸ ಒದಗಿಸಬೇಕು. ಗೋಕಾಕ ತಾಲ್ಲೂಕಿನ ಪೂರ್ವ ಭಾಗದಲ್ಲಿ, ಕೌಜಲಗಿ ಮತ್ತು ಚಂದರಗೆ ಮುಂತಾದ ಪ್ರದೇಶಗಳಲ್ಲಿ ಎರೆ ಭೂಮಿ ಇದೆ. ಹಿಂಗಾರು ಮಳೆಯಿಂದ ಈ ಪ್ರದೇಶದಲ್ಲಿ ಯಾವ ಬೆಳೆಯೂ ಕೂಡ ಆಗುವುದಿಲ್ಲ. ಈ ಪ್ರದೇಶಗಳಲ್ಲಿ ಜೂನ್ ತಿಂಗಳಲ್ಲಿ ಮಳೆಯಾದರೆ ಮಾತ್ರ ಬೆಳೆಯಾಗುತ್ತದೆ. ಜೂನ್ ತಿಂಗಳು ಬಿಟ್ಟು ಮತ್ತೆ ಬೇರೆ ಯಾವ ತಿಂಗಳಲ್ಲಿ ಮಳೆಯಾದರೆ ಕೂಡ ಬೆಳೆಯಾಗುವುದಿಲ್ಲ. ಅಂದರೆ ಇಡೀ ವರ್ಷ ಬರಗಾಲವಿರುತ್ತದೆ. ನಮ್ಮ ಪಕ್ಕದ ಜಿಲ್ಲೆಯಲ್ಲಿಯೂ ಕೂಡ ಇದೇ ಪರಿಸ್ಥಿತಿ ಇದೆ. ಜೂನ್ ತಿಂಗಳಲ್ಲಿ ಮಳೆ ಬಾರದಿದ್ದರೆ ಇಡೀ ವರ್ಷ ಪರಿಹಾರ ಕಾಮಗಾರಿ ಕೆಲಸವನ್ನು ನಮ್ಮ ಭಾಗದಲ್ಲಿ ಕೈಕೊಳ್ಳಬೇಕೆಂದು ಸರ್ಕಾರದವರಲ್ಲಿ ಕೇಳಿಕೊಳ್ಳುತ್ತೇನೆ. ಇಲ್ಲದಿದ್ದರೆ ಅಲ್ಲಿಯ ಜನರು ಬೇರೆ ಊರುಗಳಿಗೆ ಕೆಲಸ ಹುಡುಕಿಕೊಂಡು ಹೋಗಬೇಕಾಗುತ್ತದೆ. ದನಕರುಗಳನ್ನು ಮಾರಬೇಕಾಗುತ್ತದೆ. ದನಕರುಗಳನ್ನು ಮಾರಿದ ಮೇಲೆ ಅವರ ಆರ್ಥಿಕ ಪರಿಸ್ಥಿತಿ ವಿಪರ್ಯಾಸವಾಗುತ್ತದೆ. ಮುಂದೆ ಮಳೆ ಬಂದಾಗ ದನಕರುಗಳನ್ನು ಕೊಳ್ಳಲು ಅವರಲ್ಲಿ ಹಣವಿರುವುದಿಲ್ಲ. ಬಡವರಿಗೆ ತಮ್ಮ ಎತ್ತುಗಳನ್ನು ಮಾರಿದ ಮೇಲೆ ಮತ್ತೇ ಕೊಳ್ಳುವುದು ಬಹಳ ಕಷ್ಟವಾಗುತ್ತದೆ. ಎತ್ತುಗಳನ್ನು ಕೊಂಡುಕೊಳ್ಳಲು ಸರ್ಕಾರದವರೇ ಸಹಾಯ ಮಾಡಬೇಕೆಂದು ನಾನು ಹೇಳುವುದಿಲ್ಲ. ಕ್ಷಾಮ ಬಂದ ಕೂಡಲೇ ಪರಿಹಾರ ಕಾಮಗಾರಿ ಕೆಲಸಗಳನ್ನು ಪ್ರಾರಂಭ ಮಾಡಬೇಕೆಂದು ನಾನು ಒತ್ತಿ ಹೇಳುತ್ತೇನೆ.

ಕ್ಷಾಮ ಪರಿಹಾರ ಕಾರ್ಯಗಳಿಗಾಗಿ ಸ್ವಲ್ಪ ಹೆಚ್ಚು ಹಣ ಕೊಟ್ಟು ಪರಿಹಾರ ಕಾರ್ಯಗಳು ಬೇಗ ಆಗುವಂತೆ ಮಾಡುವುದು ಉತ್ತಮ. ಹೀಗೆ ನಮ್ಮ ಭಾಗದಲ್ಲಿ ಬರಗಾಲಕ್ಕೆ ತುತ್ತಾಗಿರುವ ಭಾಗಗಳು ಬಹಳ ಹೆಚ್ಚಾಗಿರುವುದರಿಂದ ಇದರ ಕಡೆಗೆ ಸರಕಾರ ಸ್ವಲ್ಪ ಹೆಚ್ಚು ಲಕ್ಷ್ಯ ಕೊಟ್ಟು ವಿಚಾರ ಮಾಡಬೇಕು. ನಮ್ಮ ಭಾಗದಲ್ಲಿ

ಕಳೆದ 23 ವರ್ಷಗಳಿಂದಲೂ ನಮ್ಮ ಭಾಗದಲ್ಲಿ ಕ್ಷಾಮ ಆಗಾಗ್ಗೆ ಬರುತ್ತಿವೆ. ಮತ್ತು ಇದಕ್ಕಾಗಿ ಅನೇಕ ಯೋಜನೆಗಳನ್ನು ಮಾಡಿದ್ದಾರೆ. ಆದರೆ ಆ ಯೋಜನೆಗಳೆಲ್ಲಾ ಪೂರ್ತಿಯಾಗದೇ ಅರ್ಧದಲ್ಲಿ ಉಳಿದರೆ ಇದರಿಂದಾಗಿ ಇಲ್ಲಿನ ಜನರಿಗೆ ಬಹಳ ಕಷ್ಟವಾಗಿದೆ. ನಮ್ಮ ಭಾಗದಲ್ಲಿ ಘಟಪ್ರಭಾ ಯೋಜನೆ ಮಾಡಬೇಕು ಎಂದು ಇದಕ್ಕಾಗಿ ಮೊದಲನೇಯ ಪಂಚವಾರ್ಷಿಕ ಯೋಜನೆಯಲ್ಲಿ ಸುಮಾರು ಐದಾರು ಕೋಟಿಯಷ್ಟು ಹಣವನ್ನು ಒದಗಿಸಿ ಸ್ವಲ್ಪ ಮಟ್ಟಿನ ಖರ್ಚು ಮಾಡಿದ್ದಾರೆ. ಈ ಯೋಜನೆಯನ್ನು 1956 ರಲ್ಲಿ ಮಾಡಬೇಕೆಂದು ಸರ್ಕಾರದ ಮೇಲೆ ಒತ್ತಾಯ ತರುತ್ತಿದ್ದರು ಇದರ ಕಾರ್ಯ ಬೇಗ ಆರಂಭವಾಗದೇ ಇಚೆಗೆ ಪ್ರಾರಂಭ ಮಾಡಿದ್ದಾರೆ. ಮತ್ತು ಇದರ ಪ್ರಗತಿ ಕೂಡಾ ಆಗಿರುವುದು ಬಹಳ ಕಡಿಮೆ. ನಮ್ಮ ಭಾಗದ ಜನಕ್ಕೆ ಇಂತಹ ಒಂದು ಯೋಜನೆಯಿಂದ ಬಹು ಅನುಕೂಲವಾಗುತ್ತದೆ ಮತ್ತು ಸ್ವಲ್ಪ ಮಟ್ಟಿನ ನೀರಾವರಿಗೂ ಅನುಕೂಲವಾಗುತ್ತದೆ. ಈ ಯೋಜನೆ ಪೂರ್ಣವಾದರೆ ಕೆಲವಾರು ನೀರಾವರಿ ಯೋಜನೆಗಳನ್ನು ಮಾಡಿಕೊಳ್ಳಲು ಅನುಕೂಲವಾಗುತ್ತದೆ ಎನ್ನುವ ಆಸೆಯನ್ನು ನಮ್ಮ ಭಾಗದ ಜನ ಇಟ್ಟುಕೊಂಡಿದ್ದಾರೆ. ನಮ್ಮ ಭಾಗ ಹಿಂದೆ ಮುಂಬೈ ರಾಜ್ಯದಲ್ಲಿದ್ದಾಗ ಈ ಯೋಜನೆ ಆಗಬೇಕಾಗಿತ್ತು. ಆದರೆ ಈಗ ರಾಜ್ಯಗಳ ಪುನರ್ ವಿಂಗಡನೆಯ ವಿಚಾರ ಬಂದುದ್ದರಿಂದ ನಮ್ಮ ಭಾಗದವರು ಕೂಡ ಕನ್ನಡ ರಾಜ್ಯಕ್ಕೆ ಬಂದರೆ ಬಹಳ ಅನುಕೂಲಾಗುತ್ತದೆ ಎಂದು ನಾವೆಲ್ಲಾ ಒಂದಾಗಿ ಕನ್ನಡ ರಾಜ್ಯಕ್ಕೆ ಬರಬೇಕಾಯಿತು. ಇದರಿಂದಾಗಿ ಆಗ ಮಾಡಿದ ಯೋಜನೆಗಳೆಲ್ಲಾ ತಲೆಕೆಳಗಾದವು. ಮತ್ತು ನಮ್ಮ ಭಾಗದಲ್ಲಿ ಇದ್ದ ಉತ್ತಮವಾದ ಭಾಗ ಮಹಾರಾಷ್ಟ್ರಕ್ಕೆ ಹೋಯಿತು. ಇದನ್ನು ಪಡೆಯಲು ನಮ್ಮ ರಾಜ್ಯದವರು ಯಾವುದೇ ಪ್ರಯತ್ನವನ್ನು ಈವರೆಗೆ ಮಾಡಲಿಲ್ಲ. ಹಡಲ್ಗ ಆಜರಾ, ಮತ್ತು ಇನ್ನಿತರ ಭಾಗಗಳು ಮಹಾರಾಷ್ಟ್ರಕ್ಕೆ ಹೋಗಿವೆ. ಈ ಮಾಡಿರುವ ಯೋಜನೆಯನ್ನಾದರು ಪೂರ್ಣ ಮಾಡಿದರೆ ನಮ್ಮ ಭಾಗದಲ್ಲಿ ಸುಮಾರು ಒಂದುವರೆ ಲಕ್ಷ ಎಕರೆಗಳಷ್ಟು ಕಡಿಮೆ ಭೂಮಿಗೆ ನೀರಿನ ಸೌಕರ್ಯ ಸಿಗುತ್ತದೆ. ನಮ್ಮ ಭಾಗದಲ್ಲಿರುವ ಯರಗಟ್ಟಿ ಹಾಗೂ ಇನ್ನಿತರ ಭಾಗಗಳಲ್ಲಿ ಶಾಶ್ವತವಾಗಿ ನೀರಾವರಿ ಯೋಜನೆಗಳನ್ನು ತೆಗೆದುಕೊಂಡರೆ ಫಲಪ್ರದವಾದ ಬೆಳೆಗಳನ್ನು ಮಾಡಲು ಅವಕಾಶವಿತ್ತು ಮತ್ತು ಇಲ್ಲಿಯ ಭೂಮಿಯೂ ಕೂಡ ಬಹಳ ಯೋಗ್ಯವಾದುದ್ದಾಗಿದೆ. ಆದರೆ ಈಗ ಖಾಯಂ ನೀರಾವರಿ ಸೌಕರ್ಯ ಇಲ್ಲದೆ ಬರಗಾಲಕ್ಕೆ ನಮ್ಮ ಭಾಗದವರು ತುತ್ತಾಗಬೇಕಾಗಿದೆ. ಇದಕ್ಕೆ ಒಂದು ತಕ್ಕ ಯೋಜನೆಯನ್ನು ಮಾಡಬೇಕೆಂದು ಸುಮಾರು 4-6 ವರ್ಷಗಳಿಂದಲೂ ಸರ್ಕಾರಕ್ಕೆ ಮನವಿ ಮಾಡುತ್ತಿದ್ದರು ಇದುವರೆಗೆ ಯಾವುದೂ ಆಗಲಿಲ್ಲ. ಈಗ ಇಲ್ಲಿ ನೀರಾವರಿ ಯೋಜನೆ ಆರಂಭ ಮಾಡಿದ್ದರೂ ಅದು ಇನ್ನು

ಫೌಂಡೇಷನ್ ಸ್ಟೇಜ್‌ನಲ್ಲೇ ಇದೆ. ಈ ಯೋಜನೆ ಮುಕ್ತಾಯವಾಗಬೇಕಾದರೆ ಸುಮಾರು 20 ವರ್ಷಗಳಾದರೂ ಬೇಕಾಗಬಹುದು. ಮತ್ತು ಇದರ ಖರ್ಚು ಕೂಡ 35 ಕೋಟಿಯವರೆಗೆ ಹೋಗಬಹುದು ಎಂದು ಇದ್ದದ್ದು ಈಗ ಇದು ಮುಗಿಯುವ ವೇಳೆಗೆ ಸುಮಾರು 100-35 ಕೋಟಿಯವರೆಗೆ ಹೋಗಬಹುದು ಇಲ್ಲಾ ಅದಕ್ಕೂ ಜಾಸ್ತಿ ವೆಚ್ಚವಾಗಬಹುದು. ಈ ಯೋಜನೆ ಪೂರ್ಣವಾದ ನಂತರ ನಮ್ಮ ಭಾಗದಲ್ಲಿರುವ ಬಾಗಲಕೋಟೆ, ಬಾದಾಮಿ, ಸೌದತ್ತಿ, ಗೋಕಾಕ ಹಾಗೂ ಇನ್ನು ಕೆಲವು ಭಾಗಗಳಿಗೆ ನೀರಾವರಿ ಸೌಕರ್ಯ ಸಿಕ್ಕು ಬರಗಾಲದ ಕಷ್ಟದಿಂದ ಸ್ವಲ್ಪ ಮಟ್ಟಿಗೆ ಅನುಕೂಲ ಪಡೆಯಬಹುದು. ನಮ್ಮ ಭಾಗದಲ್ಲಿ ಈ ನೀರಾವರಿ ಯೋಜನೆ ಆಗಿದ್ದೇ ಸುಮಾರು ಮೂರೂವರೆ ಲಕ್ಷ ಎಕರೆಗಳಲ್ಲಿ ದವಸ ಧಾನ್ಯ ಬೆಳೆಯಲು ಅನುಕೂಲವಾಗುತ್ತಿತ್ತು. ಈಗ ಬಂದಿರುವ ಬರಗಾಲವನ್ನು ತಪ್ಪಿಸಲು ತಕ್ಕ ಪರಿಹಾರ ಕ್ರಮಗಳನ್ನು ಮಾಡುವುದು ಅವಶ್ಯವಿದೆ. ಆದರೆ ಇಂದು ನಡೆಯುತ್ತಿರುವ ಕೆಲಸಗಳನ್ನು ನೋಡಿದರೆ ಅವು ಬಹಳ ವಿಳಂಬವಾಗುತ್ತಿವೆ. ಇದರಿಂದ ಯಾವ ರೀತಿಯ ಪರಿಹಾರವು ತಕ್ಷಣದಲ್ಲಿ ಸಿಗುವುದಿಲ್ಲ. ಮಲಪ್ರಭಾ ಯೋಜನೆಯ ಕೆಲಸ ಬಹಳ ನಿಧಾನವಾಗಿ ಆಗುತ್ತಿದೆ. ಇದು ಇನ್ನು ಫೌಂಡೇಷನ್ ಸ್ಟೇಜ್‌ನಲ್ಲಿಯೇ ಇದೆ. ಈ ಯೋಜನೆಯ ಕೆಲಸ ಮುಗಿಯಲು ಇನ್ನು ಬಹಳ ಕಾಲ ಬೇಕಾಗುತ್ತದೆ. ಇದಕ್ಕಾಗಿ ನಮ್ಮ ಕಡೆಗಳಲ್ಲಿ ಸಣ್ಣ ಸಣ್ಣ ಕೆರೆಗಳನ್ನು ತೆಗೆದುಕೊಂಡು ದುರಸ್ತಿ ಮಾಡುವುದು ಅಗತ್ಯವಿದೆ. ನಮ್ಮ ಕಡೆ ಹೆಚ್ಚು ಕೆರೆಗಳಾಗಲೀ ಟೆಂಡರಗಳಾಗಲೀ ಇಲ್ಲ. ಆದರೂ ಇರುವ ಸಣ್ಣ ಕೆರೆಗಳನ್ನು ಬೇಗನೆ ದುರಸ್ತು ಮಾಡಿ ನಮ್ಮ ಭಾಗದ ಜನಕ್ಕೆ ಅನುಕೂಲ ಮಾಡಿದರೆ ಇಂದಿನ ತುಟ್ಟಿ ಕಾಲದಲ್ಲಿ ಸ್ವಲ್ಪ ಮಟ್ಟಿನ ಅನುಕೂಲ ಸಿಕ್ಕು ಬದುಕಬಹುದು. ಇಂದಿನ ತುಟ್ಟಿ ಕಾಲದಲ್ಲಿ ಬಡವರಿಗೆ ಬದುಕಲು ಸರಿಯಾದ ಉತ್ಪನ್ನ ಕೂಡ ಸಿಗುತ್ತಿಲ್ಲ. ಕೂಲಿ ಕೂಡ ಇಲ್ಲಿ ಜನಕ್ಕೆ 30ಪೈಸೆಯಿಂದ 50 ಪೈಸೆ ದಿನಕ್ಕೆ ಸಿಗುವುದೇ ಕಷ್ಟವಾಗಿದೆ. ಹೀಗಿರುವಾಗ ಇಂತಹ ಬಡ ಜನರು ಬದುಕುವದಾದರೂ ಹೇಗೆ ಇಂತಹ ಒಂದು ಕಷ್ಟ ಪರಿಸ್ಥಿತಿಯನ್ನು ಮುಂದುವರೆಸಿಕೊಂಡು ಹೋಗದೇ ಜನತೆಗೆ ಸಹಾಯ ಮಾಡಬೇಕು. ಹಾಗೆ ಸರ್ಕಾರ ಮಾಡದೇ ಹೋದರೆ ಜನತೆಯ ಸಹನೆ ಮೀರಿ ಮುಂದೆ ಇದೇ ಜನ ಸತ್ಯಾಗ್ರಹ ಮಾಡಬೇಕಾಗಿ ಬಂದೀತು, ಎನ್ನುವ ಒಂದು ಎಚ್ಚರಿಕೆಯನ್ನು ಸರ್ಕಾರಕ್ಕೆ ಈ ಸಂದರ್ಭದಲ್ಲಿ ಕೊಡಲು ಇಚ್ಛಿಸುತ್ತೇನೆ. ಕಳೆದ 16 ವರ್ಷಗಳಿಂದಲೂ ನಾವು ಬರಗಾಲದ ಬಗ್ಗೆ ಇಲ್ಲಿ ಹೇಳುತ್ತಲೇ ಬರುತ್ತಿದ್ದೇವೆ. ಇದರ ಬಗ್ಗೆ ಈಚೆಗೆ ಸ್ವಲ್ಪ ಲಕ್ಷ್ಯ ಕೊಟ್ಟು ಕೆಲಸ ಮಾಡುತ್ತಿದ್ದಾರೆ. ಆದರೆ ಇದನ್ನು ಇನ್ನು ಸ್ವಲ್ಪ ತ್ವರಿತದಿಂದ ವಿಚಾರ ಮಾಡಬೇಕಾಗಿದೆ. ನಮ್ಮ ಭಾಗಗಳು ಇಲ್ಲಿಗೆ ಬರದೇ ಮುಂಬಯಿ

ರಾಜ್ಯದಲ್ಲಿದ್ದರೆ ಇಷ್ಟು ಹೊತ್ತಿಗೆ ಇಲ್ಲಿನ ನೀರಾವರಿ ಕೆಲಸಗಳೆಲ್ಲಾ ಪೂರ್ತಿಯಾಗಿ ಮುಗಿದು ಜನತೆಗೆ ಅನುಕೂಲವಾಗುತ್ತಿತ್ತು. ಆದರೆ ಇಲ್ಲಿನ ರಾಜ್ಯ ಸರ್ಕಾರ ಕೇಂದ್ರ ಮಂಜೂರಿಗಾಗಿ ಕಾಯುತ್ತಿದ್ದೇವೆ ಎಂದು ಹೇಳುವುದು ತಪ್ಪು. ರಾಜ್ಯ ಸರ್ಕಾರ ಇದಕ್ಕೆ ಹೇಗಾದರೂ ಮಾಡಿ ದುಡ್ಡು ಒದಗಿಸಿ ಇದರ ಕೆಲಸ ಮಾಡಬೇಕು ಎಂದು ಒತ್ತಾಯದಿಂದ ಹೇಳುತ್ತೇನೆ. ಮತ್ತು ಶಾಶ್ವತವಾದ ಪರಿಹಾರವಾಗಬೇಕು. ಈಗ ಪರಿಹಾರ ಕಾರ್ಯಕ್ರಮಗಳನ್ನು ಮಾಡುವ ನೀತಿಯಲ್ಲಿ ಸ್ವಲ್ಪ ಬದಲಾವಣೆ ಮಾಡಬೇಕು. ಬರಗಾಲದಲ್ಲಿ ನಮ್ಮ ಭಾಗದಲ್ಲಿರುವ ಬಡ ಜನರು ಇದೇ ಸ್ಥಿತಿಯನ್ನು ಮುಂದುವರೆಸಿಕೊಂಡು ಬಂದರೆ ಸರ್ಕಾರದ ನೀತಿಯನ್ನು ಅವರು ಸಹಿಸಲಾರರು ಎನ್ನುವ ಮಾತನ್ನು ಇಲ್ಲಿ ನಾನು ಒತ್ತಿ ಹೇಳುತ್ತೇನೆ. ಹೊಸ ಪರಿಸ್ಥಿತಿಗೆ ಅನುಸಾರವಾಗಿ ಈಗಿರುವ ರೇಟುಗಳನ್ನು ಬದಲಾವಣೆ ಮಾಡಬೇಕು ಮತ್ತು ಪರಿಹಾರದ ಕೆಲಸಗಳನ್ನು ಕಂಟ್ರಾಕ್ಟರುಗಳಿಗೆ ಕೊಡುವುದನ್ನು ತಪ್ಪಿಸಬೇಕು. ಹೊಸದಾಗಿ ಕೆಲಸಗಳನ್ನು ಕೊಡುವಾಗ ಕಂಟ್ರ್ಯಾಕ್ಟರುಗಳಿಗೆ ಕೊಡುವುದು ಬೇಡ ಪಿ.ಡಬ್ಲ್ಯು.ಡಿ. ಹಾಗೂ ತಾಲ್ಲೂಕು ಡೆವಲೆಪ್‌ಮೆಂಟ್ ಬೋರ್ಡುಗಳಿವೆ. ಇವರಿಗೆ ಇಂತಹ ಕೆಲಸಗಳನ್ನು ಕೊಡಬೇಕು. ಬೇರೆ ಇತರರಿಗೆ ಈ ಕೆಲಸಗಳನ್ನು ಕೊಡುವುದು ಬೇಡ.

ಆಮೇಲೆ ಜಿಲ್ಲಾಧಿಕಾರಿಗಳು ಸರ್ಕಾರದ ಮಂಜೂರಾತಿಗಾಗಿ ಕಾಯದೇ ಮಳೆ ಬರುವುದಿಲ್ಲವೋ ಅಂತಹ ಕಡೆಗಳನ್ನು ಸರಿಯಾಗಿ ನೋಡಿಕೊಂಡು ಬಂದು ಅಲ್ಲಿ ಆಗಿಂದಾಗ್ಗೆ ಬೇಗನೆ ಕೆಲಸಗಳನ್ನು ಪ್ರಾರಂಭ ಮಾಡಲೇಬೇಕು ಇದರ ಕಡೆಗೆ ಸರ್ಕಾರ ಸರಿಯಾದ ವ್ಯವಸ್ಥೆ ಮಾಡಬೇಕು. ಪ್ರತಿಯೊಂದಕ್ಕೂ ಡೆಪ್ಯುಟಿ ಕಮೀಷನ್‌ರರವರು ಸರ್ಕಾರದ ಕಡೆಗೆ ಕಾಯುತ್ತಾ ಕುಳಿತರೆ ಕೆಲಸಗಳಾಗುವುದು ಕಷ್ಟವಾಗುತ್ತದೆ. ಮತ್ತು ಜನತೆಗೆ ಸಾಕಷ್ಟು ಪರಿಹಾರ ಸಿಗುವುದಿಲ್ಲ. ಆದಷ್ಟು ನೀರಾವರಿ ಕಾಮಗಾರಿಗಳಿಗೆ ಹೆಚ್ಚು ಪ್ರಾಶಸ್ತ್ಯ ಕೊಡಬೇಕು. ಇದಕ್ಕಾಗಿ ಸಣ್ಣ ನೀರಾವರಿ ಯೋಜನೆಗಳು, ಮಧ್ಯಮ ನೀರಾವರಿ ಯೋಜನೆಗಳು ಮತ್ತು ಲಿಫ್ಟ್ ಇರಿಗೇಷನ್ ಯೋಜನೆಗಳು ಇದನ್ನು ಮಾಡಿ ಆದಷ್ಟು ಹೆಚ್ಚು ನೀರಾವರಿ ಯೋಜನೆಗಳಿಗೆ ಪ್ರಾಶಸ್ತ್ಯ ಕೊಡಬೇಕು. ಬರಗಾಲವನ್ನು ಶಾಶ್ವತವಾಗಿ ಪರಿಹಾರ ಮಾಡಲು ಮತ್ತು ಕೆಲಸಗಳನ್ನು ಮಾಡಲು ಅನುಭವಿ ಅಧಿಕಾರಿಗಳನ್ನು ಇಲ್ಲಿಗೆ ನೇಮಿಸಬೇಕು. ಈಚೆಗೆ ಮೈನರ್ ಇರಿಗೇಷನ್ ಇನ್ವೆಷ್ಟಿಗೇಷನ್ ಇಲಾಖೆ ಎಂದು ಸರ್ಕಾರ ಮಾಡಿದೆ. ಅದರಲ್ಲಿ ಪಿ.ಡಬ್ಲ್ಯು.ಡಿ. ಯಲ್ಲಿ ಯಾವ ಅಧಿಕಾರಿ ಬೇಕಾಗಿಲ್ಲವೋ ಅಂತಹ ಅನುಪಯೋಗವಾದ ಅಧಿಕಾರಿಗಳನ್ನು ಇಂತಹ ಇನ್ವೇಷ್ಟಿಗೇಷನ್ ಇಲಾಖೆಗೆ ಕಳುಹಿಸುತ್ತಾರೆ. ಇದರಿಂದಾಗಿ

ಇಲ್ಲಿ ಕೆಲಸಗಳು ಮೂರು ನಾಲ್ಕು ವರ್ಷಗಳು ನಿಧಾನವಾಗುತ್ತವೆ. ಮತ್ತು ಮೊದಲು ಮಾಡಿದ ಯೋಜನೆಗಳೆಲ್ಲಾ ತಲೆಕೆಳಗಾಗುವ ಸ್ಥಿತಿ ಬಂದಿದೆ. ಇಂತಹ ಮೈನರ್ ಇರ್ರಿಗೇಷನ್, ಇನ್ವೆಷ್ಟಿಗೇಷನ್ ಇಲಾಖೆ ಎನ್ನುವುದನ್ನು ಸರ್ಕಾರ ಕೂಡಲೇ ರದ್ದು ಮಾಡಬೇಕು ಇಲ್ಲದಿದ್ದರೆ ಪರಿಹಾರ ಕಾರ್ಯಕ್ರಮಗಳ ಯೋಜನೆಯನ್ನು ಕಾರ್ಯಗತ ಮಾಡುವುದಕ್ಕೆ ತಕ್ಕ ವ್ಯವಸ್ಥೆ ಮಾಡಬೇಕು. ಮೈನರ್ ಇನ್ವೆಷ್ಟಿಗೇಷನ್ ಇಲಾಖೆಯಲ್ಲಿ ಎಸ್ಟಿಮೆಂಟುಗಳು, ಪ್ಲ್ಯಾನುಗಳು ಬಂದಾಗ ಅದನ್ನು ಸರಿಯಾಗಿ ಪರಿಷ್ಕಾರ ಮಾಡಿ ಒಪ್ಪಬೇಕು. ಇಲ್ಲದೇ ಇದ್ದರೆ ಇಲ್ಲಿನ ಕೆಲಸಗಳು ಸರಿಯಾಗಿ ನಿರ್ವಹಣೆ ಮಾಡಲು ಆಗುವುದಿಲ್ಲ. ಇನ್ನು ಮುಂದಾದರೂ ಸರ್ಕಾರ ಇದರ ಕಡೆಗೆ ಹೆಚ್ಚು ನೀಗಾ ಕೊಟ್ಟು ಕೆಲಸ ಮಾಡಿ ಅಲ್ಲಲ್ಲಿ ಬಾವಿ ಕೆಲಸಗಳನ್ನು ಹಾಗೂ ಇನ್ನಿತರ ಬರಗಾಲದ ಕೆಲಸಗಳನ್ನು ಬೇಗನೇ ಆಗುವಂತೆ ಮಾಡಬೇಕು. ಬಾವಿಗಳನ್ನು ಮಾಡಲು ರ್‍ಯಾಂಡ್ ಡವಲೆಪ್‌ಮೆಂಟ ಬ್ಯಾಂಕುಗಳ ಮೂಲಕ ಜನಕ್ಕೆ ಸಾಲ ಕೊಡುತ್ತಿದ್ದಾರೆ ಮತ್ತು ಕಮ್ಯುನಿಟಿ ವೆಲ್ಸ್ ಗಾಗಿ ಸಾಲ ಕೊಡುತ್ತಿದ್ದಾರೆ ಇದರಿಂದ ಬಡ ರೈತಾಪಿ ಜನಕ್ಕೆ ಬಹಳ ಅನುಕೂಲವಾಗುತ್ತದೆ. ನಾಲ್ಕಾರು ರೈತರು ಒಂದೇ ಕಡೆ ಸೇರಿ ಇದನ್ನು ತೆಗೆದುಕೊಳ್ಳುವ ಅನುಕೂಲವನ್ನು ಅಲ್ಲಲ್ಲಿ ಮಾಡಿಕೊಳ್ಳುತ್ತಿರುವದರಿಂದ ಬಡ ಜನತೆಗೆ ಇದರಿಂದ ಬಹಳ ಅನುಕೂಲವಾಗಿದೆ. ಆದರೆ ನಮ್ಮ ಭಾಗದಲ್ಲಿ ಈ ಯೋಜನೆಯನ್ನು ಜಾರಿಗೆ ತಂದಿಲ್ಲ. ಇದು ಅಲ್ಲದೇ ಬಾವಿಗಳನ್ನು ತೆಗೆಸುವುದಕ್ಕೆ ಮೊದಲುಅಲ್ಲಲ್ಲಿ ಗ್ರೌಂಡ ವಾಟರ್ ಸೋರ್ಸ್ ಚೆನ್ನಾಗಿದೆಯೇ ಎನ್ನುವುದನ್ನು ಪರಿಶೀಲನೆ ಮಾಡಿ ಆನಂತರ ಬಾವಿಗಳನ್ನು ತೆಗೆಸಿದರೆ ಅನುಕೂಲವಾಗುತ್ತದೆ. ಇಲ್ಲವೇ ಕೆಲವು ವೇಳೆ ಬಾವಿಯನ್ನು ತೊಡಿಸಿದರೂ ನೀರು ಸಿಗುವುದು ಕಷ್ಟವಾಗುತ್ತದೆ ಇದಕ್ಕೆ ಅವಕಾಶ ಕೊಡಬಾರದು ಮತ್ತು ನಾನು ಈ ಮೊದಲೇ ಹೇಳಿರುವ ಸೂಚನೆಗಳನ್ನೆಲ್ಲಾ ಸರ್ಕಾರದವರು ಲಕ್ಷ್ಯಕ್ಕೆ ತೆಗೆದುಕೊಂಡು ಶಾಶ್ವತವಾದ ಕ್ರಮಗಳನ್ನು ಬರಗಾಲಕ್ಕೆ ಅನುಕೂಲವಾಗುವಂತಹ ರೀತಿಯಲ್ಲಿ ಬೇಗನೆ ಕೈಗೊಳ್ಳಬೇಕೆಂದು ಸಲಹೆ ಮಾಡುತ್ತೇನೆ. ಪರಿಹಾರಗಳು ಬಡ ಜನತೆಗೆ ಬೇಗನೆ ಸಿಗಲಿ.

## "ಹೆತ್ತವಳಿಗೆ ಗೊತ್ತು ಹೆರಿಗೆ ನೋವು"

**ಒಡ ರೈತರ ಸಂಕಟವನ್ನು ಪರಿಗಣನೆಗೆ ತೆಗೆದುಕೊಳ್ಳದೆ ನದಿ ದಂಡೆಯ ರೈತರಿಗೆ ನೀರು ಕರ, ನೀರಾವರಿ ಮೇಲು ತೆರಿಗೆ (cess) ಅದನ್ನು ಕೊಡಲು ತಪ್ಪಿದರೆ ಅಧಿಕ ಪ್ರಮಾಣದ ದಂಡ ವಿಧಿಸುವ ಮೂಲಕ ಅವರನ್ನು ಸಂಪೂರ್ಣವಾಗಿ ಶೋಷಿಸುವ ಸರ್ಕಾರದ ಕ್ರಮವನ್ನು ಖಂಡಿಸುವ ಹಾಗೂ ರೈತರ ಅಳಲನ್ನು ಸದನಕ್ಕೆ ಮುಟ್ಟಿಸುವ ಹೃದಯಸ್ಪರ್ಶಿ ಸನ್ನಿವೇಶದ ಪಂಚಗಾವಿಯವರ ಇಂಗ್ಲೀಷ ಭಾಷಣದ ಆಯ್ದ ಕೆಲ ಕನ್ನಡದ ಅವತರಣಿಕೆ ಇಲ್ಲಿವೆ.**

"…. ನಾನು ರೈತನೇ ಆಗಿರುವದರಿಂದ ಒಣ ಬೇಸಾಯದಲ್ಲಿ ಬೆಳೆ ಬೆಳೆಯಲು ರೈತ ಎಷ್ಟೊಂದು ಹೆಣಗಬೇಕಾಗುತ್ತದೆ ನನಗೆ ಗೊತ್ತು. ಹೆತ್ತವಳಿಗೆ ಗೊತ್ತು ಹೇರಿಗೆ ನೋವು ಎನ್ನುತ್ತಾರಲ್ಲ ಹಾಗೆ. ಒಣ ಬೆಳೆಗಾಗಿ ಹಾಗೂ ಕಬ್ಬು ಮತ್ತು ವರ್ಷದುದ್ದಕ್ಕೂ ಬೆಳೆಯುವ ಬೆಳೆಗಳಿಗೆ ಕನಿಷ್ಠ 8 ದಿನಗಳಿಗೊಮ್ಮೆ ನೀರು ಬೇಕು. ಆದರೆ ನಮಗೆ 20-30 ದಿನಗಳಿಗೊಂದಾವರ್ತಿ ನೀರುದಕ್ಕುತ್ತಿಲ್ಲ. ಇಂಥದರಲ್ಲಿ ನಮಗೆ ದೊರೆತ ಅತೀ ಕಡಿಮೆ ನೀರಿಗೆ ಪ್ರತಿಯಾಗಿ ಕೊಡುವ ಕರಭಾರವೇ ಅಧಿಕವಾಗಿದೆ. ನಾನು ಹಿಂದೆ ಮುಂಬೈ ಪ್ರಾಂತ್ಯದ ಶಾಸಕನಾಗಿದ್ದಾಗಲೂ ಇಂತಹದೇ ಪರಿಸ್ಥಿತಿ ಇತ್ತು. ಅಲ್ಲಿಯೂ ಅವರ ಗಮನಕ್ಕೆ ಇದನ್ನು ತಂದಿದ್ದೆ. ಇಲ್ಲಿಯೂ ಈಗ P.W.D. ಸಚಿವರ ಹಾಗೂ ಮುಖ್ಯ ಕಾರ್ಯದರ್ಶಿಗಳ ಗಮನಕ್ಕೆ ತಂದಿದ್ದೇನೆ. ಅವರು ನಮ್ಮ ಭಾಗದಲ್ಲಿ ಪ್ರವಾಸ ಕೈಗೊಂಡು ಬಂದರಾದರೂ ಪರಿಸ್ಥಿತಿಯಲ್ಲಿ ಸುಧಾರಣೆ ಆಗಲಿಲ್ಲ. ಗೋಕಾಕನದಿ ಮತ್ತು ನಾಲೆ ಪ್ರದೇಶವನ್ನು 'Notified Area' ಎಂದು ಘೋಷಿಸಿದ್ದಾರೆ. ಇಲ್ಲಿ ಬೆಳೆಗೆ ನೀರೆತ್ತಿದರೆ ದಂಡ ಹಾಕಲಾಗುತ್ತದೆ. ಚಿಕ್ಕ ಪ್ರದೇಶದಲ್ಲಿ ತರಕಾರಿ ಬೆಳೆಯನ್ನು ಬೆಳೆಯಬೇಕೆಂದರೂ ಕೂಡಾ ಅನುಮತಿ ಬೇಕು. ನಮ್ಮ ಭಾಗದ 'ಬದನೆ' ಅತ್ಯಂತ ಪ್ರಸಿದ್ಧವಾದದ್ದು. ಅದನ್ನು ಬೆಳೆದ ರೈತನನ್ನು ಅಪರಾಧಿಗಳೆಂದು ಪರಿಗಣಿಸಿ ಕಳೆದ ನಾಲ್ಕೈದು ವರ್ಷಗಳಿಂದ ದಂಡಹಾಕುತ್ತ ಬಂದಿದ್ದಾರೆ. ಅಷ್ಟೇ ಏಕೆ ಕೈಯಿಂದ ನೀರು ಹೊತ್ತು ಹಾಕಿದವರು ದಂಡ ತೆರಬೇಕಾಗಿದೆ. ಇಂತಹ ಅಧಿಕ ಪ್ರಮಾಣದ ಮೇಲು ತೆರಿಗೆ ಯೋಗ್ಯವೇ? ಈ ರೀತಿ ರೈತನನ್ನು ಗೋಳು ಹೊಯ್ದು ಸರ್ಕಾರ ತನ್ನ ಖಜಾನೆಯನ್ನು ಎಷ್ಟರ ಮಟ್ಟಿಗೆ ತುಂಬಿಕೊಳ್ಳಲು ಸಾಧ್ಯ?"

"….. ಅದೂ ಅಲ್ಲದೇ ಘಟಪ್ರಭಾ ಅಚ್ಚುಕಟ್ಟು ಪ್ರದೇಶದ ತೆರಿಗೆಯು ಇನ್ನಿತರ ಪ್ರದೇಶಗಳಿಗೆ ಹೋಲಿಸಿದರೆ ಅತ್ಯಧಿಕವಾಗಿದೆ. ಕೃಷ್ಣ ರಾಜ ಸಾಗರ ಪ್ರದೇಶದಲ್ಲಿ ಇಡೀ ವರ್ಷಕ್ಕೆ 10/- ರೂಪಾಯಿ, ತುಂಗಭದ್ರಾ ಪ್ರದೇಶದಲ್ಲಿ ಭತ್ತಕ್ಕೆ 15/- ರೂಪಾಯಿ, ಕಬ್ಬಿಗೆ 20/- ರೂಪಾಯಿ ಹಾಗೂ ಇನ್ನಿತರ ಬೆಳೆಗಳಿಗೆ 6/-

ರೂಪಾಯಿಯಂತಿದೆ. ..... ಇವನ್ನೆಲ್ಲ ಗಮನಿಸಿದಾಗ ಘಟಪ್ರಭಾ ನೀರಾವರಿ ಪ್ರದೇಶದಲ್ಲಿ ಸಂಪೂರ್ಣ ನೀರಾವರಿ ಅನುಕೂಲ ಇಲ್ಲದಿದ್ದರೂ ಕರಭಾರ ಮಾತ್ರ ದುಪ್ಪಟ್ಟು ಆಗಿದೆ.''

ಈ ಹಂತದಲ್ಲಿ ಶ್ರೀ ಎಂ. ಸಿ. ನರಸಿಂಹನ್ ಮತ್ತು ಶ್ರೀ ಎಚ್. ಕೆ. ವೀರಣ್ಣಗೌಡ ಇವರ ಪೂರಕ ಪ್ರಶ್ನೆಗಳನ್ನು ಗಮನದಲ್ಲಿಟ್ಟುಕೊಂಡು ಶ್ರೀ ಎ. ಆರ್. ಪಂಚಗಾವಿಯವರು ಹಿಡಕಲ್ ಆಣೆಕಟ್ಟೆ ನಿರ್ಮಾಣ ಕಾರ್ಯವನ್ನು ಹಾಗೂ ನಿರ್ಮಾಣ ವಿಳಂಬ ನೀತಿ ಕುಂಟುತ್ತ ಸಾಗಿರುವ ಯೋಜನೆ, ಜಲಾಶಯ ನಿರ್ಮಾಣದೊಂದಿಗೆ ಕಾಲುವೆ ನಿರ್ಮಾಣಗಳು ಆ ಅಚ್ಚುಕಟ್ಟು ಪ್ರದೇಶದಲ್ಲಿ ಕೆರೆ ಮುಂತಾದವುಗಳ ನಿರ್ಮಾಣ ಕುರಿತಂತೆ ಇತ್ಯಾದಿ ವಿಷಯ ಅರ್ಥಪೂರ್ಣವಾಗಿ ವಿಚಾರ ಮಂಡಿಸುತ್ತಾರೆ.

''..... ಮೈಸೂರು ಸರಕಾರ ಹಿಡಕಲ್ ಜಲಾಶಯ ನಿರ್ಮಾಣ ಕಾರ್ಯದಲ್ಲಿ ತೊಡಗಿದ್ದು ಅದಕ್ಕೆ ಕಳೆದ ಮೂರು ವರ್ಷಗಳಿಂದ ನೀಡಿದ ಹಣ ಅತ್ಯಲ್ಪ. ಈ ವರ್ಷ ಎರಡನೇ ಹಂತದ ನಿರ್ಮಾಣ ಕಾರ್ಯಕ್ಕೆ ಒದಗಿಸಿರುವುದು ಕೇವಲ 6 ಲಕ್ಷ ರೂಪಾಯಿಗಳು. ಈ ಹಿಡಕಲ್ ಡ್ಯಾಮ್ ನಿರ್ಮಾಣವು ಮೊದಲ ಪಂಚವಾರ್ಷಿಕ ಯೋಜನೆಅಡಿಯಲ್ಲಿಯೇ ಪೂರ್ಣಗೊಳ್ಳಬೇಕಾಗಿತ್ತು. ಆದರೇ ಮೂರನೇ ಪಂಚವಾರ್ಷಿಕ ಯೋಜನೆ ಅವಧಿ ಮುಗಿದಾಗಲೂ ಇದು ಪೂರ್ಣಗೊಳ್ಳುತ್ತದೆ ಎಂಬ ಬರವಸೆ ನನಗಿಲ್ಲ.... ನಾನು ಸಂಬಂಧಪಟ್ಟ ಮಂತ್ರಿಯವರಲ್ಲಿ ವಿನಂತಿಸಿಕೊಳ್ಳುವದೇನೆಂದರೆ ಆಣೆಕಟ್ಟು ನಿರ್ಮಾಣ ಕಾರ್ಯದೊಂದಿಗೆ ಬಲದಂಡೆ ನಾಲಾ ನಿರ್ಮಾಣ ಕೆಲಸವನ್ನು ಕೂಡ ಪ್ರಾರಂಭಿಸಬೇಕು. ಇದು ಬರಗಾಲದ ದಿನಗಳಲ್ಲಿ ಬಡ ಜನರಿಗೆ ತುಂಬಾ ಅನಕೂಲವಾಗಿ ಪರಿಣಮಿಸಬಲ್ಲದು.... ಮುಖ್ಯ ಕೆಲಸಗಳು ಮುಕ್ತಾಯಗೊಳ್ಳದೇ ಚಿಕ್ಕ ಕೆಲಸಗಳನ್ನು ಪ್ರಾರಂಭಿಸುವಂತಿಲ್ಲ. ಇದು ನಿಯಮ. ಇಲ್ಲಿ ನೋಡಿದರೆ ಅತ್ತ ಮುಖ್ಯ ಕೆಲಸ (Major Work) ವಾಗಿ ಆಣೆ ಕಟ್ಟು ನಿರ್ಮಾಣವು ಪ್ರಗತಿಯಲ್ಲಿ ಇಲ್ಲ. ಇತ್ತ ನಾಲಾ ಮುಂತಾದ ಮೈನರ್ ಕೆಲಸಗಳೂ ಇಲ್ಲ. ಇಂತಹ ತ್ರಿಶಂಕು ಸ್ಥಿತಿಯಲ್ಲಿ ನಮ್ಮ ರೈತರಿದ್ದಾರೆ. ಆದ್ದರಿಂದ ನಾನು ವಿನಂತಿಸಿಕೊಳ್ಳುವದೇನೆಂದರೆ ಜಲಾನಯನ ಪ್ರದೇಶದ ಕಕ್ಷೆಯಲ್ಲಿ ಭಾಂದಾರ, ಕೆರೆ ಮತ್ತು ಟ್ಯಾಂಕು ಇವುಗಳ ನಿರ್ಮಾಣ ಕಾರ್ಯ ತಕ್ಷಣದಲ್ಲಿ ಪ್ರಾರಂಭಗೊಳ್ಳಬೇಕು. ಇದು ಬಡಜನತೆಗೆ ತುಸುಮಟ್ಟಿಗಾದರೂ ಪರಿಹಾರ ಒದಗಿಸಿಕೊಡುತ್ತದೆ. ನನ್ನ ಕ್ಷೇತ್ರದ ಬೆಣಚಿನಮರಡಿ, ಬೆಟಗೇರಿ, ಕೌಜಲಗಿಗಳಲ್ಲದೇ ಇನ್ನೂ ಹವವೆಡೆ ಇಂತಹ ನಿರ್ಮಾಣ ಕಾರ್ಯ ನಡೆಯಬೇಕೆಂದು ನಾನು ಹಲವು ಸಾರಿ ವಿನಂತಿಸಿಕೊಂಡಿದ್ದೇನೆ. ಆದರೂ ಸರ್ಕಾರ ಇದನ್ನು ಗಮನಿಸುತ್ತಿಲ್ಲ. ನಾವು ಇನ್ನೂ ಎಷ್ಟು ವರ್ಷ ಈ ಶಿಕ್ಷೆಗೆ ತಲೆಗೊಡಬೇಕು. ಇಂತಹ ವಿಳಂಬ ನೀತಿಗೆ ಎಷ್ಟು ದಿನ ಮೂಖ ಸಾಕ್ಷಿಯಾಗಬೇಕು''.

# ಬೆಟರಮೆಂಟ ಲೆವಿ ಪದ್ಧತಿ ಇರಬೇಕು ಆದರೆ ......?

ನೀರಾವರಿ ಪ್ರದೇಶದಲ್ಲಿ ನೀರು ಬಾಡಿಗೆ (ಕರ) ಮತ್ತು ಲೇವಿ ಆಕರಣೆ ಮಾಡುವಾಗ ಆ ಪ್ರದೇಶದ ರೈತರು ಎಷ್ಟರಮಟ್ಟಿಗೆ ನೀರಾವರಿ ಸೌಲಭ್ಯವನ್ನು ಪಡೆದಿದ್ದಾರೆಂದು ಗಮನಿಸಿ ಅದೂ ಪೂರ್ಣ ಪ್ರಮಾಣದ ನೀರಾವರಿಯೋ, ಪ್ರಾಸಂಗಿಕ (seasonal) ನೀರಾವರಿಯೋ ಎಂಬುದನ್ನು ಗಮನಿಸಿ ರೈತರಮೇಲೆ ಕರಭಾರ ಹಾಕಬೇಕು ಎಂಬ ಅಂಶವನ್ನು ಘಟಪ್ರಭಾ ನೀರಾವರಿ ಯೋಜನೆ ಹಿನ್ನಲೆಯಲ್ಲಿ ಸದನದಲ್ಲಿ ಎ. ಆರ್. ಪಂಚಗಾವಿಯವರು ಪ್ರಸ್ತಾಪಿಸಿದರು.

ಎಪ್ಪತರ ದಶಕಕ್ಕಿಂತ ಮೊದಲು ಹಿಡಕಲ್ ಜಲಾಶಯ ಇನ್ನೂ ಪೂರ್ಣಗೊಂಡಿರದ ಸಂದರ್ಭದಲ್ಲಿ ಎಡದಂಡೆ ಕಾಲುವೆಯಿಂದ ಇಪ್ಪತ್ತು ದಿನಗಳಿಗೊಮ್ಮೆ, ಮೂವತ್ತು ದಿನಗಳಿಗೊಮ್ಮೆ ನೀರು ಬಿಡುತ್ತಿದ್ದ ಸಂದರ್ಭದಲ್ಲಿ ಸರಕಾರದವರು ಆ ಭಾಗದ ರೈತರ ಮೇಲೆ ಪೂರ್ಣ ಪ್ರಮಾಣ ನೀರು ಕರ ಮತ್ತು ಅಭಿವೃದ್ಧಿ ಕರ (Betterment levee) ವಸೂಲು ಮಾಡುತ್ತಿದ್ದರು. ನೀರಾವರಿ ಯೋಜನೆಯ ಸದುಪಯೋಗವನ್ನು ಪಡೆಯದ ರೈತನು ಕೂಡ ಈ ಒತ್ತಾಯದ ಕರಭಾರ ಭರಿಸಬೇಕಾಗುತ್ತಿತ್ತು. ಅಂದು ಪೂರ್ಣ ಪ್ರಮಾಣದ ನೀರಾವರಿ ಯೋಜನೆಯಾಗಿದ್ದ (ಕೃಷ್ಣ ರಾಜ ಸಾಗರ) ಪ್ರದೇಶದ ರೈತರು ಸಮೃದ್ಧ ಬೆಳೆ ತೆಗೆದುಕೊಳ್ಳುತ್ತಿದ್ದರು. ಅವರಿಗೆ ವಿಧಿಸಿದಷ್ಟೆ ನೀರಿನ ಕರಭಾರವನ್ನು ಯೋಜನೆ ಪೂರ್ಣಗೊಳ್ಳದ ಮತ್ತು ಅದರ ಲಾಭವನ್ನು ಸ್ವಲ್ಪವೂ ಪಡೆಯದ ಹಿಡಕಲ್ ಜಲಾಶಯದ ಕೆಳಭಾಗದ ರೈತರ ಮೇಲೆ ಅಷ್ಟೇ ಪ್ರಮಾಣದ ಕರ ಹಾಕಿದ ಸರ್ಕಾರದ ನೀತಿಯನ್ನು ಪಂಚಗಾವಿಯವರು ಖಂಡಿಸಿ ಅವರ ಈ ಅವೈಜ್ಞಾನಿಕ ನಿಲುವು ಬದಲಾಗುವಂತೆ ಅಂದರೆ seasonal ನೀರಾವರಿ ಉಪಯೋಗಿಸುತ್ತಿರುವ ರೈತರಿಗೆ ಗಣನೀಯ ಪ್ರಮಾಣದಲ್ಲಿ ನೀರು ಬಾಡಿಗೆ ಹಾಗೂ ಅಭಿವೃದ್ಧಿ ಕರ ಯೋಜನೆಯನ್ನು ಕಡಿಮೆಗೊಳಿಸಿ ರೈತರ ಹಿತ ರಕ್ಷಣೆಗೆ ಮುಂದಾಗಬೇಕೆಂದು ಸದನದಲ್ಲಿ ಮಾಡಿಕೊಂಡ ಅವರ ಮನವಿ ರೈತ ಪಕ್ಷಪಾತಿಯಾದದ್ದು ಎಂಬುದನ್ನು ಸಾರಿ ಹೇಳುತ್ತದೆ.

## ಪ್ರವಾಹ ಮಧ್ಯ ತೇಲಿದ ಜನ-ಜೀವನ

26ನೇ ಆಗಸ್ಟ್ 1961

**"ಸಾಮಾನ್ಯವಾಗಿ ಗೋಕಾಕ ತಾಲೂಕು ಬರ ಪೀಡಿತ ಪ್ರದೇಶಗಳಲ್ಲೊಂದಾದದ್ದು. ಇಲ್ಲಿ ಮಳೆಯ ಪ್ರಮಾಣ ಬಹಳ ಕಡಿಮೆ. ಆದರೆ ಯಾವಾಗಲಾದರೊಮ್ಮೆ ವರ್ಷ ಭೈರವನ ರುದ್ರ ಕೋಪಕ್ಕೆ ಈಡಾಗುವುದು. ಅಂತಹ ಸಂದರ್ಭಗಳಲ್ಲಿ ಗೋಕಾಕ ನಗರದ ಪೂರ್ವದಿಕ್ಕಿನ ಕೆಳ ಪ್ರದೇಶದ ಘಟಪ್ರಭಾ ನದಿಯ ದಂಡೆಯ ಮೇಲಿನ ಹದಿನೈದು ಇಪ್ಪತ್ತು ಊರುಗಳು ನೆರೆ ಪ್ರವಾಹದಿಂದ ಜಲಾವೃತಗೊಳ್ಳುತ್ತವೆ. ಆಗ ಅಲ್ಲಿನ ಜನ ಜೀವನ ಅಸ್ತವ್ಯಸ್ತ! ಬದುಕು ದುರ್ಬರ! ಆ ಸಂದರ್ಭದ ತನ್ನ ಕ್ಷೇತ್ರದ ಜನತೆಯ ಅಸಹನೀಯ ಬದುಕನ್ನು, ಅವರು ಅನುಭವಿಸಿದ ನೋವನ್ನು ಸದನದಲ್ಲಿ ಮನ ಮಿಡಿಯುವಂತೆ ತೆರೆದಿಡುತ್ತಾರೆ ಪಂಚಾಗಾವಿಯವರು . ಇದು ಅವರ ಇಂಗ್ಲೀಷ ಭಾಷಣದ ಸಂಕ್ಷಿಪ್ತ ರೂಪದ ಭಾವ ಸಂಗ್ರಹ".**

"..... ಘಟಪ್ರಭಾ ದಂಡೆಯ 14-15 ಊರುಗಳ ಜನ ಭೀಕರ ನೆರೆ ಹಾವಳಿಯಿಂದ ತತ್ತರಗೊಳ್ಳಬೇಕಾದ ಪರಿಸ್ಥಿತಿ ನಿರ್ಮಾಣಗೊಂಡಿದೆ. ಅವರು ಈ ಹಿಂದಿನ 1953 ರ ಇಂತಹದ್ದೆ ನೆರೆ ಹಾವಳಿಯನ್ನು ಸಂಪೂರ್ಣ ಮರೆತು ಬಿಟ್ಟಿದ್ದಾರೇನೊ. ಆಗಲೂ ಕೂಡಾ ಹಲವು ದಿನಗಳವರೆಗೆ ಹೀಗೆಯೇ ನದಿಯ ನೀರಿನಿಂದ ಊರುಗಳೆಲ್ಲ ಸುತ್ತುವರೆಯಲ್ಪಟ್ಟು ಕೆಲವು ಗುಡಿಸಲು, ಮನೆಗಳು ಮುಳುಗಿ ಹೋಗಿ ಹಲವು ಸಾವು ನೋವು ಘಟಿಸಿದ್ದವು. ಆಗ ಈ ಹಳ್ಳಿಗರ ಪುನರ್‌ವಸತಿಗಾಗಿ ಪಟ್ಟ ಕ್ರಮ ವ್ಯರ್ಥವಾಗಿತ್ತು."

".....ಈ ಸಾರಿಯ ಪರಿಸ್ಥಿತಿ ಹಿಂದಿನ ಮೂರು ನೆರೆ ಹಾವಳಿಗಳಿಗಿಂತ ( 1908, 1914 ಮತ್ತು 1953) ಭಿನ್ನವೂ ಭೀಕರವೂ ಆಗಿತ್ತೆನ್ನಬೇಕಾಗುತ್ತದೆ. ಸಂಪೂರ್ಣ ಸಂಪರ್ಕ ಕಡೆದುಕೊಂಡ ಹಳ್ಳಿಗಳು ಘಟಪ್ರಭಾ ನದಿಯ ಪ್ರವಾಹದ ನಡುವೆ ನಿಂತುಕೊಂಡಿದ್ದವು. ಹಲವು ದನ-ಕರಗಳು ಪ್ರಾಣಗಳೆದುಕೊಂಡಿವೆ. ಸಾಮಾನ್ಯತರದ ಗುಡಿಸಲು, ಚಪ್ಪರ ಮುಂತಾದ ಮನೆಗಳು ತೇಲಿ ಹೋಗಿ ಕಾಳು-ಕಡಿ ನೀರುಪಾಲಾಗಿವೆ. ಮನೆಯ ಮೇಲ್ಭಾಗದಲ್ಲಿ ಎತ್ತರ ಪ್ರದೇಶದ ಗುಡಿಗುಂಡಾರಗಳಲ್ಲಿ ನಿಂತ ಜನ ಪಾರಾಗಿ

ಬರಲು ಒಂದೇ ಸಮನೇ ಸಹಾಯಯಾಚಿಸುವ ದೃಶ್ಯ ಮನ ಕಲಕುವಂತಹದು. ಇಂತಹ ಪರಿಸ್ಥಿತಿಯನ್ನು ನಿಭಾಯಿಸಲಿಕ್ಕೆಂದೆ ಇದ್ದ ನಾಲ್ಕು ಬೋಟುಗಳಲ್ಲಿ ಮೂರು ಹಾಳಾಗಿ ಹೋಗಿವೆ. ಒಂದು ಸುಟ್ಟು ಹೋಗಿದ್ದರೆ, ಮತ್ತೊಂದು ಪ್ರವಾಹದಲ್ಲಿ ಮುಳುಗಿ ಹೋಗಿತ್ತು, ಇನ್ನೊಂದು ಸೇತುವೆಯೊಂದಕ್ಕೆ ಡಿಕ್ಕಿ ಹೊಡೆದು ಚಿದ್ರಗೊಂಡಿತ್ತು. ಜಿಲ್ಲಾಧಿಕಾರಿಗಳ ವಿಶೇಷ ಪ್ರಯತ್ನ ಫಲವಾಗಿ ಒಂದು ಮೋಟಾರ ಲಾಂಚ ಕೊಡಮಾಡಲ್ಪಟ್ಟಿತ್ತು. ಆದರೆ ಅದು ಗಾತ್ರದಲ್ಲಿ ಚಿಕ್ಕದಾಗಿದ್ದರಿಂದ ಹೆಚ್ಚಿನ ಪ್ರಯೋಜನ ಲಭಿಸಲಿಲ್ಲ.....

......ಇಂತಹ ಸಂದರ್ಭ ಒದಗಿದಾಗೆಲ್ಲ ಹೆಚ್ಚಿನ ಹಾನಿ ಅನುಭವಿಸುವವರು ತೀರಾ ಬಡವರು, ಹರಿಜನರು ಮುಂತಾದ ಪರಿಶಿಷ್ಠ ಜಾತಿಯವರು ನನ್ನ ತಿಳುವಳಿಕೆಯ ಪ್ರಕಾರ ಅವರಿಗೆ ಪರಿಹಾರ ಧನ ನೀಡಿದಾಗಲೆಲ್ಲ ಅವರು ಇಂತಹ ಅಪಾಯಕಾರಿ ಪ್ರದೇಶದಿಂದ ದೂರ ವಸತಿ ವ್ಯವಸ್ಥೆ ಮಾಡಿಕೊಳ್ಳುತ್ತಲೇ ಇರಲಿಲ್ಲ. ಇಂತಹ ಸಂದರ್ಭದಲ್ಲಿ ನಾನು ಸರಕಾರವನ್ನು ಒತ್ತಾಯಿಸುವದೇನೆಂದರೆ ನೆರೆ ಪರಿಹಾರ ಕಾರ್ಯ ಸಮರೋಪಾದಿಯಲ್ಲಿ ನಡೆಯಬೇಕು. ನೀರಿನ ಮಧ್ಯೆ ಸಿಕ್ಕ ಜನರ ಜೀವ ಉಳಿಸಲು ಹಲವಾರು ಸ್ವಯಂಚಾಲಿತ ಯಾಂತ್ರೀಕೃತ ಬೋಟುಗಳನ್ನು ತಂದು, ಪರಿಹಾರ ಕೇಂದ್ರಗಳನ್ನು ಸ್ಥಾಪಿಸಿ ಅಲ್ಲಿ ಅವರಿಗೆ ತಾತ್ಪೂರ್ತಿಕ ಊಟಉಪಚಾರ, ಔಷದೋಪಚಾರ , ಉಡಲು ಮತ್ತು ಹೊರಲು ಬಟ್ಟೆ ಒದಗಿಸುವುದು ಇತ್ಯಾದಿ ಇತ್ಯಾದಿಯಾಗಿ ಶ್ರಮೀಸಬೇಕು. ಇಷ್ಟು ಆ ಕ್ಷಣದ ಎಚ್ಚರವೆಂಬಂತೆ ವರ್ತಿಸಿ ಮತ್ತೆ ಆ ಸಮಸ್ಯೆಯನ್ನು ಮರೆತು ಬಿಡದೆ ತಗ್ಗು ಪ್ರದೇಶದ ಊರುಗಳ ಜನತೆಗೆ ಬೇರೆಡೆ ಎತ್ತರ ಪ್ರದೇಶದಲ್ಲಿ ಪುನರ್ ನಿವೇಶನ ಕಲ್ಪಿಸಿಕೊಟ್ಟು ಅವರಿಗೆ ಮನೆ ಕಟ್ಟಿಕೊಳ್ಳಲು ಹಾಗೂ ಇನ್ನುಳಿದ ಖರ್ಚು-ವೆಚ್ಚ ಭರಿಸಲು ಸರಕಾರ ವಿಶೇಷ ಧನ ಸಹಾಯ ಮಾಡಬೇಕು. ಇದೊಂದು ಶಾಶ್ವತ ಪರಿಹಾರ ಸೂತ್ರವಾಗಬೇಕೆಂದು ವಿನಂತಿಸಿಕೊಳ್ಳುತ್ತೇನೆ.''

# ರೈತರ ಹೊಟ್ಟೆಯ ಮೇಲೆ ಹೊಡೆದು ಖಾಸಗಿ ಕಂಪನಿಯನ್ನು ಓಲೈಸದಿರಿ.

28ನೇ ಜುಲೈ 1967

ಸ್ವತಂತ್ರ ಪೂರ್ವದಲ್ಲಿ ಸ್ಥಾಪನೆಗೊಂಡ ಗೋಕಾಕ ನೂಲಿನ ಗಿರಣಿಗೆ ಸ್ವಯಂ ವಿದ್ಯುತ್ ಉತ್ಪಾದನೆಗಾಗಿ ಸರಕಾರ ನೀರು ಸರಬರಾಜು ಮಾಡುತ್ತಿತ್ತು. ಅದಕ್ಕೆ ಪ್ರತಿಯಾಗಿ ಬಾಡಿಗೆ ರೂಪದಲ್ಲಿ ಸರಕಾರದ ಭೊಕ್ಕಸಕ್ಕೆ ಅತ್ಯಂತ ಕಡಿಮೆ ಪ್ರಮಾಣದ ಹಣ ಸಂದಾಯವಾಗುತ್ತಿತ್ತು. ಗೋಕಾಕ ಫಾಲ್ಸ್ ಮೇಲ್ಬದಿಯಲ್ಲಿ ಘಟಪ್ರಭಾ ನದಿಗೆ ಧುಪ್‌ದಾಳ ಹತ್ತಿರ ತಡೆಗೋಡೆ ನಿರ್ಮಿಸಿ ಆ ಮೂಲಕ ನೂಲಿನ ಗಿರಣಿಗೆ ವಿದ್ಯುತ್ ಹುಟ್ಟಿಸಲು 'ಜಲ ವಿದ್ಯುತ್ ಸ್ಥಾವರ'ಕ್ಕೆ ನೀರು ಸರಬರಾಜು ಮಾಡುವ ಒಪ್ಪಂದ ಅವೈಜ್ಞಾನಿಕವೂ ಹಾಗೂ ರೈತರ ಹಿತಾಸಕ್ತಿಗೆ ವಿರೋಧಿಯು ಆಗಿತ್ತೆಂಬುದನ್ನು ಗಮನಿಸಿದ್ದ ಎ. ಆರ್. ಪಂಚಗಾವಿಯವರು ಈ ಕುರಿತು ಸರಕಾರದ ಗಮನ ಸೆಳೆದು ಹಲವು ಮಹತ್ವದ ವಿಷಯಗಳನ್ನು ಪ್ರಸ್ತಾಪಿಸಿದ್ದರು. ಸದನದಲ್ಲಿ ಸಚಿವರಾದ ಶ್ರೀ ವಿರೇಂದ್ರ ಪಾಟೀಲ ಅವರಿಂದ ವಿವರಣೆ ಬಯಸಿ ನಾಲ್ಕು ಮಹತ್ವದ ಪ್ರಶ್ನೆಗಳನ್ನು ಕೇಳಿದ್ದರು. ಆ ಪ್ರಶ್ನೆಗಳ ಒಟ್ಟಾರೆ ಆಶಯ ಇಂತಿತ್ತು ....ಘಟಪ್ರಭಾ ನದಿಗೆ ತಡೆಗೊಡೆ ನಿರ್ಮಿಸಿ ನದಿಯ ಕೆಳಭಾಗದ ಊರುಗಳ ಜನರಿಗೆ ಬೇಸಿಗೆಯಲ್ಲಿ ಕುಡಿಯಲು ನೀರಿಲ್ಲದಂತೆ ಮಾಡಿ ಅತ್ಯಂತ ಕಡಿಮೆ ನೀರಿನ ಬಾಡಿಗೆಯನ್ನು ನೂಲಿನ ಗಿರಣಿಯ ಕಂಪನಿಯಿಂದ ಪಡೆದು ಹಾನಿ ಅನುಭವಿಸುವ ಬದಲಾಗಿ ಶರಾವತಿ ವಿದ್ಯುತ್ ಯೋಜನೆಯಿಂದ ನೂಲಿನ ಗಿರಣಿಗೆ ವಿದ್ಯುತ್ ಒದಗಿಸುವ ವ್ಯವಸ್ಥೆ ಮಾಡಿದರೆ ರೈತರ ಹಿತರಕ್ಷಣೆ ಮಾಡಿದಂತಾಗುವದಲ್ಲದೇ ಸರ್ಕಾರದ ಬೊಕ್ಕಸಕ್ಕೂ ಸಾಕಷ್ಟು ಹಣ ಸಂದಾಯವಾಗಬಹುದೆಂಬುದನ್ನು ಎತ್ತಿ ತೋರಿಸಿದರು.

ಅಂದಿನ ಕರ್ನಾಟಕ ಸರ್ಕಾರದ ಪಬ್ಲಿಕ್ ವರ್ಕ (ಸಾರ್ವಜನಿಕ ಕಾರ್ಯ) ಸಚೀವರಾದ ಶ್ರೀ ವೀರೇಂದ್ರ ಪಾಟೀಲರು ಸರಕಾರ ಹಳೆಯ ಒಪ್ಪದಂತೆ ಗೋಕಾಕ ನೂಲಿನ ಗಿರಣಿಯವರಿಂದ ಪಡೆಯುತ್ತಿದ್ದ ನೀರು ಬಾಡಿಗೆ ದರ ಪ್ರತಿ M.Cft. ಗೆ ಮೊದಲ 58 ಕ್ಯೂಸೆಕ್ಸ ವರೆಗೆ 6 ರೂ. 60 ಪೈಸೆಯಂತೆಯೂ, 58 ಕ್ಯೂಸೆಕ್ಸ ನಂತರ ಪ್ರತಿ M.Cft. ಗೆ 6 ರೂ. 76 ಪೈಸೆಯಂತೆ ಸಂದಾಯ ವಾಗುತ್ತಿತ್ತು ಎಂದು ಹೇಳಿದಾಗ ಈ ಉತ್ತರ ಶ್ರೀ ಪಂಚಗಾವಿಯವರಿಗೆ ಸಮಾಧಾನ ತರಲಿಲ್ಲ. ಏಕೆಂದರೆ ಅಂದು ಹೊಸದಾಗಿ ಚಾಲ್ತಿಯಲ್ಲಿದ್ದ ನೀರಿನ ದರ ಪ್ರತಿ M.Cft. ಗೆ 750 ರೂ. ಆಗಿತ್ತು ಆದ್ದರಿಂದ ಬಾದರಾಯಣ ಕಾಲದ ಹಳೆಯ ಒಪ್ಪಂದದಿಂದ ಸರಕಾರದ ಬೊಕ್ಕಸಕ್ಕೆ ವಿಪರಿತ

ಹಾನಿಯಾಗುತ್ತಿದ್ದ ಅಂಶವನ್ನು ಸದನದ ಗಮನಕ್ಕೆ ತಂದು ರೈತರ ಹೊಟ್ಟೆಯ ಮೇಲೆ ಹೊಡೆದ ಶ್ರೀಮಂತ ಕಂಪನಿಯವರನ್ನು ಓಲೈಸುವ ನೀತಿಯನ್ನು ನಿರ್ಭಿಡೆಯ ಮಾತುಗಳಿಂದ ಪಂಚಗಾವಿ ಖಂಡಿಸಿದ್ದರು. ಮಾತ್ರವಲ್ಲ 6 ರೂ. 60 ಪೈಸೆ ಬಾಡಿಗೆ ಪಡೆಯುವ ಬದಲು 750 ರೂ. ದರದಂತೆ ಹೊಸ ಒಪ್ಪಂದಮಾಡಿಕೊಳ್ಳಬೇಕು. ಇಲ್ಲವೇ ಅವರಿಗೆ ನೀರು ಒದಗಿಸುವದನ್ನೇ ನಿಲ್ಲಿಸಿ ಶರಾವತಿ ವಿದ್ಯುದ್ಯೋಜನೆಯಿಂದ ವಿದ್ಯುತ್ ಸರಬರಾಜು ವ್ಯವಸ್ಥೆ ಮಾಡಬೇಕೆಂದು ಸೂಚಿಸಿದರು. ಹೀಗಾದಲ್ಲಿ ಗೋಕಾಕ ಫಾಲ್ಸ್ ಕೆಳಭಾಗದ (ಗೋಕಾಕ ಸೇರಿದಂತೆ) ಹಲವಾರು ಊರುಗಳ ಜನರ ನೀರಿನ ಭವಣೆ ನೀಗಿದಂತಾಗುತ್ತದೆ ಎಂಬ ವಾದವು ಎಂತಹ ವಾಸ್ತವಿಕಾಂಶಗಳನ್ನೊಳಗೊಂಡಿತ್ತು ಎಂಬುದನ್ನು ಸ್ಪಷ್ಟವಾಗುತ್ತದೆ.

## "ಸಹಕಾರಿ ಸಂಘ ಬೆಳೆಸಿ ರೈತರ ಹಿತ ರಕ್ಷಿಸಿ"

27ನೇ ಜುಲೈ 1967

**ಎ. ಆರ್. ಪಂಚಗಾವಿಯವರು ತಾವು ಪ್ರತಿನಿಧಿಸಿದ ಗೋಕಾಕ ತಾಲೂಕು ಹಾಗೂ ರಾಮದುರ್ಗ ತಾಲೂಕುಗಳಲ್ಲಿ ಹಲವಾರು ಸಹಕಾರಿ ಸಂಘಗಳನ್ನು, ಸಹಕಾರಿ ಬ್ಯಾಂಕುಗಳನ್ನು ಕೃಷಿ ಅಭಿವೃದ್ಧಿ ಬ್ಯಾಂಕುಗಳನ್ನು ಸ್ಥಾಪಿಸಿದ್ದಲ್ಲದೆ ರೈತ ಸಹಕಾರದೊಂದಿಗೆ ಘಟಪ್ರಭಾ ಸಕ್ಕರೆ ಕಾರ್ಖಾನೆಯನ್ನು ಗೋಕಾಕದಲ್ಲಿ ಸ್ಥಾಪಿಸಿ ಸಹಕಾರಿ ಬಂಧು ಎನಿಸಿಕೊಂಡವರು. ಅವರ ಸಹಕಾರ ಸಿದ್ಧಾಂತ.... ಬದ್ಧತೆ ಎಂತಹವಾಗಿದ್ದವು ಎಂಬುದಕ್ಕೆ ನಿದರ್ಶನಾವಾಗಿ ಅವರು ದಿನಾಂಕ : 27-07-1967 ರಂದು ಸದನದಲ್ಲಿ ಪ್ರಾಸಂಗಿಕವಾಗಿ ಇಂಗ್ಲೀಷ ಭಾಷೆಯಲ್ಲಿ ಮಂಡಿಸಿದ ವಿಚಾರಗಳಲ್ಲಿ ಕೆಲವನ್ನು ಇಲ್ಲಿ ಕನ್ನಡದಲ್ಲಿ ಹಿಡಿದಿಡುವ ಪ್ರಯತ್ನ ಮಾಡಲಾಗಿದೆ.**

"..... ಗ್ರಾಮೀಣ ಪ್ರದೇಶಗಳಲ್ಲಿ ಸಹಕಾರಿ ಸಂಘಗಳನ್ನು ಸುಭದ್ರಗೊಳಿಸಲು ಬಂಡವಾಳ ಸಂಗ್ರಹದ ಕಡೆಗೆ ಹೆಚ್ಚಿನ ಗಮನಕೊಡಬೇಕು. ಕೆಲ ಸಂದರ್ಭದಲ್ಲಿ ಸಾಲಕ್ಕೆ ತುಸು ಹೆಚ್ಚಿನ ಪ್ರಮಾಣದಲ್ಲಿ ಬಡ್ಡಿ ಪಡೆದರೂ ನಡೆದೀತು. ಉಳಿತಾಯ ಕಡಿಮೆ ಇರುವ ಹಳ್ಳಿಗರ ಆರ್ಥಿಕ ಸ್ಥಿತಿ ಸುಧಾರಿಸಲು ಸ್ಥಳೀಯ ಸಂಪನ್ಮೂಲಗಳನ್ನು ಕ್ರೂಢೀಕರಿಸುವುದರೊಂದಿಗೆ ಸರಕಾರ ವಿವಿಧ ಯೋಜನೆಯಡಿಯಲ್ಲಿ ಸಹಕಾರಿ ಸಂಘಗಗಳಿಗೆ ಸಹಾಯ ಒದಗಿಸಬೇಕು. ಸಹಕಾರಿ ಚಳುವಳಿ ಯಶಸ್ವಿಯಾಗಲು ಪ್ರಾರಂಭದಲ್ಲಿ ಗೋದಾಮುಗಳನ್ನು ನಿರ್ಮಿಸಿಕೊಡುವ ಮತ್ತು ಕಾರ್ಯದರ್ಶಿಗಳ ವೇತನ ಭರಿಸುವ ಜವಾಬ್ದಾರಿ ಹೊತ್ತುಕೊಳ್ಳಬೇಕು.

ನಗರ ಪ್ರದೇಶದಲ್ಲಿ ಜಿಲ್ಲಾ ಬ್ಯಾಂಕುಗಳು ಮತ್ತು ಅಪೆಕ್ಸ ಬ್ಯಾಂಕುಗಳು ಶ್ರೀಮಂತ ಹಾಗೂ ಮಧ್ಯಮ ವರ್ಗದವರ ಆರ್ಥಿಕ ಸ್ಥಿತಿಯನ್ನು ಸುಧಾರಿಸಲು ಹೆಚ್ಚು ಗಮನ ನೀಡುತ್ತವೆ ಹೊರತು ಗ್ರಾಮೀಣ ಪ್ರದೇಶದ ರೈತರ ಕಡೆಗೆ ಲಕ್ಷ ಕೊಡುವದಿಲ್ಲ. ರೈತರು ಸಾಲ ಪಡೆದು ದುಂದುವೆಚ್ಚ ಮಾಡುತ್ತಾರೆ ಎಂಬ ತಪ್ಪು ಗ್ರಹಿಕೆ ಉಳ್ಳವರಾಗಿರುತ್ತಾರೆ. ಅವರು ತಮ್ಮ ಜೀವನ ಮಟ್ಟ ಸುಧಾರಿಸಿಕೊಳ್ಳುವುದು ತಪ್ಪೆ? ತಮ್ಮ ಮಕ್ಕಳಿಗೆ ಉನ್ನತ, ವ್ಯವಸ್ಥಿತ ಶಿಕ್ಷಣ ಕೊಡಿಸುವುದು ತಪ್ಪೆ? ಇವನ್ನೆಲ್ಲ ಇಂದಿನ ವ್ಯವಸ್ಥೆ ಅತ್ಯಂತ ನಿರ್ಲಕ್ಷ ದೃಷ್ಟಿಯಿಂದ ನೋಡುತ್ತದೆ....

"…. ನಾವು ಇಂದು ಅಧಿಕ ಪ್ರಮಾಣದ ಒಕ್ಕಲುತನ ಸಂಸ್ಕರಣ ಸಂಸ್ಥೆಗಳನ್ನು ಅಧಿಕಗೊಳಿಸಬೇಕಾಗಿದೆ…. ಕೆಲವು ಸಹಕಾರಿ ಸಕ್ಕರೆ ಕಾರ್ಖಾನೆಗಳು ಮತ್ತು ನೂಲುವ, ನೇಯುವ ಕಾರ್ಖಾನೆಗಳು ತಾವು ಉತ್ಪಾದಿಸಿದ ವಸ್ತುಗಳ ಸಂಸ್ಕರಣ ಕೆಲಸಗಳನ್ನು

ಶ್ರೀಮಂತ ಬಂಡವಾಳದಾರರಿಗೆ ವಹಿಸುತ್ತಾರೆ. ಇದು ತಪ್ಪು. ಈ ಸಂಸ್ಕರಣಾ ಕೆಲಸವನ್ನೂ ಕೂಡಾ ಸಹಕಾರಿ ಸಂಘಗಳೇ ವಹಿಸಿಕೊಳ್ಳಬೇಕು. ಇದರಿಂದ ಸಹಕಾರಿ ಯೋಜನೆಯಲ್ಲಿ ತೊಡಗಿದ ಪ್ರತಿಯೊಬ್ಬನಿಗೂ ಪ್ರಯೋಜನ ಲಭಿಸುವುದು. ಇಂದು ರೈತರ ಬೆಳೆಯ ವಿಧಾನ ಕೂಡ ಬದಲಾಗಿದೆ. ನೀರಾವರಿ ಹತ್ತಿ, ಮುಸುಕಿನ ಜೋಳ, ಹೈಬ್ರಿಡ್ ಜೋಳ ಮತ್ತು ಹೈಬ್ರಿಡ್ ಮೆಕ್ಕೆ ಜೋಳ ಮುಂತಾದ ಆರ್ಥಿಕ ಬೆಳೆಗಳನ್ನು ಅಧಿಕ ಪ್ರಮಾಣದಲ್ಲಿ ಬೆಳೆಯುತ್ತಿದ್ದಾರೆ. ಅವುಗಳ ಸಂಸ್ಕರಣಾ ಸಂಘಗಳು ಕೂಡಾ ಅಧಿಕ ಪ್ರಮಾಣದಲ್ಲಿ ಹೆಚ್ಚಾಗಬೇಕು. ಇಂತಹ ಸಂದರ್ಭದಲ್ಲಿ ಸರಕಾರವು ಕೂಡಾ ಸಂಸ್ಕರಣಾ ಸಂಸ್ಥೆಗಳಿಗೆ ಸಹಾಯ ನೀಡಲು ಮುಂದಾಗಬೇಕು."

…..ಕೆಲ ಸಹಕಾರಿ ಸಂಘಗಳು ವಾಣಿಜ್ಯ ಮತ್ತು ಇತರ ತೆರಿಗೆಗಳಿಂದ ನಲುಗಿ ಹೋಗಿದೆ. ಇವು ಗುಡಿ ಕೈಗಾರಿಕೆಯಡಿಯಲ್ಲಿ ಬಂದಾಗ ಅವುಗಳ ಉತ್ಪನ್ನಗಳಿಗೆ ಸಹಜವಾಗಿ ವಾಣಿಜ್ಯ ಕರ ರಿಯಾಯತಿ ಇರುತ್ತದೆ. ಆದರೆ ತೆರಿಗೆ ಇಲಾಖೆಯವರು ಇಂತವುಗಳಿಗೆ ರಿಯಾಯತಿ ತೋರಿಸಲು ಸಿದ್ಧವಿಲ್ಲ. ಉದಾಹರಣೆಗಾಗಿ ಗೋಕಾಕ ನಗರದಲ್ಲಿ ಕೃತಕ ಕಟ್ಟಿಗೆಯ ಹಣ್ಣು, ಬೊಂಬೆ ತಯಾರಿಸಿ ಬಣ್ಣದ ಕೆಲಸಮಾಡಿ ಉಪಜೀವನ ನಡೆಸುತ್ತಿರುವ ಇಂತಹ ಸಹಕಾರಿ ಸಂಘಗಳುಂಟು. ಆದರೆ ಅವು ಸರಕಾರದ ತೆರಿಗೆ ಇಲಾಖೆಯವರ ಅವಕೃಪೆಗೆ ಒಳಗಾಗಿ ಕುಂಟುತ್ತಾ ನಡೆದು ಮುಚ್ಚುವ ಸ್ಥಿತಿಗೆ ಬಂದಿವೆ.

….NRS ಮತ್ತು CDP ಯಂತಹ ಯೋಜನಾ ಸಂಸ್ಥೆಗಳನ್ನು ಸ್ಥಗಿತಗೊಳಿಸಬೇಕು. ವಿನಾಕಾರಣವಾಗಿ ಸೋರಿ ಹೋಗುವ ಸರಕಾರದ ಕೊಟ್ಯಾಂತರ ಹಣವನ್ನು ತಡೆಗಟ್ಟಬೇಕು. ಕಳೆದ ಹತ್ತು ವರ್ಷಗಳಿಂದ ಈ ಯೋಜನೆಗಳನ್ನು ಗಮನಿಸುತ್ತ ಬಂದಿದ್ದೇವೆ. ಅವು ಹಳ್ಳಿಗಳಿಗೆ ಏನನ್ನೂ ನೀಡಿಲ್ಲ. ರೋಡು ಮತ್ತು ಆಸ್ಪತ್ರೆಗಳಂಥ ಪ್ರಾಥಮಿಕ ಅವಶ್ಯಕತೆಗಳನ್ನೂ ಕೂಡ ಹಳ್ಳಿಗರಿಗೆ ಒದಗಿಸಿಲ್ಲ. ಹಳ್ಳಿಗರ ಶ್ರಯೋಭಿವೃದ್ಧಿಯೇ ಸರಕಾರದ ಮುಖ್ಯ ಧೋರಣೆಯಾಗಬೇಕು.

"ಅಶ್ರುತರ್ಪಣ"

## ಕರ್ನಾಟಕ ವಿಧಾಸಭೆಯ ಶ್ರದ್ಧಾಂಜಲಿ

ಸೋಮವಾರ 23ನೇ ಅಕ್ಟೋಬರ್, 2000 ಸದನವು ವಿಧಾನ ಸಭೆಯ ಸಭಾಂಗಣದಲ್ಲಿ
ಮಧ್ಯಾಹ್ನ 2 ಗಂಟೆಗೆ ಸಮಾವೇಶಗೊಂಡಿತು.
ಅಧ್ಯಕ್ಷರಾದ ಶ್ರೀ ಎಂ. ವಿ. ವೆಂಕಟಪ್ಪ ಅವರು ಪೀಠದಲ್ಲಿ ಉಪಸ್ಥಿತರಿದ್ದರು.

### ಸಂತಾಪ ಸೂಚನೆ.

ವಿಧಾನಸಭೆಯ ಮಾಜಿ ಸದಸ್ಯರಾಗಿದ್ದ ಶ್ರೀ ಎ. ಆರ್. ಪಂಚಗಾವಿ ಅವರು 1913 ರಲ್ಲಿ ಜನಿಸಿದ್ದು ವೃತ್ತಿಯಲ್ಲಿ ನ್ಯಾಯವಾದಿಯಾಗಿದ್ದರು. ಬಾಂಬೆ ವಿಧಾನಸಭೆಯ ಸದಸ್ಯರಾಗಿ 1952 ರಿಂದ 57ರವರೆಗೆ ಸೇವೆ ಸಲ್ಲಿಸಿದ್ದ ಶ್ರೀಯುತರು 1957 ರಿಂದ 72 ರವರೆಗೆ ಗೋಕಾಕ ಕ್ಷೇತ್ರದಿಂದ ಮೈಸೂರು ವಿಧಾನಸಭೆಗೆ ಸದಸ್ಯರಾಗಿದ್ದರು. ದಿನಾಂಕ : 31--3--1962 ರಿಂದ 28--02--1967 ರವರೆಗೆ ವಿಧಾನಸಭೆಯ ಉಪಾಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದ್ದರು.

ಹಿರಿಯ ಗಾಂಧಿವಾದಿ, ಸ್ವಾತಂತ್ರ್ಯ ಹೋರಾಟಗಾರರು ಆಗಿದ್ದು ಶ್ರೀಯುತರು ಘಟಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆಯ ಸಂಸ್ಥಾಪಕರಾಗಿ, ರೆಡ್ಡಿ ಕೋ--ಆಪರೇಟಿವ್ ಬ್ಯಾಂಕ್ ಮತ್ತು ಪಿ.ಎಲ್.ಡಿ. ಬ್ಯಾಂಕಿನ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿರುತ್ತಾರೆ.

**ಶ್ರೀಯುತರು ದಿನಾಂಕ : 30-05-2000 ರಂದು ನಿಧನ ಹೊಂದಿದರು.**

**ಎಚ್. ಕೆ. ಪಾಟೀಲ್**

ಮಾಜಿ ಸಚಿವರು

ಶ್ರೀ ರಂಗಪ್ಪ ಅವರಿಗೆ,

ಕನ್ನಡ ನಾಡು ಕಂಡ ಅಪರೂಪದ ರಾಜಕಾರಣಿ, ಹಿರಿಯ ಗಾಂಧೀವಾದಿ, ಶಿಕ್ಷಣ ಪ್ರೇಮಿ ಹಾಗೂ ನನ್ನ ಅತ್ಯಂತ ಗೌರವಾನ್ವಿತ ಹಿರಿಯರಾದ ಶ್ರೀ ಅಪ್ಪಣ್ಣ ರಾಮಪ್ಪ ಪಂಚಗಾವಿಯವರ ನಿಧನ ನಾಡಿಗೆ ತುಂಬಬಾರದ ಹಾನಿಯನ್ನುಂಟು ಮಾಡಿದೆ. ಸರಳತೆ, ಸಜ್ಜನಿಕೆ ಪ್ರಾಮಾಣಿಕತೆಯ ಮೂರ್ತಿರೂಪವಾಗಿದ್ದ ತಮ್ಮ ತಂದೆಯವರು ಸಾರ್ವಜನಿಕ ಜೀವನದಲ್ಲಿರುವವರು ಹೇಗೆ ಇರಬೇಕು ಎಂಬುದಕ್ಕೆ ಒಂದು ದೃಷ್ಟಾಂತವಾಗಿ ಬಾಳಿದರು ಅವರ ಬದುಕು ತೆರೆದ ಪುಸ್ತಕ. ಅಲ್ಲಿ ಕಪ್ಪು ಚುಕ್ಕೆಗಳಿಲ್ಲ. ಎಲ್ಲವೂ ಅವರ ಬಟ್ಟೆಯಂತೆ ಸ್ವಚ್ಛ ಶುಭ್ರ. 87 ಸಂವತ್ಸರ ಕಂಡ ಅವರು ತುಂಬು ಜೀವನ ನಡೆಸಿದರು. ಅವರಿಗೆ ಭಗವಂತ ಸದ್ಗತಿ ನೀಡಲಿ ಹಾಗೂ ತಮಗೆ ಅವರ ಅಗಲುವಿಕೆ ದುಃಖ ಸೈರಿಸುವ ಶಕ್ತಿ ಕರುಣಿಸಲಿ ಎಂದು ಪ್ರಾರ್ಥಿಸುವೆ.

ವಂದನೆಗಳೊಂದಿಗೆ,

ದಿ: 12ನೇ ಜೂನ್ 2000

ಸಹಿ/-

**ಎಚ್. ಕೆ. ಪಾಟೀಲ್**

**ಕೆ. ಎಚ್. ರಂಗನಾಥ**

ಮಾಜಿ ಸಚಿವರು.

ಶ್ರೀ ರಂಗಪ್ಪ ಅಪ್ಪಣ್ಣಾ ಪಂಚಗಾವಿ ಅವರೆ,

ದಿನಾಂಕ : 30–5–2002 ರಂದು ನಿಮ್ಮ ಪೂಜ್ಯ ತಂದೆಯವರು ನಿಧನರಾದರೆಂಬ ವಿಷಯ ತಿಳಿದು ನನಗೆ ಅತೀವ ದುಃಖವಾಯಿತು.

ಮೃತರ ಆತ್ಮಕ್ಕೆ ಚಿರಶಾಂತಿ ದೊರಕಲೆಂದು ಬಯಸುತ್ತೇನೆ.

ನಿಮ್ಮ ತಂದೆಯವರ ನಿಧನದಿಂದ ಉಂಟಾದ ದುಃಖವನ್ನು ಭರಿಸುವ ಶಕ್ತಿ ನಿಮ್ಮ ಕುಟುಂಬದವರೆಲ್ಲರಿಗೂ ಬರಲಿ ಎಂದು ಬಯಸುತ್ತೇನೆ.

ವಂದನೆಗಳೊಂದಿಗೆ,

ದಿ: 12ನೇ ಜೂನ್ 2000

ಸಹಿ/–

**ಕೆ. ಎಚ್. ರಂಗನಾಥ**

# "ಜಯ್ ಜಗತ್"

ಮಾನ್ಯ ಶ್ರೀ ಪಂಚಗಾವಿ ವಕೀಲರು ನನಗೆ ಬಹಳದಿನಗಳಿಂದಲೂ ಪರಿಚಿತರು. ನಾನು ಗೋಕಾಕಕ್ಕೆ ಬಂದಾಗ ನೇಮಚಂದ ಶಹಾ ಇವರ ಅಂಗಡಿಯಲ್ಲಿ ಆಗಾಗ ಕೂಡುತ್ತಿದ್ದೇವು. ಸರ್ವೋದಯ ಸಮ್ಮೇಲಿನ ಕಾರ್ಯದಲ್ಲಿ ಕೂಡುತ್ತಿದ್ದೇವು. ಅಧಿಕಾರದಲ್ಲಿದ್ದು ಯಾವುದಕ್ಕೆ ಆಶೆ ಪಡದೇ ಜನರ ಸೇವೆ ಮಾಡಿದ ವ್ಯಕ್ತಿ. ಅಹಂಕಾರಕ ಸುಳಿವಿಲ್ಲಾ, ಇಂಥ ರಾಜಕಾರಣಿಗಳನ್ನು ಕಂಡಿಲ್ಲಾ. 87 ವಯಸ್ಸಿನವರಾಗಿದ್ದರೂ ಸದಾ ತರುಣರಂತೆ ಕಾಣಿಸುತ್ತಿದ್ದರು. ಅವರ ಅಂತರಂಗ ಬಹಿರಂಗ ಶುದ್ಧಿ ದ್ವೇಷ. ಅಸೂಯೆ ಅಹಮಗಳು ಅವರ ಸಮೀಪವೂ ಸುಳಿದಿರಲಿಲ್ಲಾ ಸರ್ವರ ಹಿತ ಚಿಂತನ ಅವರ ಮುಖದಲ್ಲಿ ಕಾಣುತ್ತಿತ್ತು. ಇಂಥವರ ಜೀವನ ಸ್ಮರತಿ ಗ್ರಂಥ ಪ್ರಕಟವಾಗುತ್ತಿರುವುದು ನನಗೆ ಬಹಳ ಸಂತೋಷವಾಗುತ್ತದೆ. ಎಷ್ಟೂ ಜನರು ಜೀವಂತ ಇದ್ದಾಗಲೇ ಸಂಗಡಿಗರಿಗೆ ಆಸೆ ಇವರದಲ್ಲ. ಇದನ್ನು ಓದಿ ಯುವ ತರುಣರಿಗೆ ಅವರ ಜೀವನ ಮಾರ್ಗದರ್ಶನವಾಗುವದೆಂದು ಆಶಿಸಿಸುತ್ತೇನೆ.

– **ನೀಲಕಂಠ ಗಣಾಚಾರಿ**

ಗ್ರಾಮಸ್ಥರಾಜ ಆಶ್ರಮ, ಉಗಲವಾಟ.

# ಸಾರ್ಥಕ ಜೀವನ

ಶ್ರೀ ಪಂಚಗಾವಿ ವಕೀಲರು ಪರಿಚಯವಾದದ್ದು 1956 ರಲ್ಲಿ ಭೂದಾನ ಪಾದಯಾತ್ರೆಯ ನಿಮಿತ್ಯ ಅವರ ಮನೆಯಲ್ಲ ವಾಸ್ತವ್ಯ ಮಾಡಿದಾಗ, ರಚನಾತ್ಮಕ ಕಾಯಕರ್ತರಿಗೆ ಅವರ ಮನೆ ಒಂದು ಆಶ್ರಮ ಸ್ಥಾನವಾಗಿತ್ತು. ಗಾಂಧೀ ಭಕ್ತರಿಗೆ ಅವರ ಮನೆ ಸದಾಕಾಲ ತೆರೆದಿರುತ್ತಿತ್ತು. ಅವರ ಧರ್ಮಪತ್ನಿ ಎಲೆಯ ಮರೆಯ ಕಾಯಿಯಂತೆ ಮನೆಯಲ್ಲಿದ್ದು ಬರುತ್ತಿದ್ದ ಅತಿಥಿಗಳನ್ನು ತುಂಬಾ ಆದರ ಮತ್ತು ವಾತ್ಸಲ್ಯದಿಂದ ಸತ್ಕರಿಸುತ್ತಿದ್ದರು. ವಕೀಲರ ಬೇಕು ಬೇಡಗಳನ್ನು ಗಮನಿಸಿ ಅವರ ಸಮಾಜ ಸೇವೆಗೆ ನೆರವಾಗುತಿದ್ದರು. ಪಂಚಗಾವಿಯವರು ಎಂದಿಗೂ ಲಕ್ಷ್ಮೀ ಪುತ್ರರಾಗಲಿಲ್ಲ ತಮಗೆ ಸಹಜ ಪ್ರಾಪ್ತ ಉತ್ಪನ್ನದಲ್ಲಿ ತೃಪ್ತಿ ಜೀವನ ನಡೆಸುತ್ತಿದ್ದರು.

ಮಹಾತ್ಮಾ ಗಾಂಧೀಜಿಯವರ ರಚನಾತ್ಮಕ ಕಾರ್ಯಗಳಲ್ಲಿ ಇವರಿಗೆ ಸಜೀವ ಶ್ರದ್ಧೆ ಸರ್ವೋದಯ ಪ್ರಚಾರ, ಪಾನ ನಿರೋಧ, ಖಾದೀ ಪ್ರಚಾರ, ವಯಸ್ಕರ ಶಿಕ್ಷಣ ಮುಂತಾದ ಜನೋಪಯೋಗಿ ಕಾರ್ಯ ಮಾಡುವುದೇ ಅವರ ಜೀವನದ ಉದ್ಧೇಶವಾಗಿತ್ತು. ಅವರು ಅಧಿಕಾರಕ್ಕಾಗಿ ಎಂದು ಆಶೆ ಪಟ್ಟವರಲ್ಲ. ಪಂಚಗಾವಿ ವಕೀಲರು ವಿಧಾನಸಭೆಯ ಉಪಾಧ್ಯಕ್ಷರಾದಾಗ ವಿರೋಧ ಪಕ್ಷದವರೂ ಕೂಡಾ ವಕೀಲರ ಬಗ್ಗೆ ತುಂಬಾ ಅಭಿಮಾನ ಗೌರವ ಹೊಂದಿದ್ದರು. ವಿಶೇಷ ಪ್ರಸಂಗಗಳಲ್ಲಿ ಅವರ ಮಾರ್ಗದರ್ಶನ ಪಡೆಯುತ್ತಿದ್ದರು. ನಿಜವಾಗಿಯೂ ಅವರು ಒಬ್ಬ ಅಜಾತಶತ್ರುವಾಗಿದ್ದರು. ಇಂದು ಎಲ್ಲರೂ ಮೌಲ್ಯಾಧಾರಿತ ರಾಜಕಾರಣದ ಬಗ್ಗೆ ಮಾತನಾತುತ್ತಿದ್ದಾರೆ. ಆದರೆ ಅದನ್ನು ಅನುಷ್ಠಾನದಲ್ಲಿ ತಂದವರಲ್ಲಿ ಪಂಚಗಾವಿ ವಕೀಲರೂ ಒಬ್ಬರು.

ಅನೇಕರು ಅನೇಕ ರೀತಿಯ ಸಂಪತ್ತನ್ನು ಪಡೆದಿದ್ದರೂ ಅವರೆಲ್ಲರೂ ಜನತೆಯ ಸಂಪತ್ತಾಗಿ ಪರಿಣಮಿಸಲಿಲ್ಲ. ಆದರೆ ಪಂಚಗಾವಿ ಅವರು ಸಮಾಜದ, ರಾಜ್ಯದ ಸಂಪತ್ತಾಗಿದ್ದರು. ತಮ್ಮ ಸಂಪತ್ತನ್ನು ಇವರು ಯಾರಿಗೂ ತೋರಿಸುವವರಲ್ಲ. ಅಭೀಮಾನಿಗಳೇ ಇವರೊಬ್ಬರು ನಮ್ಮ ದೇಶದ ಸಂಪತ್ತೆಂದು ಗುರುತಿಸಿ ಗೌರವಿಸುತ್ತಿದ್ದರು. ಇದೇ ಅವರ ಹಿರಿಮೆ. ಅವರ ಜೀವನದ ಗುಟ್ಟು. ಇಂದಿನ ಡಾಂಬಿಕ ಜೀವನದಲ್ಲಿ ಪಂಚಗಾವಿ ವಕೀಲರ ನಿರ್ಮಲ ವ್ಯಕ್ತಿತ್ವವನ್ನು ಬಣ್ಣಿಸಲು ನಮ್ಮ ಶಬ್ದಗಳು ಚಿಕ್ಕದಾಗುತ್ತವೆ. ಅವರ ಸಾರ್ಥಕ ಮತ್ತು ಕೃತಾರ್ಥ ಜೀವನ ಪಡೆದ ನಾವು ನಮ್ಮ ನಾಡು ಧನ್ಯ. ನಿಶ್ಚಯವಾಗಿ ಅವರ ಆತ್ಮ ಚಿರಶಾಂತಿಯಲ್ಲಿದೆ . ಅಂತಹ ಶಾಂತ, ಪವಿತ್ರ ಆತ್ಮಕ್ಕೆ ನಮ್ಮ ಅನಂತ ಕೋಟಿ ಪ್ರಣಾಮಗಳು.

**– ಶಂಕರ ಉತ್ತೂರ**

ಸರ್ವೋದಯ ಮುದ್ರಣಾಲಯ, ಮುಧೋಳ.

# ಅಮರರಾದ ಎ. ಆರ್. ಪಂಚಗಾವಿ

ಗೋಕಾಕ ತಾಲೂಕಿನಲ್ಲಿಯೇ ಶ್ರೀ ಎ. ಆರ್. ಪಂಚಗಾವಿಯವರ ಹೆಸರು ಅಗ್ರ ಶ್ರೇಣಿಯಲ್ಲಿ ನಿಲ್ಲುತ್ತದೆ. ಅವರು ಸನ್ಮಾನ್ಯ ಶ್ರೀ ಎಸ್. ನಿಜಲಿಂಗಪ್ಪನವರ ಸರ್ಕಾರದಲ್ಲಿ ಉಪಸಭಾಪತಿಗಳಾಗಿ ಹಾಗೂ ಜೀವನದಲ್ಲಿ ಗಾಂಧಿವಾದಿಗಳಾಗಿ ಬದುಕಿದ್ದರು. ಅವರು ಸ್ವಭಾವಿತಃ ಚಿಕಿತ್ಸಕ ಮನೋಭಾವದವರಾಗಿದ್ದರು. ಸತ್ಯ, ನಿಷ್ಠೆ, ಪ್ರಾಮಾಣಿಕ ಜೀವನವನ್ನೇ ಅವರಲ್ಲಿ ಕಾಣಬಹುದಾಗಿದೆ.

ಸಾರ್ವಜನಿಕ ಬದುಕಿನ ಆರಂಬದ ದಿನಗಳಿಂದಲೇ ಉಜ್ವಲ ರಾಷ್ಟ್ರೀಯತಾ ವಾದಿಗಳಾಗಿದ್ದರು. ಅವರಲ್ಲಿ ಮೇಧಾಶಕ್ತಿ ಇದ್ದಿತು. ಸದರೀಯವರು ಮಹಾನ ಸಮಾಜ ಸುಧಾರಕರಾಗಿದ್ದರು. ಅನ್ಯಾಯ ಹಾಗೂ ಬ್ರಷ್ಟಾಚಾರದ ವಿರುದ್ಧ ಹೋರಾಡುತ್ತಾ ಬಂದಿದ್ದರು. ಶಿಕ್ಷಣ ಕ್ಷೇತ್ರಕ್ಕೆ ಸಾಕಷ್ಟು ಶ್ರಮಿಸಿದರು ಹಾಗೂ ವಕೀಲಿ ವೃತ್ತಿಯಲ್ಲಿ ಉತ್ತಮ ಹೆಸರುವಾಸಿಗಳಾಗಿದ್ದರು.

ಸದರಿಯವರು ಹಲವಾರು ಸಂಘ–ಸಂಸ್ಥೆಗಳಲ್ಲಿ ಆದರ್ಶ, ಪ್ರಾಮಾಣಿಕ ಕೆಲಸ ಮಾಡಿದ ಶ್ರೇಷ್ಠ ವ್ಯಕ್ತಿಯಾಗಿದ್ದರು. ಸಮಾಜ ಸೇವೆಯೇ ದೇವರ ಸೇವೆಯಂದು ಬಗೆದಿದ್ದರು ಅಜ್ಞಾನ, ಅಂಧಃಕಾರ, ದಾರಿದ್ರ್ಯ, ಬಡತನ ಹೊಡೆದು ಹಾಕಬೇಕಾದರೆ, ಶಿಕ್ಷಣ ಪ್ರಸಾರವೊಂದೇ ಪ್ರಮುಖ ಅಸ್ತ್ರವೆಂದು ನಂಬಿದ್ದರು. ವಿದ್ಯಾ ಕೇಂದ್ರಗಳೇ ದೇವಾಲಯಗಳು, ವಿದ್ಯಾರ್ಥಿಗಳೇ ದೇವರುಗಳು, ಇವರ ಕಲ್ಯಾಣವನ್ನೇ ತಮ್ಮ ಕಾಯಕವನ್ನಾಗಿ ಮಾಡಿಕೊಂಡವರು.

ಶ್ರೀ ಎ. ಆರ್. ಪಂಚಗಾವಿಯವರು ದಿ. 30–5–2000 ರಂದು ನಿಧನರಾದ ದಾರುಣ ವಾರ್ತೆ ಕೇಳಿ, ಗೋಕಾಕಕಷ್ಟೆ ಅಲ್ಲ, ಜಿಲ್ಲೆಗೂ ಕತ್ತಲು ಕವಿದಂತಾಯಿತು. ಗೋಕಾಕ ಸಕ್ಕರೆ ಕಾರಖಾನೆಯ ಸ್ಫೂರ್ತಿಯ ಸೆಲೆಯಾಗಿದ್ದರು. ಸರಳವಾದ ಜೀವನ ನಡೆಸಿ, ಸೌಜನ್ಯದಿಂದ ವರ್ತಿಸಿ, ನಿಸ್ವಾರ್ಥ ಸೇವೆ ಸಲ್ಲಿಸಿ, ಎಲ್ಲರ ಪ್ರೀತಿಗೆ ಪಾತ್ರರಾಗಿ, ವಿಧಿವಿಶರಾದರೂ ಅವರು ಮಾಡಿದಂತಹ ಚಿರಸ್ಮರಣೀಯ ಕಾರ್ಯಗಳು ಸದಾ ಅವರ ನೆನಪನ್ನು ತಂದುಕೊಡುತ್ತವೆ.

– ಎಸ್. ಬಿ. ಸೊಂಡೂರ

ಘಟಪ್ರಭಾ ಸಹಕಾರಿ ಸಕ್ಕರೆ ಕಾರಖಾನೆ, ಗೋಕಾಕ.

# ಗಾಂಧಿವಾದಿ ಎ. ಆರ್. ಪಂಚಗಾಂವಿ

ಶ್ರೀ ಎ. ಆರ್. ಪಂಚಗಾವಿಯವರು ಕರ್ನಾಟಕದ ಗಾಂಧಿವಾದಿಗಳಾದ ಕೆಲವೇ ವ್ಯಕ್ತಿಗಳಲ್ಲಿ ಒಬ್ಬರು. ಇವರು ರಾಜಕೀಯದಲ್ಲಿ ಯಾವ ಪದವಿಗೂ ಆಸೆ ಪಡದವರು. ದೀನ ದಲಿತ, ಕೃಷಿ ಹಾಗೂ ಸಾಮಾನ್ಯ ಜನರ ಸೇವೆಯನ್ನು ಮಾಡಿದವರು.

ನಾನು ಇವರ ನಿಕಟ ಸಂಬಂಧ ಹೊಂದಿದವನಾಗಿದ್ದು, ಒಟ್ಟಿಗೆ ಕೆಲಸ ಮಾಡಿದ್ದೇವೆ. ಇವರು ಸಾಮಾನ್ಯ ಮತ್ತು ರೈತ ಜನರಿಗೆ ಅನುಕೂಲವಾಗಲೆಂದು ಅನೇಕ ಶಿಕ್ಷಣ ಸಂಸ್ಥೆಗಳನ್ನು, ಬ್ಯಾಂಕ್, ಹಾಸ್ಪಿಟಲ್ ಮುಂತಾದ ಸಂಘ, ಸಂಸ್ಥೆಗಳನ್ನು ಪ್ರಾರಂಭಿಸಲು ಕಾರಣಕರ್ತರಾಗಿದ್ದಲ್ಲದೇ ಅವುಗಳು ವ್ಯವಸ್ಥಿತ ರೀತಿಯಲ್ಲಿ ಸಮರ್ಪಕವಾಗಿ ನಡೆಯಲು ತಮ್ಮ ಇಳಿವಯಸ್ಸಿನಲ್ಲಿಯೂ ಮಾರ್ಗದರ್ಶನ ಮಾಡುತ್ತಿದ್ದರು. ಇವರು ಒಬ್ಬ ಆದರ್ಶ ವ್ಯಕ್ತಿಯಾಗಿದ್ದರು.

ಪಂಚಗಾವಿಯವರ ಆದರ್ಶ ಜೀವನ ಮೌಲ್ಯಗಳು ಇಂದಿನ ಜನಾಂಗಕ್ಕೆ ಮಾರ್ಗದರ್ಶನ ಮಾಡುವಲ್ಲಿ ಸಹಕಾರಿಯಾಗಲೆಂದು ಹಾರೈಸುವೆ.

– **ಬಿ. ಡಿ. ಜತ್ತಿ**

ಭಾರತದ ಮಾಜಿ ಉಪರಾಷ್ಟ್ರಪತಿಗಳು.

# ಗೋಕಾಕ ಗಾಂಧಿ ಎ. ಆರ್. ಪಂಚಗಾವಿ

ಶ್ರೀ ಅಪ್ಪಣ್ಣ ರಾಮಪ್ಪ ಪಂಚಗಾಂವಿ ಕನ್ನಡ ನಾಡು ಕಂಡ ಅತ್ಯಂತ ಅಪರೂಪದ ರಾಜಕಾರಣಿ. ಗೋಕಾಕ ಗಾಂಧಿ ಎಂದೇ ಖ್ಯಾತರಾಗಿದ್ದ ಶ್ರೀ ಎ. ಆರ್. ಪಂಚಗಾವಿ ಅವರು ಮಹಾತ್ಮರ ಜೀವನಾದರ್ಶಗಳನ್ನು ಜೀವನದಲ್ಲಿ ಅಕ್ಷರಶಃ ಅಳವಡಿಸಿಕೊಂಡಿದ್ದರು. ಸರಳತೆಯ ಸಾಕಾರ ಮೂರ್ತಿಯಾಗಿದ್ದ ಶ್ರೀ ಪಂಚಗಾಂವಿಯವರು ನಿರಾಡಂಬರ ಜೀವಿಗಳು. ಸಾರ್ವಜನಿಕ ಜೀವನದಲ್ಲಿರುವವರು ಯಾವ ರೀತಿ ಇರಬೇಕೆಂಬುದಕ್ಕೆ ಅವರು ಒಬ್ಬ ಶ್ರೇಷ್ಠ ಉದಾಹರಣೆಯಾಗಿದ್ದರೆಂದರೆ ತಪ್ಪಾಗದು.

ಬೆಳಗಾವಿ ಜಿಲ್ಲೆ ವೀರರಾಣಿ ಕಿತ್ತೂರ ಚೆನ್ನಮ್ಮ, ಸಂಗೊಳ್ಳಿ ರಾಯಣ್ಣ ಸೇರಿದಂತೆ ಅನೇಕ ಸ್ವಾತಂತ್ರ್ಯ ಸೇನಾನಿಗಳನ್ನು ನೀಡಿದೆ. ಮಹಾತ್ಮಾ ಗಾಂಧಿ ಅಧ್ಯಕ್ಷತೆವಹಿಸಿದ್ದ ಏಕೈಕ ಎ.ಐ.ಸಿ.ಸಿ. ಸಿಮ್ಮೇಳನ ನಡೆದ ಹೆಗ್ಗಳಿಕೆ ಹೊಂದಿರುವ ಬೆಳಗಾಂವ್ ಜಿಲ್ಲೆಯ ರಾಮದುರ್ಗ ತಾಲೂಕಿನ ಹಿರೇಕೊಪ್ಪದ ಶ್ರೀ ಪಂಚಗಾಂವಿ ಗೋಕಾಕದಲ್ಲಿ ಮಾಧ್ಯಮಿಕ ಶಿಕ್ಷಣ ಮುಗಿಸಿ ಧಾರವಾಡದ ಖ್ಯಾತ ಕರ್ನಾಟಕ ಕಾಲೇಜದಿಂದ ಪದವಿಧರರಾದರು. ಕೊಲ್ಲಾಪೂರದ ಕಾನೂನು ಮಹಾವಿದ್ಯಾಲಯದಿಂದ ಎಲ್. ಎಲ್. ಬಿ. ಪದವಿ ಪಡೆದ ಇವರು ವಕೀಲ ವೃತ್ತಿ ಆರಂಭಿಸಿದಾಗ ಇವರಿಗೆ 25 ರ ತಾರುಣ್ಯ. ತಮ್ಮ ಬದುಕಿನಲ್ಲಿ ಗಾಂಧಿಜಿಯವರ ಅಪಾರ ಪ್ರಭಾವ ಮೈಗೂಡಿಸಿಕೊಂಡಿದ್ದ ಶ್ರೀ ಪಂಚಗಾಂವಿ ವಕೀಲರು ದಿಕ್ಕಿಲ್ಲದ ಬಡವರ ವಕೀಲರೆಂದೇ ಖ್ಯಾತರಾದವರು.

ಸ್ವಾತಂತ್ರ್ಯದನಂತರದ ರಾಜಕೀಯದಲ್ಲಿ ಸಕ್ರೀಯ ಆಸಕ್ತಿಹೊಂದಿದ್ದ ಶ್ರೀಯುತರು 1952ರಲ್ಲಿ ಮುಂಬಯಿ ವಿಧಾನಸಭೆಗೆ ಆಯ್ಕೆಯಾದರು. 1956 ರಲ್ಲಿ ಕರ್ನಾಟಕ ಏಕೀಕರಣವಾದನಂತರ ಇವರು 1957 ಹಾಗೂ 1962 ರ ಚುನಾವಣೆಗಳಲ್ಲಿ ಮೈಸೂರು ಅಸೆಂಬ್ಲಿಗೆ ಆಯ್ಕೆಯಾದರು. ನಾಲ್ಕು ಅವಧಿಗೆ ಶಾಸಕರಾಗಿದ್ದವರು ಒಂದು ಪೂರ್ಣ ಅವಧಿಗೆ ವಿಧಾನಸಭೆಗೆ ಉಪಾಧ್ಯಕ್ಷರಾಗಿದ್ದ ಶ್ರೀಯುತರು ನಿಧನರಾದದ್ದು ಬಾಡಿಗೆ ಮನೆಯಲ್ಲಿ ಜೀವನದುದ್ದಕ್ಕೂ ಪ್ರಖರ ಪ್ರಾಮಾಣಿಕತೆ ಪಾಲಿಸಿ ಪಡೆದ ಸಮಾಧಾನ ಬಿಟ್ಟರೆ ಭೌತಿಕವಾಗಿ ಅವರು ಗಳಿಸಿದ್ದು ಶೂನ್ಯ. ಮಹಾತ್ಮರ ಹೆಸರು ಹೇಳಿ ಅವರ ತತ್ವದರ್ಶಗಳಿಗೆ ತಿಲಾಂಜಲಿ ನೀಡುವ ಜನರಿಗೂ ಶ್ರೀ ಪಂಚಗಾಂವಿಯವರಿಗೂ ಯಾವುದೇ ಸಂಬಂಧ ಇಲ್ಲ. ಇವರು ಗಾಂಧಿಜಿಯವರನ್ನು ಬಳಸಿಕೊಂಡವರಲ್ಲ ಅಳವಡಿಸಿಕೊಂಡವರು.

ಸ್ವದೇಶಿ ಆಂದೋಲನ ಪ್ರಭಾವದಲ್ಲಿ ತಮ್ಮ ವ್ಯಕ್ತಿತ್ವ ರೂಪಿಸಿಕೊಂಡಿದ್ದ ಶ್ರೀಯುತರು ನ್ಯಾಶನಲ್ ಎಜ್ಯುಕೇಶನ್ ಸೊಸೈಟಿ ಸ್ಥಾಪಿಸಿದರು. ತನ್ಮೂಲಕ ನ್ಯೂ ಇಂಗ್ಲೀಷ ಸ್ಕೂಲ ಸ್ಥಾಪಿಸಿದರು. ಹಿರೇಕೊಪ್ಪದಲ್ಲಿ ಬಿ.ಜಿ. ಹೈಸ್ಕೂಲ್, ಕಲ್ಲೊಳಿಯಲ್ಲಿ ಪಿ.ಜಿ.ನೆಹರು ಹೈಸ್ಕೂಲ ಸ್ಥಾಪಿಸಿ ಜನರನ್ನು

ಅಕ್ಷರಸ್ಥರನ್ನಾಗಿ ವಿದ್ಯಾವಂತರನ್ನಾಗಿ ಮಾಡಲು ಶ್ರಮಿಸಿದ ಶ್ರೀಯುತರು ಜನರಲ್ಲಿ ಆರ್ಥಿಕ ಚೈತನ್ಯ ತುಂಬಲು ಗೋಕಾಕದಲ್ಲಿ ಪಿ.ಎಲ್.ಡಿ. ಬ್ಯಾಂಕ್ ಸ್ಥಾಪಿಸಿದರಲ್ಲದೇ ಗೋಕಾಕ ಅರ್ಬನ್ ಬ್ಯಾಂಕಿನ ನಿರ್ದೇಶಕರಾಗಿ ಅದನ್ನು ಬೆಳೆಸಲು ಶ್ರಮೀಸಿದರು.

ರೈತರ ಮನೆಯಲ್ಲಿ ಹುಟ್ಟಿ ಬೆಳೆದ ಗ್ರಾಮೀಣ ಸಂಸ್ಕೃತಿಯನ್ನೇ ಬದುಕಿನುದ್ದಕ್ಕೂ ಅಳವಡಿಸಿಕೊಂಡು ಬಾಳಿದ ಶ್ರೀ ಪಂಚಗಾವಿ ಅವರು ರೈತ ಸಂಘದ ಮೂಲಕ ರೈತರ ಶೋಷಣೆ ತಡೆಯಲು ಶ್ರಮೀಸಿದರು.

ಸರಳತೆ, ಸಜ್ಜನಿಕೆ, ಪ್ರಾಮಾಣಿಕತೆ, ದಕ್ಷತೆ ಹಾಗೂ ಸಮರ್ಪಣ ಸೇವಾ ಭಾವ ಶ್ರೀ ಪಂಚಗಾವಿಯವರು 87 ವಸಂತ ಕಂಡರು. ತುಂಬು ಜೀವನ ನಡೆಸಿದರು. ಅವರ ಬೇಡಿಕೆಗಳೇ ಕಡಿಮೆ. ಸರಳತೆಯೇ ಪೋಷಾಕು. ಪ್ರಾಮಾಣಿಕತೆಯೇ ಉಸಿರು. ಜನಸೇವೆಯೇ ಹವ್ಯಾಸ. ಅದಕ್ಕಾಗಿ ಅವರು ಕೊನೆಗಾಲದುದ್ದಕ್ಕೂ ಜನರಿಗೆ ನೆರವಾಗುವುದರಲ್ಲಿಯೇ ಸಮಾಧಾನ ಕಂಡವರು. ಸಾವಿರಾರು ಕುಟುಂಬಗಳಿಗೆ ಇವರ ಮಾರ್ಗದರ್ಶನದಿಂದ ನೆಮ್ಮದಿಯ ಜೀವನ ಸಾಧ್ಯವಾಯಿತು.

ಶ್ರೀ ಪಂಚಗಾವಿಯವರಿಗೆ ತಮ್ಮ ಹುಟ್ಟೂರಾದ ಹಿರೇಕೊಪ್ಪ, ಚಿಕೊಪ್ಪ, ಬಾಗೋಜಿಕೊಪ್ಪ ಹಾಗೂ ಹುಲಕುಂದ ಗ್ರಾಮಗಳಿಗೆ ನೀರಾವರಿ ಒದಗಿಸಬೇಕೆಂಬ ಆಶಯವಿದ್ದಿತ್ತು. ಅವರ ಕನಸು ಸಾಕಾರಗೊಳ್ಳುವ ಕಾಲ ಬೇಗ ಬರಲಿ ಎಂದು ಹಾರೈಸುವೆ.

ವಂದನೆಗಳೊಂದಿಗೆ,

**– ಎಚ್. ಕೆ. ಪಾಟೀಲ**
ಕಾನೂನು ಸಚಿವರು,
ಬೆಂಗಳೂರು.

# ಅಪರೂಪದ ವ್ಯಕ್ತಿ ಎ. ಆರ್. ಪಂಚಗಾವಿ

ರಾಜ್ಯ ವಿಧಾನ ಸಭೆಯ ಉಪಾಧ್ಯಕ್ಷರಾಗಿದ್ದ ದಿವಂಗತ ಪಂಚಗಾವಿ ಅವರು ಶಾಸನ ಸಭೆ ಕಂಡ ಒಬ್ಬ ಅಪರೂಪದ ವ್ಯಕ್ತಿ. ಅಡಿಯಿಂದ ಮುಡಿವರೆಗೆ ಅಪ್ಪಟ ಗಾಂಧಿ ಅಂತರಂಗ ಬಹಿರಂಗ ಗಾಂಧಿ ನಡೆ-ನುಡಿ ಗಾಂಧಿ. ಅವರ ಮತಕ್ಷೇತ್ರ ಗೋಕಾಕ ಅಲ್ಲಿಯ ಜನ ಇವರನ್ನು ಗುರುತಿಸಿದ್ದು 'ಗೋಕಾಕ ಗಾಂಧಿ' ಎಂದು ಇಸ್ತ್ರಿ ಕಾಣದ ಶುಭ್ರ ಖಾದಿ ಭಟ್ಟೆಧರಿಸಿ ಸರಳತೆಯಲ್ಲೇ ಬದುಕಿದ ಶ್ರೀ ಪಂಚಗಾವಿಯವರನ್ನು ಇನ್ನೊಬ್ಬರಿಗೆ ಹೋಲಿಸಲಿಕ್ಕಾಗದ್ದು.

ರೈತರ ಬಗ್ಗೆ ಬಡವರ ಬಗ್ಗೆ ಅಪಾರ ಕಳಕಳಿ ಹೊಂದಿದ್ದು ಶ್ರೀ ಪಂಚಗಾಂವಿಯವರು ಕೃಷಿ ಉತ್ಪನ್ನ ಸಂಸ್ಕರಣ ಆಧಾರಿತ ಕಾರ್ಖಾನೆಗಳನ್ನು ಬೆಳಸದಬೇಕೆಂದು ಘಟಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆಯ ಸಂಸ್ಥಾಪಕರಾದರು. ಗೋಕಾಕ ಅರ್ಬನ್ ಬ್ಯಾಂಕ್, ಗೋಕಾಕ ರಡ್ಡಿ ಬ್ಯಾಂಕ, ಗೋಕಾಕ ಪಿ.ಎಲ್.ಡಿ. ಬ್ಯಾಂಕುಗಳನ್ನು ಕಟ್ಟಿ ಬಡವರಿಗೆ ನೆರವಾದರು. ವಿದ್ಯೆ ವಿನಯದಿಂದ ಪ್ರಶಂಸೆಗೆ ಪಾತ್ರವಾಗುತ್ತದೆ. ಅದಕ್ಕೆ ಶ್ರೇಷ್ಠ ಸಾಕ್ಷಿ ಶ್ರೀ ಪಂಚಗಾವಿಯಾಗಿದ್ದರು. ಸರಳತೆಗೆ, ಸಜ್ಜನಿಕೆಗೆ ಹಾಗೂ ಎಲ್ಲಕ್ಕೂ ಮಿಗಿಲಾಗಿ ಪ್ರಖರ ಪ್ರಾಮಾಣಿಕತೆಗೆ ಅವರು ಪರ್ಯಾಯನಾಮದಾಗಿದ್ದರು. ಇವರ ಬದುಕು ಯುವಜನಾಂಗಕ್ಕೆ ಸತ್ಪ್ರೇರಣೆ ನೀಡುವಂತಹುದಾಗಿದೆ.

**– ಡಿ. ಬಿ. ಚಂದ್ರೇಗೌಡ**

ಮಾಜಿ ಸಚಿವರು

# ಎ. ಆರ್. ಪಂಚಗಾವಿ

ಶ್ರೀ ಅಪ್ಪಣ್ಣ ರಾಮಪ್ಪ ಪಂಚಗಾಂವಿ ಇವರು 1952–1972 ರ ವರೆಗೆ ಬೆಳಗಾವಿ ಜಿಲ್ಲೆಯ ಅರಭಾವಿ ಕ್ಷೇತ್ರವನ್ನು ಪ್ರತಿನಿಧಿಸಿ ಕ್ಷೇತ್ರದ ಹಲವಾರು ಅಗು ಹೋಗುಗಳಿಗೆ ಕಾರಣ ಕರ್ತರಾಗಿರುತ್ತಾರೆ. ವಿಧಾನ ಸಭೆಯ ಉಪಸಭಾಪತಿಗಳಾಗಿ ಕರ್ತವ್ಯ ನಿರ್ವಹಿಸಿರುತ್ತಾರೆ. ಶ್ರೀ ಎ. ಆರ್. ಪಂಚಗಾವಿಯವರು ಮೃದು ಸ್ವಭಾವದವರಾಗಿದ್ದು ಸ್ವಚ್ಛ ರಾಜಕೀಯ ಹಾಗೂ ಸಾಮಾಜಿಕ ಜೀವನವನ್ನು ನಡೆಸಿದವರಾಗಿರುತ್ತಾರೆ.

ಬೆಳಗಾವಿ ಭಾಗದ ಗ್ರಾಮಾಂತರ ಪ್ರದೇಶದ ಕೃಷಿ ಕ್ಷೇತ್ರದ ಅಭಿವೃದ್ಧಿಗಾಗಿ ಅವಿತರವಾಗಿ ದುಡಿದಿದ್ದರು. ಅವರ ಕಾಲದಲ್ಲಿ ಹಮ್ಮಿಕೊಂಡಿದ್ದ ಹಲವಾರು ನೀರಾವರಿ ಕಾರ್ಯಕ್ರಮಗಳು ಈಗ ಆ ಭಾಗದ ಜನರಿಗೆ ಪ್ರತಿಫಲ ಕೊಡುತ್ತಿವೆ.

ಶ್ರೀಯುತರು ಬಡವಬಲ್ಲಿದರು ಮತ್ತು ದೀನ ದಲಿತರ ಹಿತ ಚಿಂತಕರಾಗಿದ್ದರು, ಪ್ರಾಮಾಣಿಕತೆ ಮತ್ತು ಕಠಿಣ ಪರಿಶ್ರಮಗಳಿಂದ ಜೀವನವನ್ನು ಸಾಕಾರಗೊಳಿಸಿದವರಗಿತ್ತಾರೆ.

ವಂದನೆಗಳೊಂದಿಗೆ.

– ವಿ. ಎಸ್. ಕೌಜಲಗಿ

ಮಾಜಿ ಸಚಿವರು,

# ಅಪರೂಪದ ರಾಜಕಾರಣಿ ಎ. ಆರ್. ಪಂಚಗಾವಿ

ಕನ್ನಡ ನಾಡು ಕಂಡ ಅಪರೂಪದ ರಾಜಕಾರಣಿ, ಹಿರಿಯ ಗಾಂಧಿವಾದಿ. ಶಿಕ್ಷಣ ಪ್ರೇಮಿ ಸಹಕಾರಿ ಪ್ರೇಮಿ ಶ್ರೀ ಎ. ಆರ್. ಪಂಚಗಾವಿ ಇವರು ಗೋಕಾಕದ ಅರಭಾಂವಿ ಮತಕ್ಷೇತ್ರವನ್ನು 1952 ರಿಂದ 1972 ರ ವರೆಗೆ ಪ್ರತಿನಿಧಿಸದ್ದು, 1952 ರಿಂದ 1972ರ ವರೆಗೆ ಶಾಸಕರಾಗಿ, ಹಾಗೂ ಕರ್ನಾಟಕ ಸರ್ಕಾರದ ವಿಧಾನ ಸಭೆಯ ಉಪಸಭಾಪತಿಗಳಾಗಿ ಗೋಕಾಕ ಹಾಗೂ ಕರ್ನಾಟಕದಲ್ಲಿ ಅವರು ಮಾಡಿದ ಶೈಕ್ಷಣಿಕ ರಂಗ, ಸಹಕಾರಿ ರಂಗ ಹಾಗೂ ಸಾಮಾಜಿಕ ರಂಗಗಳಲ್ಲಿಯ ಕೆಲಸಗಳು ಅವಿಸ್ಮರಣೀಯ. ಅವರು ಕಟ್ಟಿದ ಸಂಸ್ಥೆಗಳು ಅಜರಾಮರವಾಗಿ ಬೆಳೆದು ನಿಂತಿವೆ. ಆ ಸಂಸ್ಥೆಗಳನ್ನು ಈಗಲೂ ನೋಡಿದರೆ ಅವರ ನೆನಪು ಸದಾ ಹಸಿರಾಗಿ, ಗೋಕಾವಿ ನಾಡಿನಲ್ಲಿ ಎಲ್ಲರ ಮನದಾಳದಲ್ಲಿ ನಿಂತಿದೆ.

ಅವರ ಸರಳ ಜೀವನ, ಸಾತ್ವಿಕತೆ, ರಾಜಕೀಯ ನಿಷ್ಠುರತೆ, ಮೌಲ್ಯಾಧಾರಿತ ರಾಜಕೀಯ ಹಾಗೂ ನೈತಿಕತೆ, ಈಗಿನ ಜನಾಂಗಕ್ಕೆ ಮಾರ್ಗದರ್ಶನವಾಗಿದೆ. ಅವರ ನೀತಿ ನಡತೆ ಮಾಡಿದ ಕೆಲಸವು ಯುವ ಪೀಳಿಗೆಗೆ ದಾರಿದೀಪವಾಗಲೆಂದು ಆಶಿಸುತ್ತೇನೆ.

ವಂದನೆಗಳು.

**– ಸತೀಶ ಜಾರಕಿಹೊಳಿ**
ವಿಧಾನ ಪರಿಷತ್ ಸದಸ್ಯರು
ಗೋಕಾಕ.

# ಪ್ರಾಮಾಣಿಕ ರಾಜಕಾರಣಿ ಎ. ಆರ್. ಪಂಚಗಾವಿ

ಶ್ರೀ ಎ. ಆರ್. ಪಂಚಗಾವಿ ಇವರು ಒಬ್ಬ ಹಿರಿಯ ಪ್ರಾಮಾಣಿಕ ರಾಜಕಾರಣಿ ಎಂದು ಜನಮನ್ನಣೆ ಪಡೆದ ಧಿಮಂತರು. ಹಿಂದಿನ ಮುಂಬಯಿ ರಾಜ್ಯದ ಹಾಗೂ ಕರ್ನಾಟಕ ರಾಜ್ಯದ ವಿಧಾನಸಭಾ ಸದಸ್ಯರಾಗಿ, ಕರ್ನಾಟಕ ವಿಧಾನ ಸಭೆಯ ಉಪಾಧ್ಯಕ್ಷರಾಗಿ, ಸೇವೆ ಸಲ್ಲಿಸಿ ಜನರ ಪ್ರೀತ್ಯಾದರಕ್ಕೆ ಪಾತ್ರರಾಗಿದ್ದವರು.

ಇವರ ಅಧಿಕಾರವಧಿಯಲ್ಲಿ ಸಲ್ಲಿಸಿದ ಸೇವೆಯನ್ನು ಕನ್ನಡ ನಾಡಿನ ಜನತೆ ಎಂದಿಗೂ ಮರೆಯಲಾರದು. ನಾಡಿಗಾಗಿ, ನಾಡಿನ ಜನತೆಗಾಗಿ, ಜನರ ಕಲ್ಯಾಣಕ್ಕಾಗಿ ತಮಗೆ ದೊರೆತ ವಿಧಾನಸಭೆಯ ಉಪಾಧ್ಯಕ್ಷ ಪದವಿಯನ್ನು ಸಾರ್ಥಕಗೊಳಿಸಿ, ಜನಕಲ್ಯಾಣ ಮಾಡಿದ ಇವರ ನೆನಪು ಎಂದೆಂದಿಗೂ ಚಿರಸ್ಮರಣಿಯ.

ಇವರು ಒಬ್ಬ ನಿಷ್ಠಾವಂತ ನ್ಯಾಯವಾದಿಗಳಾಗಿ, ಬಡಜನತೆಗೆ ನ್ಯಾಯ ಒದಗಿಸಿ ಕೊಟ್ಟವರು. ಶಿಕ್ಷಣ–ಪ್ರೇಮಿಗಳಾಗಿ ಶಿಕ್ಷಣ ಸಂಸ್ಥೆಗಳನ್ನು ಪ್ರಾರಂಭಿಸಿದವರು. ಸಹಕಾರಿ ರಂಗದ ಧುರೀಣರಾಗಿ, ರೈತ ಸಂಘದ ಹೋರಾಟದಲ್ಲಿ ಅಗ್ರಗಣ್ಯರಾಗಿ ಪಾತ್ರವಹಿಸಿರುವ ಇವರು ಪರಿಶುದ್ಧ ಚಾರಿತ್ರ್ಯವನ್ನು ಹೊಂದಿದ ನಿಸ್ವಾರ್ಥ, ಜನಾನುರಾಗಿಯಾಗಿದ್ದರು.

ವಂದನೆಗಳೊಂದಿಗೆ,

**– ಶಿವಾನಂದ ಎಚ್. ಕೌಜಲಗಿ**
ಮಾಜಿ ಲೋಕಸಭಾ ಸದಸ್ಯರು,
ಬೈಲಹೊಂಗಲ.

# ಸಾರ್ಥಕ ಬದುಕಿನ ಎ. ಆರ್. ಪಂಚಗಾವಿ

ಶ್ರೀ ಅಪ್ಪಣ್ಣ ರಾಮಪ್ಪ ಪಂಚಗಾವಿ, ಗೋಕಾಕ ಅವರ ಸಂಕ್ಷಿಪ್ತ ಜೀವನ ಕ್ರಮ ಬಹು ಹೋರಾಟದ್ದು ಮತ್ತು ಜಟೀಲವಾದದ್ದು. ವಿಶಾಲವಾದ ಆಕಾಶವೆಂಬ ಬಯಲು ದೃಶ್ಯ ಜಗತ್ತಿಗೆ ಯಾವ ಅಡಚಣೆ ಮಾಡದೆ ಸ್ಥಳವನ್ನು ಬಿಟ್ಟಂತೆ ಶ್ರೀ ಪಂಚಗಾವಿಯವರು ತಮ್ಮ ಜೀವನದಲ್ಲಿ ಕಾಯಕವೇ ಕೈಲಾಸವೆಂದನ್ನು ಸರಿಯಾಗಿ ನಡೆಯಿಸಿದವರು. ಅವರ ಮುಖ್ಯ ವೃತ್ತಿ ಧನ ಸಂಪಾದನೆಯಿದಲ್ಲ. ತಮಗೆ ದೊರತಿದ್ದರಲ್ಲಿ ಸಮಾಜಕ್ಕೆ ಅನುಕೂಲವಾಗುವ ಕಾರ್ಯಗಳನ್ನು ಮಾಡುತ್ತ ತಮ್ಮ ಜೀವನವನ್ನು ನಡೆಸಿದರು.

ಇಂಥ ನಿಷ್ಕಪಟ ವ್ಯಕ್ತಿ ರಾಜಕೀಯದಲ್ಲಿಯೂ ಪ್ರಾಮಾಣಿಕವಾಗಿ ಜೀವನ ರಥವನ್ನು ಹರಿದಾಡಿಸಿದರು.

ಅವರ ಶ್ರೀಮತಿ ಅವರು ಅಕಾಲದಲ್ಲಿ ವೈಕುಂಠವಾಸಿಗಳಾದರು ಶ್ರೀ ಪಂಚಗಾವಿಯವರಿಗೆ ಸನ್ಯಾಸ ಪ್ರಾಪ್ತವಾಯಿತು. ಸಮಾಜಸೇವಿಯಾದ ಇವರು ಸರ್ವೋದಯ ಕಾರ್ಯಕರ್ತರು ಅಹುದು. ಇವರು ತಮ್ಮ ಸಂಗಡಿಗರರಿಗೆ ಸಾಧ್ಯವಾದ ಎಲ್ಲ ಸಹಾಯ ಮಾಡುತ್ತಲೇ ಬಂದರು ಎಂದೂ ಬೇಸರಿಸಲಿಲ್ಲ.

ಒಂದೆರಡು ದಿವಸ ಜ್ವರ ಬಂದು ವೈಕುಂಠವಾಸಿಗಳಾಗಿ ಪರಾಮಾತ್ಮನನ್ನು ಸೇರಿದರು. ಮೃತರ ಆತ್ಮಕ್ಕೆ ಶಾಂತಿಯಾಗಲಿ ಎಂದು ಪರಮಾತ್ಮನನ್ನು ಪ್ರಾರ್ಥಿಸುತ್ತೇನೆ.

ವಂದನೆಗಳೊಂದಿಗೆ,

**– ಕೆ. ಪಿ. ನಾಡಗೌಡ**

ಮಾಜಿ ಶಾಸಕರು, ಮುಧೋಳ.

# ಅಪ್ಪಣ್ಣ ರಾಮಪ್ಪ ಪಂಚಗಾವಿ

ಶ್ರೀ ಅಪ್ಪಣ್ಣ ರಾಮಪ್ಪ ಪಂಚಗಾವಿ ಇವರು ಗೋಕಾಕ ತಾಲೂಕಿನ ಹಿರಿಯ ರಾಜಕಾರಣಿ, ಖ್ಯಾತ ನ್ಯಾಯವಾದಿ, ಸಹಕಾರಿ ಬಂಧು, ಶಿಕ್ಷಣ ಪ್ರೇಮಿ ಹಾಗೂ ರೈತರಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡವರು. ಸಹಕಾರಿ ರಂಗದ ಭೀಷ್ಮರಾಗಿ, ಶಿಕ್ಷಣ ಸಂಸ್ಥೆಗಳ ಸಂಸ್ಥಾಪಕರಾಗಿ, ರಾಜಕಾರಣದಲ್ಲಿ ಹಿರಿಯಣ್ಣನಾಗಿದ್ದು ನಾಡು ನುಡಿಗಳ ಅನನ್ಯಸೇವೆ ಮಾಡುತ್ತ ಸರಳ ಸಜ್ಜನಿಕೆಯೊಂದಿಗೆ ತಾಲೂಕಿನ ಜನತೆಯೊಂದಿಗೆ ಬೆರೆತು ಜನರ ನೋವು ನಲಿವುಗಳಿಗೆ ಸ್ಪಂದಿಸುತ್ತ ಬಾಳಿದ ಅವರ ಜೀವನ ಶೈಲಿಯು ಇನ್ನುಳಿದವರಿಗೆ ಮಾರ್ಗದರ್ಶಕವಾಗಿದೆ.

ಸದರೀಯವರು ಗೋಕಾಕ ತಾಲೂಕಿನ ಕಬ್ಬು ಬೆಳೆಗಾರರ ಮತ್ತು ಆರ್ಥಿಕ ಅಭಿವೃದ್ಧಿ ಕುರಿತು ಚಿಂತನ ಮಾಡಿ ತಾಲೂಕಿನಲ್ಲಿ ಒಂದು ಸಕ್ಕರೆ ಕಾರಖಾನೆಯಯನ್ನು ಸ್ಥಾಪಿಸಿದರೆ ಅವರ ಸರ್ವತೋಮುಖ ಅಭಿವೃದ್ಧಿ ಸಾಧ್ಯವೆಂದು ಮನಗಂಡು ಸನ್ 1970 ರಲ್ಲಿ ತಾಲೂಕಿನ ಸಮಸ್ತ ರೈತರ ಸಹಕಾರದೊಂದಿಗೆ "ಘಟಪ್ರಭಾ ಸಹಕಾರಿ ಸಕ್ಕರೆ ಕಾರಖಾನೆ" ಯನ್ನು ಸ್ಥಾಪನೆ ಮಾಡಿದರು. ಅವರು ಅದರ ಮುಖ್ಯ ಪ್ರವರ್ತಕರಾಗಿ ಹಗಲಿರುಳು ಶ್ರಮಿಸಿ, ಶೇರು ಸಂಗ್ರಹಣೆ ಮಾಡಿ ಅದರ ಅಭಿವೃದ್ಧಿಗೆ ಕಾರಣೀಭೂತರಾದರು. ಅವರ ಅಂದಿನ ಪರಿಶ್ರಮದ ಫಲವಾಗಿ ಈ ದಿನ ಘಟಪ್ರಭಾ ಸಹಕಾರಿ ಸಕ್ಕರೆ ಕಾರಖಾನೆಯು ತಾಲೂಕಿನ ಕಬ್ಬು ಬೆಳೆಗಾರರಿಗೆ ಮತ್ತು ಕಾರ್ಮಿಕರಿಗೆ ಕಲ್ಪವೃಕ್ಷವಾಗಿದೆ ಹಾಗೂ ರಾಜ್ಯದ ಅತ್ಯುತ್ತಮ ಸಹಕಾರಿ ಸಕ್ಕರೆ ಕಾರಖಾನೆಗಳಲ್ಲಿ ಒಂದಾಗಿ ವಿಜೃಂಭಿಸುತ್ತಿದೆ.

ವಂದನೆಗಳೊಂದಿಗೆ,

**– ಟಿ. ಎಚ್. ಕರಿಯಪ್ಪ**

ಮಾಜಿ ವ್ಯವಸ್ಥಾಪಕ ನಿರ್ದೇಶಕರು

ಘಟಪ್ರಭಾ ಸಹಕಾರಿ ಸಕ್ಕರೆ ಕಾರಖಾನೆ ನಿಯಮಿತ, ಗೋಕಾಕ.

# ಎ. ಆರ್. ಪಂಚಗಾವಿ : ಬದುಕು ನಾ ಕಂಡಂತೆ

ಶ್ರೀ ಎ. ಆರ್. ಪಂಚಗಾವಿಯಂಥ ವ್ಯಕ್ತಿಗಳು ಈ ಲೋಕದಲ್ಲಿ ಬಾಳಿ ಹೋಗಿದ್ದರಿಂದ ಮಾನವತೆ ಇನ್ನೂ ಅಸ್ತಿತ್ವದಲ್ಲಿದೆ ಎಂದು ನಂಬಬೇಕಾಗುತ್ತದೆ.

ದೇವರ ಸೃಷ್ಟಿಯಾದ ಎಲ್ಲರೂ ಮಗುವಾಗಿದ್ದಾಗ ಒಳ್ಳೆಯವರೇ ಆಗಿರುತ್ತಾರೆಂಬುದು ಸುಳ್ಳಲ್ಲ. ಆದರೆ ಅವರು ತಮ್ಮ ಗುರಿ ಸಾಧನೆಗಾಗಿ ನಿಯತ್ತಿನಿಂದಿರದೇ ಬೇಗ ವಿಚಲಿತರಾಗುತ್ತಾರೆ. ತಮ್ಮ ವೃತ್ತಿ–ಪ್ರವೃತ್ತಿಯಲ್ಲಿ ಎದುರಾಗುವ ಸಾಂಪತ್ತಿಕ, ಭೌತಿಕ ಲಾಲನೆ ಮತ್ತು ಸ್ಥಾನಮಾನ, ಏಳ್ಗೆ, ಅಧಿಕಾರ ಮುಂತಾದ ವ್ಯಾಮೋಹಗಳಿಂದ ಮೂಲ ಮಾನವೀಯ ಉದ್ದೇಶಗಳನ್ನರಿಯರು. ಅಂಥವರಿಗೆ 'ನಾನು ಮತ್ತು ನನ್ನದು ಎನ್ನುವುದೇ ಮುಖ್ಯವಾಗುತ್ತದೆ. ಆದರೆ ಶ್ರೀ ಎ. ಆರ್. ಪಂಚಗಾವಿ ಸದ್ಗುಣಗಳ ದಾರಿ ಹಿಡಿದು ಹೋದವರು. ಸಾದಾ ಜೀವನ ಸಾಗಿಸಿದವರು. ಅಧಿಕಾರ ಸ್ಥಾನ–ಮಾನಗಳಿಗಳಿಗಾಗಿ ಅವರೆಂದೂ ಆಸೆ ಪಟ್ಟವರಲ್ಲ. ಎಲ್ಲ ಗುಣದಾನ ಹಾಗೂ ಸ್ಥಾನ ಮಾನಗಳು ಅವರನ್ನು ಹುಡುಕಿಕೊಂಡು ಬಂದವು. ಅಪಾರ ಪ್ರತಿಭೆವುಳ್ಳ ಮೇರು ಸದೃಶ್ಯ ವ್ಯಕ್ತಿಯಾಗಿದ್ದ ಅವರು ಎಂಥ ಬಲಾಢ್ಯ ಎದುರಾಳಿಯನ್ನಾದರೂ ಸೋಲಿಸಬಲ್ಲರೆಂಬ ಕಾರಣಕ್ಕಾಗಿ ಜನರು ಅವರನ್ನು 1952 ರಲ್ಲಿ ಶಾಸಕರನ್ನಾಗಿ ಆಯ್ಕೆ ಮಾಡಿದರು. ಎಲ್ಲಕ್ಕೂ ಮಿಗಿಲಾಗಿ ಅವರು ಸ್ವಷ್ಟ ವಿಚಾರವಾದಿ ಹಾಗೂ ಸಾಮಾಜಿಕ ಪಾರದರ್ಶಕತೆವುಳ್ಳ ಗಾಂಧೀವಾದಿಯಗಿದ್ದರಿಂದ ಅಂದಿನ ರಾಷ್ಟ್ರೀಯ ಕಾಂಗ್ರೇಸ್ ಪಕ್ಷದ ಧ್ಯೇಯೋದ್ಧೇಶಗಳಿಗೆ ಅರ್ಹವಾದ ವ್ಯಕ್ತಿಯಾಗಿದ್ದರು. ಅಂತೆಯೇ ಅವರು ಪಕ್ಷದ ಕರೆಗೆ ಓಗೊಟ್ಟರು. ನಿರೀಕ್ಷೆಯಂತೆ ಅವರು ಭಾರೀ ಮತಗಳ ಅಂತರದಿಂದ ಆಯ್ಕೆಯಾದರು. ಹೋಗಿ ಮತಯಾಚಿಸದಿದ್ದರೂ ಎಲ್ಲ ಜಾತಿ ಪಂಗಡಗಳ ಸ್ತ್ರೀ ಪುರುಷರು ಅವರನ್ನು ಬೆಂಬಲಿಸಿದರು. ಆ ಸಂದರ್ಭದಲ್ಲಿ ಅವರ ಚುನಾವಣೆ ಖರ್ಚುಗಳ ಲೆಕ್ಕ–ಪತ್ರ ಬರೆಯುವ ಕಾರ್ಯಕರ್ತನಾಗಿ ನಾನು ಕೆಲಸ ಮಾಡಿದೆ. ಆಗ ನಾನು ಎಸ್.ಎಸ್.ಎಲ್.ಸಿ. ಓದುತ್ತಿದ್ದ ವಿದ್ಯಾರ್ಥಿಯಾಗಿದ್ದೆ. ಅವರು ಇಪ್ಪತ್ತು ವರ್ಷಗಳಷ್ಟು ಕಾಲ ಅವರು ಶಾಸಕರಾಗಿದ್ದರು. ಅಲ್ಲದೆ ಹಲವಾರು ರಾಜಕೀಯ ಸಾಮಾಜಿಕ ಹಾಗೂ ಸ್ವತಂತ್ರ ಸಂಸ್ಥೆಗಳ ಚೇರಮನ್ ಹಾಗೂ ಸದಸ್ಯರಾಗಿದ್ದರು. ಅವರು ತಮ್ಮ ಅಂತಃಪ್ರಜ್ಞೆಯ ಸಾಕ್ಷಿಗನುಗುಣವಾಗಿ ಯಾವುದೇ ರೀತಿಯ ತಾರತಮ್ಯವಿಲ್ಲದೆ ಕಾರ್ಯನಿರ್ವಹಿಸುತ್ತಿದ್ದರು. ತಮ್ಮ ಸಂಬಂಧಿಕರ ಅಥವಾ ಪರಿಚಯಸ್ಥರ ಅನುಕೂಲಕ್ಕಾಗಿ ಅವರೆಂದೂ ಕಾನೂನು ಬಾಹಿರವಾಗಿ ವ್ಯವಹಿರಿಸುತ್ತಿರಲಿಲ್ಲ. ತುಂಬ ತಿಳಿಯಾದ ಮನಸ್ಸಿನಿಂದ ಅವರು ಎಲ್ಲ ಕೆಲಸ ಮಾಡುತ್ತಿದ್ದರು. ತಮ್ಮ ಅತಿ ಪ್ರಾಮಾಣಿಕತೆ ಹಾಗೂ ನಿಷ್ಠೆಯಿಂದಾಗಿ ಅವರು ಬಹಳಷ್ಟು ತೊಂದರೆ ಅನುಭವಿಸಿದ್ದು ಉಂಟು. ತಾವು ನಂಬಿದ ತತ್ವಗಳಿಗೆ, ವಿಚಾರಗಳಿಗೆ, ಕ್ರಿಯೆಗೆ ಬದ್ಧರಾದ ವ್ಯಕ್ತಿತ್ವ ಅವರದಾಗಿತ್ತು......

.....ಬದುಕಿನಲ್ಲಿ ಎಲ್ಲವನ್ನು ಅವರು ನಗುನಗುತ್ತಲೇ ಸ್ವೀಕರಿಸಿದರು. ತಮ್ಮೊಳಗಿನ ನೋವನ್ನು ಅವರು ಯಾರೆದಿರೂ ತೋರ್ಪಡಿಸುತ್ತಿರಲಿಲ್ಲ. ಅವರ ಮಗ್ಧನಗೆ ಅವರ ವ್ಯಕ್ತಿತ್ವವನ್ನು ತೆರೆದು ತೋರಿಸುತ್ತಿತ್ತು. ಎಂಥ ವಿಷಯವಾಗಿರಲಿ ಅವುಗಳನ್ನು ಸಹನೆಯಿಂದ ಹಾಗೂ ಮನೋಬಲದಿಂದ ನಿಯಂತ್ರಿಸುವ ಸಾಮರ್ಥ್ಯ ಅವರಲ್ಲಿತ್ತು. ಸಮಾಧಾನ ಚಿತ್ತರಾಗಿ ಅವರು ಎಂಭತ್ತು ವರ್ಷಗಳ ಕಾಲ ಬದುಕಿದರು. ಲಾಭಕ್ಕಾಗಿ ಬದುಕಲಿಲ್ಲ. ತತ್ವಗಳಿಗಾಗಿ ಬದುಕಿದರು. ಹಾಗೆ ಬದುಕುವುದೇ ಅವರಿಗೆ ಪ್ರೀಯವಾಗಿತ್ತೋ ಅಥವಾ ಅದು ಅವರಿಗೆ ಅನಿವಾರ್ಯವಾಗಿತ್ತೋ ಗೊತ್ತಿಲ್ಲ. ಆದರೆ ಒಂದು ನಾಣ್ಣುಡಿ ಹೀಗಿದೆ. "ಸದ್ಗುಣವು ನೋವಿನಗಳಿಗೆಯಲ್ಲೂ ಸಂತಸ ನೀಡುತ್ತದೆ. ದುರ್ಗಣವು ಸಂತಸದ ಗಳಿಗೆಗಳಲ್ಲೂ ದುಃಖವೀಯುತ್ತದೆ."

ಸದ್ಗುಣಿಗಳಾದರೂ ತಮ್ಮ ದೃಢ ಸಂಕಲ್ಪಗಳಿಂದ ಈ ಜಗತ್ತನ್ನು ಬದುಕಲು ಯೋಗ್ಯವಾದ ಸ್ಥಳವನ್ನಾಗಿಸುತ್ತಾರೆ. ಸದ್ಗುಣಿ ಎಂಬುದಕ್ಕೆ ಮಾಮಾಜಿ ಪರಿಪೂರ್ಣ ಉದಾಹರಣೆಯಾಗುತ್ತಾರೆ. ಅಂಥವರಾಗಿ ಬದುಕುವುದೇ ಕಷ್ಟಸಾಧ್ಯವಾದುದು.

ಶ್ರೀ ಎ. ಆರ್. ಪಂಚಗಾವಿಯವರು ಸರಳತೆಗೆ, ದಯಪರತೆಗೆ ಜೀವಂತ ಉದಾಹರಣೆಯಾದಂತೆ ಅವರು ಅಪರೂಪದ ವ್ಯಕ್ತಿಯಾಗಿ, ಉದಾತ್ತ ರಾಜಕಾರಣಿಯಾಗಿ ಚಿರಂಜೀವಿಯಾಗಿ ಉಳಿಯುತ್ತಾರೆ.

**– ಡಾ|| ಗಿರೀಶ ಉದಪುಡಿ**

ಜಮಖಂಡಿ.

# ಅಪರೂಪದ ರಾಜಕಾರಣಿ ಅಪ್ಪಣ್ಣ ಪಂಚ.ಗಾವಿ

ಅಪರೂಪದ ರಾಜಕಾರಣಿಯಾದ ದಿವಂಗತ ನನ್ನ ಪೂಜ್ಯ ತಂದೆಯವರಾದ ರಾಮಪ್ಪ ಬಿದರಿ (1952 ರಿಂದ 1962 ರವರೆಗೆ ಲೋಕಸಭಾ ಸದಸ್ಯರು) ಹಾಗೂ ದಿವಂಗತ ಅಪ್ಪಣ್ಣ ಪಂಚಗಾವಿಯವರು ನಿಕಟವರ್ತಿಗಳಾಗಿದ್ದರಿಂದ ನಾನು ತಂದೆಯವರ ಜೊತೆಗೆ ಕಾಲಕಾಲಕ್ಕೆ ಅವರನ್ನು ಭೆಟ್ಟಿಯಾಗುತ್ತಿದ್ದೆ. ಇದರಿಂದ ಅವರ ಆದರ್ಶ ಜೀವನ ಹಾಗೂ ಮೇರು ವ್ಯಕ್ತಿತ್ವ ನನ್ನ ಮೇಲೆ ಪರಿಣಾಮ ಬೀರಿದ್ದರಿಂದ ಈ ಚಿಕ್ಕ ಲೇಖನವನ್ನು ಬರೆಯಲು ಸಾಹಸ ಮಾಡಿದ್ದೇನೆ.

ದಿವಂಗತ ಅಪ್ಪಣ್ಣನವರು ಜೀವನದ ಎಲ್ಲ ಕ್ಷೇತ್ರಗಳಲ್ಲಿ ಮನಸಾರೆ ನಿಸ್ವಾರ್ಥ ಹಾಗೂ ಸಮರ್ಪಣಾ ಮನೋಭಾವದಿಂದ ದುಡಿದಿದ್ದಾರೆ. 1952 ರಿಂದ 1972ರ ವರೆಗೆ ವಿಧಾನಸಭಾ ಸದಸ್ಯರಾಗಿ ತಾವು ಪ್ರತಿನಿಧಿಸಿದ ಗೋಕಾಕ ಕ್ಷೇತ್ರದ ಅಭಿವೃದ್ಧಿವಾಗಿ ಹಗಲಿರುಳೂ ದುಡಿದಿದ್ದಾರೆ. ಮಣ್ಣಿನ ಮಗನಾಗಿ, ಒಕ್ಕಲಿಗನಾಗಿ ರೈತ ಸಂಘಟನೆಗಳನ್ನು ಸ್ಥಾಪಿಸಿದ್ದಾರೆ. ಶಿಕ್ಷಣ ಕ್ಷೇತ್ರಗಳಲ್ಲಿ ಅನೇಕ ವಿದ್ಯಾ ಸಂಸ್ಥೆಗಳನ್ನು ಕಟ್ಟಿದ್ದಾರೆ. ಆರ್ಥಿಕ ಕ್ಷೇತ್ರದಲ್ಲಿ ಶ್ರಮಿಸಿ ಪಿ.ಎಲ್.ಡಿ. ಹಾಗೂ ಇತರ ಸಹಕಾರಿ ಪತ್ತಿನ ಬ್ಯಾಂಕುಗಳನ್ನು ಸ್ಥಾಪಿಸಿದ್ದಾರೆ. ವೈದ್ಯಕೀಯ ಕ್ಷೇತ್ರದಲ್ಲಿ ಕಾರ್ಯಮಾಡಿ ಗೋಕಾಕದಲ್ಲಿ ಕಾಟೇಜ ಹಾಸ್ಪಿಟಲ್, ಸಹಕಾರಿ ಕ್ಷೇತ್ರದಲ್ಲಿ ಘಟಪ್ರಭಾ ಸಕ್ಕರೆ ಕಾರ್ಖಾನೆ ಸ್ಥಾಪಿಸಿದ್ದಾರೆ.

ವಿಧಾನಸಭೆಯ ಉಪಸಭಾಪತಿಗಳಾಗಿ ಅತ್ಯಂತ ಜವಾಬ್ದಾರಿಯುತವಾಗಿ ವರ್ತಿಸಿ ನಿಷ್ಠೆಯಿಂದ ರಾಜಕೀಯ ಮಾಡಿದರು. ಅವರು ಕುಟಿಲ ರಾಜಕಾರಣಿಯಾಗಿರಲಿಲ್ಲ. ಅವರೊಬ್ಬ ರಾಜಕೀಯ ಮಹಾಮುತ್ಸದ್ದಿಯಾಗಿದ್ದರು. "He was neither a Politian nor a Diplomat but a great statesman" ಅಪ್ಪಣ್ಣ ಪಂಚಗಾವಿ ಅವರು ಪಂಡಿತ ಜವಾಹರಲಾಲ ನೆಹರು ಹಾಗೂ ಶ್ರೀ ಮುರಾರಜಿ ದೇಸಾಯಿಯವರ ನಿಕಟವರ್ತಿಗಳಾಗಿದ್ದರಲ್ಲದೇ ಅವರ ಅಪಾರ ಪ್ರೇಮ ಹಾಗೂ ವಿಶ್ವಾಸಗಳಿಸಿದ್ದರು.

"Earn to eat, eat to live, live to serve and serve without tire or reitire till end of life" ಇದು ಅವರ ಬದುಕಿನ ಧ್ಯೇಯವಾಗಿತ್ತು.

ಅವರು ಶೃತಿ ಮಾಡಿದ ವೀಣೆಯಂತಿದ್ದರು. ಅವರಿಂದ ಅಪಸ್ವರ ಎಂದೂ ಹೊರಾಡುತ್ತಿರಲಿಲ್ಲ. ಯಾವುದೇ ಕಪ್ಪುಕಲೆ ಅವರ ಇಡೀ ಜೀವನದಲ್ಲಿ ಸಿಕ್ಕುವದಿಲ್ಲ. ಹಣ ಅಧಿಕಾರಕ್ಕಾಗಿ ಹೆಣಗಲಿಲ್ಲ. ಗುಣಕ್ಕಾಗಿ ಜೀವಿಸಿದರು, ಸೇವೆಗಾಗಿ ಜೀವಿಸಿದರು. "ಮಾತು ಬೆಳ್ಳಿ ಮೌನ ಬಂಗಾರ" ಅವರ ಜಾನ್ಮೆಯ ಅಸ್ತ್ರ. ಗಾಂಭೀರ್ಯತೆ ಹಾಗೂ ಶಾಂತತೆ ಅವರ ವ್ಯಕ್ತಿತ್ವದ ಮುಖ್ಯ ಅಂಶಗಳು. ಯಾರೊಂದಿಗೂ ಧ್ವನಿ ಎತ್ತಿ ಮಾತಾಡಿದವರಲ್ಲ.

ಅವರು ತಮ್ಮ ಸರಳ ನಿರಾಡಂರ, ಸಹಕಾರ ಹಾಗೂ ಪ್ರೀತಿ ವಾತ್ಸಲ್ಯದಿಂದ ತುಂಬಿದ ಗುಣಗಳಿಂದ ಕೂಡಿದ ಜೀವನದಿಂದ ಎಲ್ಲರನ್ನೂ ಆಕರ್ಷಿಸಿಕೊಂಡಿದ್ದರು. ಅವರಂಥ ಸದ್ಗುಣಗಳಿಂದ ಕೂಡಿದ ರಾಜಕಾರಣಿಗಳು ಸಿಗುವದು ಅಪರೂಪ.

– ಡಾ|| ಚಂ. ರಾ. ಬಿದರಿ

ಬಿಜಾಪೂರ.

# ಅಪ್ಪಟಗಾಂಧಿವಾದಿ ಎ. ಆರ್. ಪಂಚಗಾವಿ

ಭಾರತ ಪಿತಾಮಹರೆನಿಸಿದ ಮಹಾತ್ಮಾ ಗಾಂಧೀಜಿಯವರನ್ನು ಇಂದಿನ ಅನೇಕ ಜನರು ಕಾಣದೇ ಇರಬಹುದು. ಗಾಂಧೀಜಿಯವರ ಕರಸಂಜಾತರಾದ ಅಪ್ಪಟ ಗಾಂಧೀವಾದಿ ಶ್ರೀ ಎ. ಆರ್. ಪಂಚಗಾವಿ ಅವರನ್ನು ಗೋಕಾವಿಯ ನಾಡಿನ ಜನತೆ ಗಾಂಧೀಜಿ ಎಂದೇ ಭಾವಿಸಿ ಅವರ ಸತ್ಯ ಶುದ್ಧ ಪ್ರಾಮಾಣಿಕತೆ ಸದುವಿನಹ ಮೃದು ಭಾಷೆ ಅವರು ಸಮಾಜಕ್ಕಾಗಿ ದುಡಿಯುವ ನಿಸ್ವಾರ್ಥ ಸೇವಾ ಲವಲವಿಕೆ ನಿರಾಡಂಬರದ ಬದುಕನ್ನು ಕಂಡು ಕೈ ಮುಗಿಯದವರೇ ಇಲ್ಲ.

ಕಗ್ಗ ಖಾದಿ ಧರಿಸಿ ಶುಭ್ರ ಹೃದಯದ ಸತ್ಯವೇ ಸಹಕಾರ ಮೂರ್ತಿಯಾಗಿ ನಿಂತ ಸಂತ ಸಾರ್ವಭೌಮ ಶ್ರೀ ಪಂಚಗಾವಿ ಅವರು ಗಾಂಧೀಜಿ ಬೆಳೆಸಿದ ನಂದನವನದಲ್ಲಿಯ ಒಂದು ಗಂಧದ ಮರವಿದ್ದಂತೆ. ತೈದರೂ ಉರಿದರೂ ಸುಗಂಧವನ್ನೇ ಸೂಸುವ ಶ್ರೀಗಂಧದ ಬದುಕು ಇವರದು.

**– ಡಾ|| ಸಿ. ಪಿ. ಪಟ್ಟಣಶೆಟ್ಟಿ**
ಜನಪ್ರಿಯ ವೈದ್ಯರು,
ಚೇರಮನ್ನರು, ಗೋಕಾಕ ಶಿಕ್ಷಣ ಸಂಸ್ಥೆ,
ಗೋಕಾಕ.

# "ಒಂದು ವ್ಯಕ್ತಿಯಲ್ಲ ಆದೊಂದು ಶಕ್ತಿ"

ಶ್ರೀ ಅಪ್ಪಣ್ಣ ರಾ. ಪಂಚಗಾವಿಯವರು ರಾಮದುರ್ಗ ತಾಲೂಕಿನ ಹಿರೇಕೊಪ್ಪ ಗ್ರಾಮದ ಶರಣ ಸಾತ್ವಿಕ ದಂಪತಿಗಳಾದ ಪಂಚಗಾವಿ ಮನೆತನದಲ್ಲಿ ದಿ. 14–11–1913 ರಂದು ಜನಿಸಿದರು. ಬೆಳೆಯ ಸಿರಿ ಮೊಳಕೆಯಲ್ಲಿ ಕಾಣು ಎಂಬಂತೆ ಈ ಬಾಲಕ ಅಪ್ಪಣ್ಣ ಮುಂದೊಂದು ದಿನ ಸಮಾಜದ ಅಪ್ಪನಂತೆ ಬೆಳೆಯುತ್ತಾನೆಂದು ಊಹಿಸಿದ್ದು ಅತಿಶಯೋಕ್ತಿಯಾಗಲಿಲ್ಲ

ಮಿತಭಾಷೆ, ಸರಳ ಉಡುಗೆ, ಸುಂದರವಾದ ದೇಹಾಕೃತಿಗೆ ಎಳೆದಂತೆ ಬದುಕಿರುವ ಅವರ ಜೀವನ ಕ್ರಮ ಇಂದಿನ ಯುವಕರಿಗೆ ಮಾದರಿಯಾಗಿದೆ. ಇಂದಿನಂತೆ ರಾಜಕೀಯ ಜೀವನದಲ್ಲಿ ಆಡಂಬರದ ವಿಲಾಸಿ ಜೀವನವನ್ನು ಅಂದು ಸಹಜವಾಗಿ ಕಳೆಯಬಹುದಿತ್ತು. ಅದು ಹಾಗಾಗಲಿಲ್ಲ. ಕಾರಣ ಅವರ ಬದುಕಿನ ರೀತಿ ಗಾಂಧಿಜಿಯ ಪ್ರಭಾವ ಸರಳ ಸಂಸ್ಕೃತಿಗೆ ಕಾರಣವಾಗಿದ್ದವು. ಅವರ ರಾಜಕೀಯ ಜೀವನದ ಅನುಭವದ ಮೂಸೆಯಲ್ಲಿ ಇಂದಿನ ಅನೇಕ ಈ ಭಾಗದ ರಾಜಕೀಯ ದುರಂಧರರು ಬೆಳೆದಿದ್ದಾರೆಂದರೆ ತಪ್ಪಾಗಲಾರದು.

ಗುರುಗಳು ವಿದ್ಯಾರ್ಥಿಗಳಿಗೆ ಪಾಠ ಹೇಳುವಂತೆ ಪಂಚಗಾವಿಯವರು ಯುವ ರಾಜಕಾರಣಿಯಗಳಿಗೆ ಮಾರ್ಗದರ್ಶಕರಾಗಿದ್ದರು.

ರಾಜಕೀಯ, ಆರ್ಥಿಕ, ಶೈಕ್ಷಣಿಕ, ಸಂಸ್ಕೃತಿಕ, ವೈದ್ಯಕೀಯ ಕೃಷಿ ಕಾನೂನ ಹೀಗೆ ವೈವಿಧ್ಯಮಯವಾದ ಕ್ಷೇತ್ರಗಳಲ್ಲಿ ಸಾಮಾಜಿಕವಾಗಿ ತಮ್ಮನ್ನು ಸಮರ್ಪಿಸಿಕೊಂಡು ಸರ್ವಾಂಗ ಸುಂದರ ಸಮಾಜ ರಚನೆಗೆ ಸದಾ ದುಡಿಯುತ್ತಿದ್ದ ಈ ಭಾಗದ ಹೆಮ್ಮೆಯ ಪುತ್ರ ಅಪ್ಪಣ್ಣ ಪಂಚಗಾವಿಯವರು, ನನಗೆ ನಗೆ ಮೊಗದ ಆತ್ಮೀಯ ಸ್ನೇಹಿತರಾಗಿದ್ದರು ಎಂದು ಹೇಳಲು ತೊಂಬತ್ತು ತುಂಬಿದ ನಾನು ಪುಲಕಿತನಾಗುತ್ತೇನೆ.

– ಬಿ.ಬಿ.ಕಲ್ಯಾಣಿ

ಸ್ವಾತಂತ್ರ್ಯ ಯೋಧರು, ಯಾದವಾಡ.

# ಅಪ್ಪಟ ಗಾಂಧಿವಾದಿ ಎ. ಆರ್. ಪಂಚಗಾವಿ

"ಮನುಷ್ಯ ಮನುಷ್ಯನಾಗಿ ಈ ಭೂಮಿಯಮೇಲೆ ಬದುಕುವುದು ಕಷ್ಟ" ಎಂಬ ಮಾತಿಗೆ ಅಪವಾದವಾಗಿ ಬಾಳಿ ಬದುಕಿದ ಕೆಲವೇ ಕೆಲವು ವ್ಯಕ್ತಿಗಳಲ್ಲಿ ಕರ್ನಾಟಕ ರಾಜ್ಯ ವಿಧಾನಸಭೆ ಉಪಸಭಾಪತಿಯಾಗಿದ್ದ ಮಾನ್ಯ ಶ್ರೀ ಎ. ಆರ್. ಪಂಚಗಾವಿ ಒಬ್ಬರು.

ಮಹಾತ್ಮಾ ಗಾಂಧೀಜಿ, ಲೋಕಮಾನ್ಯ ತಿಲಕ ಮುಂತಾದ ರಾಷ್ಟ್ರೀಯ ನಾಯಕರು ಭಾರತ ದೇಶದ ರಾಜಕೀಯ ಸ್ವಾತಂತ್ರ್ಯ ಕುರಿತಾತಿ ನೀಡಿದ ಸಂದೇಶಗಳಿಂದ ಪ್ರೇರಿತರಾದ ಪಂಚಗಾವಿಯವರ ತಂದೆ ಶ್ರೀ ರಾಮಪ್ಪ ಪಂಚಗಾವಿಯವರು "ಸ್ವದೇಶಾಭಿಮಾನ" ತಿಳಿದವರು. ತಮ್ಮ ಓರಿಗೆಯುವರ ಜೊತೆ ಸ್ವತಂತ್ರ್ಯ ಚಳುವಳಿಯಲ್ಲಿ ಭಾಗವಹಿಸುತ್ತಿದ್ದರು. ಮತ್ತು ಚಳುವಳಿಗಾರರಿಗೆಲ್ಲ ಊಟ-ವಸತಿ ತಮ್ಮ ಮನೆಯಲ್ಲಿಯೇ ಪೂರೈಸುತ್ತಿದ್ದರು. ಅಜ್ಜಪ್ಪ ಬಟಕುರ್ಕಿ (ತೊಂಡಿಕಟ್ಟಿ) ವೆಂಕರೆಡ್ಡಿ ಹೂಲಿ (ಹೂಲಿ) ಕಳ್ಳಿತಿಪ್ಪಣ್ಣ ಶಾಸ್ತ್ರೀ (ಬಹುದೊಡ್ಡ ಕೀರ್ತನಕಾರರು), ರಾಜಾಸಾಹೇಬ ಅತ್ತಾರ (ಹುಲಕುಂದ), ನಿಂಗಪ್ಪಣ್ಣ ಕರಲಿಂಗಣ್ಣವರ..... ಮುಂತಾದ ಸ್ವಾತಂತ್ರ್ಯ ಯೋಧರಿಗೆ ಇವರ ಮನೆ ಆಶ್ರಯ ತಾನವಾಗಿತ್ತು.

ಈ ಸಂದರ್ಭದಲ್ಲಿ ಅಪ್ಪಣ್ಣ ಪಂಚಗಾವಿ ಅವರು ಕೇವಲ 15 ವರ್ಷದ ಬಾಲಕ. ಇವರ ತಂದೆಯಿಂದ ಸ್ಫೂರ್ತಿತರಾಗಿ ಕಾಂಗ್ರೇಸ್‌ನ ಸ್ವಯಂ ಸೇವಕಾಗಿ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದರು. ಗೋಕಾಕದ ಎಸ್. ವಿ. ಕೌತನಾಳಿ, ಜಿ. ವ್ಹಿ. ಕೌತನಾಳಿ, ಗುಂಡೋಪಂತ ಮಹಾಜನ, ಶಂಕರೆಪ್ಪ ಭರಭರಿ ಮುಂತಾದವರು ಅಪ್ಪಣ್ಣ ಪಂಚಗಾವಿಯವರ ಒಡನಾಡಿಗಳಾಗಿದ್ದರು.

ಪಂಚಗಾವಿಯವರು ಬಹಳ ಹಿಂದೆಯೇ ನಿಪ್ಪಾಣಿಯಲ್ಲಿ ಮಹಾತ್ಮ ಗಾಂಧೀಜಿಯವರ ದರ್ಶನವನ್ನು ಪಡೆದವರು. ಅವರ ನಿರಾಡಂಬರ ವ್ಯಕ್ತಿತ್ವಕ್ಕೆ ಮಾರುಹೋದವರು ಮತ್ತು ಅದನ್ನು ತಮ್ಮಲ್ಲಿ ಅಳವಡಿಸಿಕೊಳ್ಳಲು ಸಂಕಲ್ಪಿಸಿ ಅಂತೆಯೇ ನಡೆದು ಬಂದವರು. "ಹಿತ-ಮಿತ ಮೃದು ವಚನ, ಅಲ್ಪ ಆಹಾರ (ಚಹ ಎಂದೂ ಕುಡಿಯಲಿಲ್ಲ), ಖಾದಿ ಸರಳ ಉಡುಪು, ಹೆಜ್ಜೆ-ಹೆಜ್ಜೆಗೂ ಮಹಾತ್ಮನ ತತ್ವಾನುಕರಣೆ, ತೃಪ್ತಿಕರ ಬಾಳ್ವೆ, ನಿಸ್ವಾರ್ಥ ಮನಸ್ಸಿನ ನಿಷ್ಕಲ್ಮಶ ಭಾವದ ಈ ಪ್ರಾಮಾಣಿಕ ವ್ಯಕ್ತಿಯಲ್ಲಿ ಸಹಜವಾಗಿ ದೇಶಪ್ರೇಮ ಗಿರಿಗೆದರಿತು. ಸರಳ ವ್ಯಕ್ತಿತ್ವದ ಶ್ರೀ ಎ. ಆರ್. ಪಂಚಗಾವಿಯವರು ಶೀಲ-ಸದ್ಗುಣ-ಸಚ್ಚಾರಿತ್ರ್ಯಗಳ ಸಾಕಾರ ಮೂರ್ತಿ. ಸ್ನೇಹ-ಸೌಹಾರ್ದತೆ, ವಿನಯ-ಸೌಜನ್ಯಗಳ ಪ್ರತೀಕವಾಗಿದ್ದರು.

– **ಡಾ|| ಸಿ. ಕೆ. ನಾವಲಗಿ**
ಜೆ. ಎಸ್. ಎಸ್. ಕಾಲೇಜ್,
ಗೋಕಾಕ

# ತ್ಯಾಗಮಯಿ ಅಪ್ಪಣ್ಣನವರು

"ಅಪರೋಪಕಾರಾರ್ಥ ಮಿದಂ ಶರೀರಂ" ಎನ್ನುವ ಹಾಗೆ ಎಷ್ಟೋ ಮಹಾನ್ ಪುರುಷರು ಜೀವನದ ಬೆಲೆಯನ್ನರಿತು. ಜೀವನದಲ್ಲಿ ಸಾಫಲ್ಯವನ್ನು ಕಂಡು ಬಾಳಿ ಬದುಕಿದ್ದಾರೆ. ಈ ಕ್ಷಣಿಕವಾದ ಜೀವನದಲ್ಲಿ ಹುಟ್ಟು ಸಾವಿನ ಮಧ್ಯದಲ್ಲಿ ವ್ಯರ್ಥ ಜೀವನವನ್ನು ಕಳೆಯದೇ ಜನಪರ ಹಾಗೂ ಜನ ಹಿತಕಾರ್ಯಗಳನ್ನು ಮಾಡಿ ಎಲ್ಲ ಜನಗಳ ಮನದಾಳದಲ್ಲಿ ಭದ್ರವಾದ ಸ್ಥಾನವನ್ನು ಪಡೆದಿದ್ದಾರೆ.

ತತ್ವರಹಿತ ರಾಜಕೀಯ, ನೀತಿವಿಹೀನ ವಾಣಿಜ್ಯ, ಶೀಲವಿಲ್ಲದ ಶಿಕ್ಷಣ, ದುಡಿಮೆ ಇಲ್ಲದ ಸಂಪತ್ತು, ತ್ಯಾಗವಿಲ್ಲದ ಪೂಜೆ ಹಾಗೂ ಮಾನವೀಯತೆ ಇಒಲ್ಲದ ವಿಜ್ಞಾನ ಎಂದ ಮಹಾತ್ಮ ಗಾಂಧೀಜಿಯವರ ಮೌಲ್ಯಯುತವಾದ ಈ ಎಲ್ಲ ವಿಚಾರಗಳನ್ನು ರಕ್ತದ ಕಣಕಣಗಳಲ್ಲಿ ಅಳವಡಿಸಿಕೊಂಡಂತಹ ಅಪ್ಪಣ್ಣ ರಾಮಪ್ಪ ಪಂಚಗಾವಿಯವರು ಕಟ್ಟಾ ಗಾಂಧೀವಾದಿಗಳಾಗಿದ್ದರು. ಸರಳ ಸ್ವಭಾವ ಹೊಂದಿದ್ದ ಇವರು ಎಲ್ಲರಿಗೂ ಬೇಕಾದವರಾಗಿದ್ದರು.

ಅವರು ಸ್ವತಃ ರೈತ ಕುಟುಂಬದಲ್ಲಿ ಜನಿಸಿದ್ದರಿಂದಲೇ ವಿಧಾನ ಸಭೆಯಲ್ಲಿ ನಡೆಯುವ ರೈತರ ಸಮಸ್ಯೆಗಳ ಚರ್ಚೆಯಲ್ಲಿ ರೈತರ ಧ್ವನಿಯಾಗಿ ರೈತರ ಏಳ್ಗೆಗಾಗಿ ಶ್ರಮಿಸಿದರು. ಅವರ ಬೇಡಿಕೆಗಳನ್ನು ಪೂರೈಸುವ ನಿಟ್ಟಿನಲ್ಲಿ ನಿಸ್ವಾರ್ಥ ಸೇವಾ ಮನೋಭಾವನೆಯಿಂದ ಸೇವೆಗೈದು ರೈತ ಸಂಘದ ಸ್ಥಾಪನೆಮಾಡುವುದರಲ್ಲಿ ತನು-ಮನದಿಂದ ಶ್ರಮಿಸಿ ಎಲ್ಲರ ಮೆಚ್ಚುಗೆಗೆ ಪಾತ್ರರಾದರು.

ಎಲ್ಲರ ಒಳ್ಳೆಯದರಲ್ಲಿಯೇ ನಮ್ಮ ಒಳ್ಳೆಯತನ ಅಡಗಿದೆ ಎಂದು ಅರಿತು ಕೊಂಡಹಾಗೆ ಪಂಚಗಾವಿಯವರು ನಿಸ್ವಾರ್ಥ ಸೇವಾ ಮನೋಭಾವನೆಯಿಂದ ದುಡಿದರು ಅವರು ಎಂದು ಯಾರ ಹೊಗಳಿಕೆಯನ್ನು ಬಯಸದವರು "Simple living and high thinking" ಎನ್ನುವ ಮಾತನ್ನು ರಕ್ತಗತಮಾಡಿಕೊಂಡು ಉನ್ನತವಾದ ಧ್ಯೇಯೋದ್ಧೇಶಗಳನ್ನು ಹೊಂದಿ ಅವುಗಳನ್ನು ಸಾಕಾರ ರೂಪದಲ್ಲಿ ತರಲು ಪ್ರಯತ್ನಿಸಿದರೆ ಹೊರತು ಎಂದೂ ಪ್ರಸಿದ್ಧಿ, ಕೀರ್ತಿಗಾಗಿ ಬೆನ್ನು ಹತ್ತಲಿಲ್ಲ ಒಂದು ವೇಳೆ ಅದಕ್ಕೆ ಬಿದ್ದಿದ್ದರೆ ಅಗರ್ಭ ಶ್ರೀಮಂತರಾಗಿ ಸೂಖದಸುಪ್ಪತ್ತಿಗೆಯಲ್ಲಿ ಓಡಾಡಬಹುದಾಗಿತ್ತು. ಆದರೆ ಎಂದೂ ಅದಕ್ಕೆ ಅವರು ಆಶೆ ಪಡಲಿಲ್ಲ. ಅಂತೆಯೇ ಅವರ ಕುಟುಂಬ ವರ್ಗದವರು ಕಷ್ಟಪಟ್ಟು ದುಡಿದು ನೋವು ನಲಿವುಗಳನ್ನು ಹಂಚಿಕೊಂಡು ಬಂದಿದ್ದಾರೆ.

**- ಶಕುಂತಲಾ ದಂಡಗಿ**
ಶಿಕ್ಷಕಿಯರು, ಗೋಕಾಕ.

# ಪ್ರಾಮಾಣಿಕ, ಅನುಭವಿ ರಾಜಕಾರಣಿ

1952 ರಿಂದ 2000 ರ ವರೆಗೆ ಯಾವುದೇ ತಂಟೆ ತಕರಾರುಗಳಿಲ್ಲದೆ, ಅಜಾತ ಶತ್ರುವಾದ ಶ್ರೀ ಪಂಚಗಾವಿಯವರೊಡನೆ ಸತತ ರಾಜಕಿಯ, ಶಿಕ್ಷಣ, ರಂಗ, ಸಹಕಾರಿ ರಂಗ, ರೈತ ಚಳುವಳಿ ಮುಖಾಂತರ ಗೋಕಾಕ ತಾಲೂಕಿನಲ್ಲಿ ಕೂಡಿ ಕೆಲಸ ಮಾಡಿದ್ದೇನೆ. ದಿನನಿತ್ಯ ನಾನು ಹಾಗೂ ಅವರು ಇವತ್ತಿನ ಆಗು ಹೋಗುಗಳನ್ನು ನಮ್ಮ ಅಥವಾ ಅವರ ಮನೆಯಲ್ಲಿ ಚರ್ಚೆಮಾಡಿ ವಿಚಾರಿಸದೆ ಮಲಗುತ್ತಿರಲಿಲ್ಲ.

ಅವರು, ನಾನು ಹಾಗೂ ನಮ್ಮ ಇತರ ಸ್ನೇಹಿತರು ಕೂಡಿಕೊಂಡು "ನ್ಯಾಶನಲ್ ಎಜ್ಯುಕೇಶನ್ ಸೊಸಾಯಿಟಿ" ಸ್ಥಾಪಿಸಿ ಪ್ರಥಮವಾಗಿ ಗೋಕಾಕದಲ್ಲಿ ಹೈಸ್ಕೂಲ ಸ್ಥಾಪಿಸಿ ಗ್ರಾಮೀಣ ರೈತ ಮಕ್ಕಳ ಹಾಗೂ ಬಡ ಮಕ್ಕಳ ಶಿಕ್ಷಣಕ್ಕೆ ಅನುಕೂಲಮಾಡಿಕೊಡಲಾಗಿದೆ. ಇದಲ್ಲದೆ ಇದೇ ಸಂಸ್ಥೆಯಿಂದ ಕಲ್ಲೋಳ್ಳಿ ಹಾಗೂ ಹಿರೇಕೊಪ್ಪ ಹೈಸ್ಕೂಲಗಳನ್ನು ಸ್ಥಾಪಿಸಿ ಅವುಗಳನ್ನು ಹೆಮ್ಮರವಾಗಿ ಬೆಳೆಸಿ ಆ ಭಾಗದ ವಿದ್ಯಾರ್ಥಿಗಳಿಗೆ ಶಿಕ್ಷಣದ ಅನುಕೂಲಮಾಡಿ ಕೊಡಲಾಗಿದೆ. ಎಲ್ಲದಕ್ಕೂ ಪಂಚಗಾವಿಯವರ ದುಡಿಮೆ, ಮಾರ್ಗದರ್ಶನಗಳೇ ಕಾರಣ.

ಇದಕ್ಕೆಲ್ಲ ಅವರು ಪ್ರಾಮಾಣಿಕವಾಗಿ ನಮ್ಮನ್ನೆಲ್ಲ ಕರೆಯಿಸಿ ವಿಚಾರ ಮಾಡಿ ಗೋಕಾಕ ಸಕ್ಕರೆ ಕಾರ್ಖಾನೆ, ಪಿ.ಎಲ್.ಡಿ.ಬ್ಯಾಂಕ, ಗೋಕಾಕ ಆಸ್ಪತ್ರೆ ಸ್ಥಾಪಿಸಿ ದುಡಿದರು. ಇಂಥ ಸಂಸ್ಥೆಗಳ ಉದ್ಧಾರಕ್ಕಾಗಿ ನಾವು ಸ್ನೇಹಿತರು ಅವರ ಜೊತೆಗೆ ದುಡಿದೆವು.

**– ಬಾಳಗೌಡ ಆರ್. ಪಾಟೀಲ**
ಸ್ವಾತಂತ್ರ್ಯ ಯೋಧರು,
ಕೊಳವಿ (ತಾ. ಗೋಕಾಕ).

# ಆತ್ಮೀಯ ಗೆಳೆಯ

ನಾನು ಮತ್ತು ಅಪ್ಪಣ್ಣ ಪಂಚಗಾವಿ ಈರ್ವರೂ ಸಹಪಾಠಿಗಳು. ಬಾಲ್ಯ ಸ್ನೇಹಿತರು. ಇಂಗ್ಲೀಷ 1ನೇ ಕ್ಲಾಸಿನಿಂದ – 7ನೇ ಕ್ಲಾಸಿನವರೆಗೆ ಕೂಡಿ ಓದಿದವರು. ಕೂಡಿ ಆಡಿ ಬೆಳೆದವರು. ಆಗಿನ್ನು ಗೋಕಾಕದಲ್ಲಿ ಖಾನಾವಳಿ ಹಾಸ್ಟೇಲ್ ಇರಲಿಲ್ಲ. ಹೀಗಾಗಿ ಅಪ್ಪಣ್ಣ ಪಂಚಗಾವಿ ಮತ್ತು ಅವರ ಸೋದರತ್ತೆ ಮಗ ಶ್ರೀ ವೆಂಕನಗೌಡ ಪಾಟೀಲ ಇಬ್ಬರೂ ಚರಂತಿಮಠದಲ್ಲಿ ಇದ್ದುಕೊಂಡು ಶಾಲೆ ಕಲೆತರು. ಚರಂತಿಮಠ ನಮ್ಮ ಮನೆಗೆ ಸಮೀಪವಿದ್ದು–ಆಟೋಟದಲ್ಲಿ ಜೊತೆಗೇ ಕಾಲಕಳೆಯುತ್ತಿದ್ದೇವು.

ಅಪ್ಪಣ್ಣ ಪಂಚಗಾವಿಯವರದು ಬಾಲ್ಯದಿಂದಲೂ ಮೃದು ಸ್ವಭಾವ. ಆಟೋಟಕ್ಕಿಂತ ಪಾಠ ಅಭ್ಯಾಸದಲ್ಲೇ ಹೆಚ್ಚು ಆಸಕ್ತಿ. ಸಿಟ್ಟು ಎಂಬುದೇ ಗೊತ್ತಿಲ್ಲ. ಅಷ್ಟು ಸಮಾಧಾನ ಪ್ರವೃತ್ತಿ. ಎಂದೂ ಯಾರೊಂದಿಗೂ ತಂಟೆ ತಕರಾರು ತೆಗೆಯುತ್ತಿರಲಿಲ್ಲ. ವಿಧೇಯತೆ–ವಿನಯ–ಸೌಜನ್ಯ ಅವರಲ್ಲಿ ಮನೆ ಮಾಡಿಕೊಂಡಿದ್ದವು. ಅವರ ಆದರ್ಶ ಸದ್ಗುಣಗಳನ್ನೆಲ್ಲ ಕಂಡು ಮುಂಬೈ ಪ್ರಾಂತದಲ್ಲೇ ಶಿಸ್ತಿಗೆ ಹೆಸರಾಗಿದ್ದ ನಮ್ಮ ಪ್ರಧಾನ ಗುರುಗಳಾದ ಶ್ರೀ ಕೆ. ಟಿ. ವರ್ಲಿಯವರು ಪಂಚಗಾವಿ ಅವರಿಗೆ "ತುಂಬು ವಿಧೇಯ– ಪ್ರಾಮಾಣಿಕ–ಆದರ್ಶ ವಿದ್ಯಾರ್ಥಿ" ಎಂದು ಪ್ರಮಾಣ ಪತ್ರ ಕೊಟ್ಟದ್ದು ನನಗಿಂದೂ ನೆನಪಿದೆ.

ಮುಂದೆ ನಾವಿಬ್ಬರು ಜೊತೆಯಾಗಿ ಕೊಲ್ಲಾಪೂರದಲ್ಲಿ ರಾಜಾರಾಮ ಕಾಲೇಜನಲ್ಲಿ ಅಧ್ಯಯನ ಮಾಡಿದೆವು. ಮುಂದೆ ಜೊತೆಗೇ ಧಾರವಾಡ ಕಾಲೇಜಿಗೆ ಬಂದೆವು. ನಮ್ಮ ಪರಮ ಮಿತ್ರ ಅಪ್ಪಣ್ಣ ಕಾಲೇಜಿನಲ್ಲೂ ಅಷ್ಟೆ ಸಂಭಾವಿತ. ವಿಧೇಯ ವಿದ್ಯಾರ್ಥಿ–ಸತತಾಭ್ಯಾಸಿ.

ಅವರು ಪದವಿ ಮುಗಿಸಿ ಕೊಲ್ಲಾಪೂರದಲ್ಲಿ ಕಾನೂನು ಶಿಕ್ಷಣ ಮುಗಿಸಿಕೊಂಡು ಗೋಕಾಕಕ್ಕೆ ಬಂದು ವಕೀಲ ವೃತ್ತಿ ಕೈಕೊಂಡು, ಮಂದೆ ಚುನಾವಣೆಗೆ ನಿಂತು ಎಮ್.ಎಲ್.ಎ. ಆದರು. 1938 ರಿಂದ 2000 ನೇ ಇಸ್ವಿ ಅಂತ್ಯದವರೆಗೂ ತಮ್ಮ ಹಿಂದಿನ ಅಭಿಮಾನ ಆತ್ಮೀಯತೆ ಮುಂದುವರೆಸಿಕೊಂಡು ಬಂದರು. "He was a symbol of simple living and high thinking" ಮಾನವ ಸಂಪನ್ಮೂಲದ ಅಭಿವೃದ್ಧಿಗೆ ಹೆಚ್ಚು ಒತ್ತು ಕೊಡಬೇಕೆನ್ನುತ್ತಿದ್ದವರು. ಅದಕ್ಕಾಗಿ 'ಶಿಕ್ಷಣ'ಕ್ಕೆ ಬಹಳ ಮಹತ್ವ ಕೊಟ್ಟರು. ತಮ್ಮ ಕೊನೆಯುಸಿರಿರುವರೆಗೂ ಸಮಾಜದ ಎಳ್ಗೆಗಾಗಿ ಚಿಂತಿಸಿದರು ಅಪ್ಪಣ್ಣ ಪಂಚಗಾವಿ ನಿಜಕ್ಕೂ ಮರೆಯಲಾಗದ ಮಹನೀಯ.

– ಸಾತ್ವೀರಪ್ಪಾ. ಪ್ವಿ. ಕೌತನಾಳಿ,
ವರ್ತಕರು, ಗೋಕಾಕ.

# ನನ್ನ ಪೂಜ್ಯ ಮಾವನವರು

ನಮ್ಮ ಸೋನವಾಲ್ಕರ ಮನೆತನಕ್ಕೂ ಶ್ರೀ ಎ. ಆರ್. ಪಂಚಗಾವಿಯವರ ಕುಟುಂಬಕ್ಕೂ ಹಳೆಯ ಸಂಬಂಧ. ನಮ್ಮ ತಾಯಿ ಪಂಚಗಾವಿಯವರ ಊರಾದ ಬಾಗೋಜಿಕೊಪ್ಪದವರೇ, ಅವರ ಶ್ರೀಮತಿ ಕಡೆಯಿಂದ ನಮ್ಮ ತಾಯಿಗೆ ಸಂಬಂಧ. ಬಾಲ್ಯದಲ್ಲಿ ಶಾಲಾ ಬಿಡುವಿನಲ್ಲಿ ನಾನು ಬಾಗೋಜಿಕೊಪ್ಪಕ್ಕೂ ಹಾಗೆಯೇ ಶ್ರೀ ಪಂಚಗಾವಿ ವಕೀಲರ ಗೋಕಾಕದ ಮನೆಗೆ ಹೋಗುವದಿತ್ತು. ಪಂಚಗಾವಿ ವಕೀಲರದ್ದು ಗಂಭೀರ ವ್ಯಕ್ತಿತ್ವ. ಅವರ ಶ್ರೀಮತಿ ಸೌ. ಪಾರ್ವತೆಕ್ಕ ನನ್ನನ್ನು ಬಹಳವಾಗಿ ಹಚ್ಚಿಕೊಂಡಿದ್ದರು.

1952 ರಲ್ಲಿ ಚುನಾವಣೆ ಬಂದಾಗ ಬಂಧು ಶ್ರೀ ಪಂಚಗಾವಿಯವರು ಚುನಾವಣೆಗೆ ನಿಂತಾಗ ನನ್ನ ಗೆಳೆಯರೊಂದಿಗೆ ಚುನಾವಣೆ ಕಾರ್ಯದಲ್ಲಿ ಕೆಲಸಮಾಡಿದೆ. ಮುಂದೆ. ಃ.ಖಿಜಥ. ಮುಂಬೈನಲ್ಲಿ ಮುಗಿಸಿ ಗೋಕಾಕ ಮಿಲ್ಲಿನಲ್ಲಿ ಕೆಲಸಕ್ಕೆ ಸೇರಿದೆ. ಮುಂದೆ ಪಂಚಗಾವಿಯವರ ಹಿರಿಯ ಮಗಳು ಚಿನ್ನಾಕ್ಷಿಯ ಜೊತೆಗೆ ನನ್ನ ಮದವೆ ನಿಶ್ಚಯವಾಗಿತ್ತು. ಇನ್ನೇನು ಲಗ್ನ ಪತ್ರಿಕೆ ಹಂಚುವ ಕಾಲದಲ್ಲಿ ವೈಯಕ್ತಿಕ ಕಾರಣಗಳಿಗಾಗಿ ನಾನು ಗೋಕಾಕ ಮಿಲ್ಸ್‌ನ ನೌಕರಿಗೆ ರಾಜಿನಾಮೆ ಕೊಟ್ಟೆ. ಈ ಕಾರಣಕ್ಕಾಗಿ ನಮ್ಮ ಮನೆಯಲ್ಲಿ ಎಲ್ಲರೂ ಅಸಮಾದಾನಪಟ್ಟರೂ ಶಾಸಕರಾಗಿದ್ದ ಪಂಚಗಾವಿಯವರು ಸ್ವಲ್ಪವೂ ಬೇಜಾರಮಾಡಿಕೊಳ್ಳಲಿಲ್ಲ. "ನಿಮಗೆ ಅನ್ನಿಸುವ ನಿರ್ಧಾರ ತೆಗೆದುಕೊಳ್ಳಲು ನಿಮಗೆ ಅಧಿಕಾರವಿದೆ" ಎಂದು ನನ್ನ ನಿರ್ಧಾರಕ್ಕೆ ಗೌರವ ಕೊಟ್ಟರು. ಮುಂದೆ ನಾನು ಮೈಸೂರಿನಲ್ಲಿ ರೇಷ್ಮೆ ಸಂಶೋಧನ ಮಂಡಳಿಯಲ್ಲಿ ಕೆಲಸಕ್ಕೆ ಸೇರಿದೆ. ಅನೇಕ ಸಂಶೋಧನಾತ್ಮಕ ಲೇಖನ ಪುಸ್ತಕ ಬರೆದೆ. ಹೆಚ್ಚಿನ ವಿದ್ಯಾಭ್ಯಾಸಕ್ಕೆ ಇಂಗ್ಲೇಡಿಗೆ ಹೋದೆ. ಪಂಚಗಾವಿ ಮಾವನವರಾಗಿ ನನ್ನೆಲ್ಲ ಸತ್ಕಿಯೆ ಅಭ್ಯುದಯ ಕಾರ್ಯದಲ್ಲಿ ಪ್ರೋತ್ಸಾಹಿಸುತ್ತಾ ಬಂದಿದ್ದಾರೆ.

ನಮ್ಮ ಮಾವನವರದು ಸಾರ್ವಜನಿಕ ವ್ಯಕ್ತಿತ್ವ. ರಾಜಕಾರಣ ಅವರ ಪ್ರವೃತ್ತಿ. ಮಿತಭಾಷಿ, ಗಂಭೀರ ಸ್ವಭಾವ ಅವರದು. ಅವರು ಮನೆಯಲ್ಲಿರುವುದೇ ಅಪರೂಪ. ಮನೆಯಲ್ಲಿ ಹೆಚ್ಚು ಮಾತನಾಡುವದೂ ಕೂಡಾ ವಿರಳ.

ನನಗೆ ಕಂಡಂತೆ ಅವರಿಗೆ ಕೃಷಿಯಲ್ಲಿ –ಕೃಷಿಕರಲ್ಲಿ ಬಹಳ ಆಸಕ್ತಿ, ಕಾಳಜಿ. ಶಿಕ್ಷಣ ಕುರಿತು ಅಪಾರ ಕಳ–ಕಳಿ. ಸಮಾಜದ ಸರ್ವಾಂಗೀಣ ಉನ್ನತಿಗಾಗಿ ಕೊನೆಯವರೆಗೂ ಚಿಂತಿಸಿದರು, ಶ್ರಮಿಸುತ್ತಾ ಬಂದರು.

– **ಟಿ. ಎನ್. ಸೋನವಾಲ್ಕರ**

ನಿವೃತ್ತ ನಿರ್ದೇಶಕರು, ಸಿ.ಎಸ್.ಟಿ.ಆರ್.ಐ.,

ಬೆಂಗಳೂರು.

# ಆತ್ಮೀಯ ಬಂಧು ಎ. ಆರ್. ಪಂಚಗಾವಿ

ಶ್ರೀ ಪಂಚಗಾವಿ ಕಾಂಗ್ರೇಸ್ ಸೇವಾದಳದಲ್ಲಿ ಸೇವೆ ಸಲ್ಲಿಸುತ್ತಾ ಕಾಂಗ್ರೆಸ್ಸಿನೊಂದಿಗೆ ಬೆಳೆದು ಬಂದರು. ಮೂಲತಃ ಅವರು ಸಮಾಜಜೀವಿ ತಮ್ಮ ಕುಟುಂಬಕ್ಕಿಂತ ಹೆಚ್ಚಾಗಿ ಸಮಾಜವನ್ನು ಪ್ರೀತಿಸಿದರು. ಗೋಕಾಕದ ಲಕ್ಷ್ಮಣರಾವ್ ವಕೀಲರು ಆಗಾಗ ಉದ್ಧರಿಸುತ್ತಿದ್ದರು. "ಪಂಚಗಾವಿ ಕಾಂಗ್ರೇಸ್ ಸೇರಿ ತಪ್ಪು ಮಾಡಿದರು. ಇಲ್ಲವಾದರೆ ಅವರು ವಕೀಲ ವೃತ್ತಿಯಿಂದ ಸಾಕಷ್ಟು ಸಂಪಾದಿಸುತ್ತಿದ್ದರು."

ಅವರು ಎಂ. ಎಲ್. ಎ. ಆದರೂ – ಹಣ ಗಳಿಸುವ ಮನಸ್ಸು ಮಾಡಲಿಲ್ಲ. ವಾಮ ಮಾರ್ಗ ಹಿಡಿಯಲಿಲ್ಲ. ತಮ್ಮ ಸಂಬಂಧಿಗಳಿಗೂ ಮೀರಿ ತಾನೆಂದೂ ಯಾರಿಗೂ ಗೋಗರೆಯಲಾರೆನೆಂದು ಹೇಳಿದರು.

ಸಾರ್ವಜನಿಕ ಸರಕಾರಿ ಕಾಮಗಾರಿಯಲ್ಲಿ ಗುತ್ತಿಗೆದಾರರು ತಮ್ಮ ಕೆಲಸದಲ್ಲಿ ಯಾವುದೇ ಬಾನಗಡಿ ಮಾಡಲು ಅವಕಾಶಕೊಡುತ್ತಿರಲಿಲ್ಲ. ಸಾರ್ವಜನಿಕ ಹಿತಾಸಕ್ತಿಗೆ ದಕ್ಕೆ ಬರುವಂತೆ ಅವರೆಂದೂ ವರ್ತಿಸಲಿಲ್ಲ. ಜಾತ್ಯಾತೀತ ಮನೋಭಾವದ ಅವರಿಗೆ ಬಡವರ ಬಗ್ಗೆ ಅಪಾರ ಅನುಕಂಪ. ಭಾರತೀಯ ಧರ್ಮ ನೀತಿಯನ್ನು ಬದುಕಿನುದ್ದಕ್ಕೂ ಆಚರಿಸಿಕೊಂಡು ಪಾಲಿಸಿಕೊಂಡು ಬಂದರು.

**– ಟಿ. ಆರ್. ಉದಪುಡಿ.**
ಗೋಕಾಕ.

# ಅವರ ಜೀವನವೇ ಅದ್ಭುತ ಸಂದೇಶ

ಆದ್ಯಾತ್ಮದಲ್ಲಿ ಜ್ಞಾನಿಗಳ ಲಕ್ಷಣ ವಿವರಿಸುವಾಗ ಹೇಳುವ ಈ ಮಾತು "ಅವರು ಲೋಕದಲ್ಲಿ ಎಲ್ಲರಂತೆ ಬರುವವರು ಎಲ್ಲರಂತೆಯೇ ಇರುವವರು ಆದರೆ ಲೋಕಕ್ಕೆ ಹೊರತಾಗಿರುವವರು." ಅದರಂತೆ ದಿ. ಅಪ್ಪಣ್ಣ ಪಂಚಗಾವಿ, ಮಾಜಿ ಶಾಸಕ–ಉಪಸಭಾಪತಿಗಳಾಗಿದ್ದು ಕೂಡಾ ಸಾಮಾನ್ಯರಂತೆ ತೋರಿದರೂ ಅವರದು ಅಸಾಮಾನ್ಯ–ಅಲೌಕಿಕ–ಅಸದೃಶ್ಯ ವ್ಯಕ್ತಿತ್ವವೆಂದರೆ ಅತಿಶಯೋಕ್ತಿಯಾಗಲಾರದು. ದೂರ್ತ ರಾಜಕೀಯದಲ್ಲಿದ್ದೂ ಸ್ವಾರ್ಥ–ದುರಾಸೆ ಮೆಟ್ಟಿ ನಿಂತ ಅಪ್ಪಣ್ಣ ಅಪ್ಪಟ ಮನುಷ್ಯ! 'ತಾನು–ತನಗಾಗಿ–ತನಗೇ' ಎಂದು ಬಗೆಯದೇ ಅಹಂಕಾರ ಮಮಕಾರ ಮೀರಿನಿಂತ ಮಹಾಮಾನವ! ಸಮಾಜಮುಖಿಯಾಗಿ ಸಮುದಾಯದ ಸರ್ವತೋಮುಖ ಅಭಿವೃದ್ಧಿಗಾಗಿ ಜೀವನವನ್ನು ಸಾರ್ಥಕಪಡಿಸಿಕೊಂಡವರು. ಗಾಂಧೀ ಮಹಾತ್ಮನ ಅನುಯಾಯಿ ಮಾತ್ರವಲ್ಲ ಮಹಾತ್ಮನ ಗುಣ–ಲಕ್ಷಣ ಅಳವಡಿಸಿಕೊಂಡವರು. ಆಚಾರ ಹೇಳುವದಕ್ಕಿಂತ ಆಚರಣೆಯಲ್ಲಿ ತಂದು ತೋರಿದರು ಗೋಕಾಕದ ಗಾಧೀ ಮಹಾತ್ಮ.

ನಾನು ಹೈಸ್ಕೂಲ ವಿದ್ಯಾರ್ಥಿಯಗಿದ್ದಾಗ ಅವರ ಹೆಸರು ಕೇಳಿದ್ದೆ. ಮುಂದೆ 80 ರ ದಶಕದಲ್ಲಿ ಅವರು ರಾಜಕೀಯದಿಂದ ನಿವೃತ್ತಿಯಾಗಿ ಬಂದಮೇಲೆ ನನಗವರ ಪೂರ್ತಿ ಪರಿಚಯವಾಯಿತು. ಉದಯೋನ್ಮುಖ ಲೇಖಕ, ಕಲಾವಿದರೊಡನೆ ನಾವು ಗೋಕಾಕದಲ್ಲಿ ಹಮ್ಮಿಕೊಳ್ಳುತ್ತಿದ್ದ ಯಾವುದೇ ಸಾಹಿತ್ಯಕ–ಸಾಂಸ್ಕೃತಿಕ ಕಾರ್ಯಕ್ರಮಗಳಿರಲಿ ಆಮಂತ್ರಣ ಪತ್ರವಿತ್ತರೂ ಸಾಕು ಯಾವ ಹಮ್ಮು–ಬಿಮ್ಮು ಬಿಗುಮಾನಗಳಿಲ್ಲದೆ ಸಾಮಾನ್ಯರಂತೆ ನಡೆದುಕೊಂಡು ಬರುತ್ತಿದ್ದರು. ವೇದಿಕೆಯ ಕೆಳಗೆ ಎಲ್ಲರೊಂದಿಗೆ ಕೂತು ಸೌಜನ್ಯದೊಂದಿಗೆ ಕೈ ಮುಗಿದು ಕುಶಲೋಪರಿ ವಿಚಾರಿಸುತ್ತಿದ್ದುನ್ನು ಮರೆಯುವಂತಿಲ್ಲ. ವಯೋವೃದ್ಧ, ಜ್ಞಾನವೃದ್ಧ ಪಂಚಗಾವಿ ದೊಡ್ಡಸ್ತಿಕೆ, ಅಧಿಕಾರದ ಕೋಡು ಎಂದಿಗೂ ಮೂಡಿಸಿಕೊಳ್ಳಲಿಲ್ಲ. ಎಂದೂ ಯಾರನ್ನು ದ್ವೇಷಾಸೂಯೆಗಳಿಂದ ನೋಯಿಸಿದವರಲ್ಲ.

ಶ್ರೀ ಪಂಚಗಾವಿಯವರು ಸ್ಥಾಪಿಸಿದ ನ್ಯೂ ಇಂಗ್ಲೀಷ ಸ್ಕೂಲಿಗೆ ಹಿರಿಯ ಸಾಹಿತಿ ಡಾ|| ನಿಂಗಣ್ಣ ಸಣ್ಣಕ್ಕಿಯವರನ್ನು ಆಗಾಗ ಕಾಣಲು ನಾನು ಹೋಗುತ್ತಿದ್ದೆ ಆಗ ಪಂಚಗಾವಿಯವರು ಬಹಳಸಲ ಭೆಟ್ಟಿಯಾಗುತ್ತಿದ್ದರು. ನನ್ನಂಥ ಕಿರಿಯನಿಗೂ ಕೂಡ ಕೈಜೋಡಿಸಿ ಬರಮಾಡಿಕೊಂಡು ಮಾತನಾಡಿಸುತ್ತಿದ್ದರು. ಅವರ ತುಂಬಿದ ಕೊಡದಂತಹ ಆದರ್ಶ ಜೀವನ ನಮ್ಮಂಥ ಕಿರಿಯರಿಗೆ ನಿರಂತರ ಸ್ಫೂರ್ತಿ, ಪ್ರೇರಣೆ ನೀಡುತ್ತದೆ. ಅವರು ನಮ್ಮ ಸಮಕಾಲೀನರಾಗಿ ನಮ್ಮೊಂದಿಗೆ ಇದ್ದದ್ದು ನಮ್ಮ ಸುದೈವ. "ತಮ್ಮ ಜೀವನವೇ ತಮ್ಮ ಸಂದೇಶ" ಎನ್ನುವಂತೆ ಪಂಚಗಾವಿಯವರು ದಿವ್ಯ ಜೀವನ ಬದುಕಿ ತೋರಿಸಿದ್ದಾರೆ. ನಮಗೆಲ್ಲ ಸ್ಮರಣೀಯರಾಗಿದ್ದಾರೆ.

**– ಮಹಾಲಿಂಗ ಮಂಗಿ**

ಗೋಕಾಕ

## ಅಮೋಘ ಆಸ್ತಿ

ಗೋಕಾವಿ ನಾಡಿನಲಿ
ಡೆಲಿಕಸಿಯೆ ಮೈದಾಳಿ
ಮೂಡಿತೊಂದೀ ಜೀವ
ಅದುವೆ ಅಪ್ಪಣ್ಣ ಪಂಚಗಾವಿ.

ಸರಳತೆ ಸೌಜನ್ಯ
ಸತ್ಯತೆಯ ದೃಢ ಜೀವಿ
ಮಹದುಪಕಾರಿಯಾಗಿತ್ತು
ಸರ್ವಜನಕೆ.

ಕರ್ಮಠತೆಯನು
ನಿಷ್ಠುರವಾಗಿ ಟೀಕಿಸುತ್ತ
ವಾಸ್ತವಿಕತೆಯಲಿ ಮಾನವತೆಯಿಂದ ಬಾಳಿ
ಬಾಳದೀಪವಾಯಿತು
ಸರ್ವ ಸಮಾಜಕ್ಕೆ.

ದುಡ್ಡಿಗೆ ಬೆಲೆಕೊಡದೆ
ಗೊಡ್ಡು ನಡತೆ ಸಹಿಸದೆ
ಬಡವರ ನೋವಿಗೆ ಸ್ಪಂದಿಸಿ
ಹಿತಜ್ಞಾನಿಯಾಗುತ್ತ
ನೊಂದ ಜನಕೆ.

ಮಾತು ಕಡಿಮೆ
ಕೃತಿ ಜಾಸ್ತಿ
ಜನರ ಒಲುಮೆಯಾಯಿತು
ಅವರ ಆಸ್ತಿ.

ಅವರೇ ನಾಡಿಗೊಂದು
ಅಮೋಘ ಆಸ್ತಿ.

– ನರೇಂದ್ರ ಪುರಂದರೆ

# ಪಂಚಗಾವಿ ಎಂಬುವ ಹೆಸರು

ನಿಮ್ಮ ಬದುಕೊಂದು ತೆರೆದ ಪುಸ್ತಕ
ಎಲ್ಲವನ್ನು ಕಟ್ಟಿಕೊಂಡ ಮಹಾಮಸ್ತಕ
ಉತ್ತು ಬಿತ್ತುವ ಹೊಲ ಸಮಾಜ ಶಿಕ್ಷಣ
ಕಾನೂನು ರಾಜಕೀಯ ಹೋರಾಟ ರಕ್ಷಣ.

ಹಿರಿಯ ಪಂಚಗಾವಿಯವರ ಮಾತುಗಳೆಂದರೆ
ಹಿರಿ ಮಲ್ಲಿಗೆಯರಳಿದತರ ಸಾಗರದ ತೆರೆ
ಹೂ–ಮನ ಸೂಸಿದ ನಸುಗಂಪು
ನೆನಪೆಲ್ಲ ಬರಿ ಬಯಲಿನ ಕಂಪು.

ಪಂಚಗಾವಿ ಎಂಬ ಹೆಸರು ತಾರಕ
ಗೋಕಾವಿಗೆ ನೆನಪುಳಿವ ಕೌತಕ
ಆವಿ ಆವಿಯಾಗಿ ಹರಿದಾಡುವ ಹಸಿರು
ನೆನಪಿಸಿದವರಿಗೆಲ್ಲ ಗೋಕಾವಿ ಗಾಂಧಿವಾದಿ ಉಸಿರು.

– ಡಾ॥ ನಿಂಗಣ್ಣ ಸಣ್ಣಕ್ಕಿ

# ಪಂಚಗಾವಿಯವರ ನೆನಪು

ಅಡಿಯಿಂದ ಮುಡಿವರೆಗೆ
ಗಿರಿಗಳ ಅಪೂರ್ವತೆಯ ಅನುಕರಣಿಸುವ ಮನ್ನೋಟ
ಮೈ ಮನ ಆತ್ಮಗಳ ಒಳಪದರ ಎಳೆಗಳಲಿ
ಸಂಪಿಗೆ ಮಲ್ಲಿಗೆ ಮಂದಾರಗಳ ಹೂನೋಟ!

ಶಾಂತಿ ಪ್ರೀತಿ ಕರುಣೆಗಳ ಚಿಮ್ಮಿಸುವ ಕಾರಂಜಿ
ನಡೆನುಡಿಗಳೊಂದಾದ ಅಪರೂಪದ ಅಪರಂಜಿ!
ಮಹಾತ್ಮಾ ಗಾಂಧೀಜಿಯಂತೆ ಬದುಕಿ ಬಾಳಿದವರು
ಸ್ನೇಹದಾರುತಿಯಾಗಿ ಬೆಳುವಲವ ಬೆಳಗಿದವರು.

ಯಾರು ಯಾರೇ ಇರಲಿ ಸತ್ಯದೊಳಗೊಂದಾಗಿ
ಸಂಪೂರ್ಣ ಬೆರೆತವರು. ಮೊದಲುಮಾನವನಾಗಿ
ಮನುಜ ಮತ ವಿಶ್ವಪಥ ತರೆದು ತೋರಿದವರು;
ಯಾರೆ ಎದುರಾಗಲಿ ಎದುರಾಡದೆ ಮಾನದಲಿ
ಬಾಳು ನಡೆಸಿದವರು.
ಎಲ್ಲರಂಥವರಲ್ಲ ಇವರು, ಇಂಥವರು ಬಹಳಿಲ್ಲ!

– ಡಾ॥ ಬಾಳೇಶ ಲಕ್ಷಟ್ಟಿ

ಮಗಳು ರತ್ನಾ ಮತ್ತು ಅಳಿಯ ವೆಂಕಣ್ಣನವರೊಂದಿಗೆ



ರತ್ನ ಮತ್ತು ವೆಂಕಣ್ಣ ಅವರಿಗೆ ಬಿಳ್ಕೊಡುವ ಸಮಾರಂಭ



ರತ್ನಾ ಮತ್ತು ವೆಂಕಣ್ಣ ಜೊತೆಗೆ ಎ.ಆರ್. ಪಂಚಗಾವಿ
ಫ್ಲೋರಿಡಾ ಅಮೇರಿಕಾದಲ್ಲಿ

# ವಿದೇಶ ಪ್ರವಾಸದಲ್ಲಿ ಪಂಚಗಾವಿ



ಸುಲೋಚನಾ ಉವಪುಡಿ, ಅಮೇರಿಕನ ಲೇಡಿ ಜೊತೆ ಎ.ಆರ್. ಪಂಚಗಾವಿ ಬೊಸ್ಟನ ಹಾರ್ಬರ ಅಮೇರಿಕಾ



ಸುಲೋಚನಾ ಉದಪುಡಿ, ರತ್ನಾ, ಲಕ್ಷ್ಮಣ, ಕೀರ್ತಿ ಜೊತೆ ಎ.ಆರ್. ಪಂಚಗಾವಿ ನೈಗರಾ ಪಾಲ್ಸ್, ನ್ಯೂಯಾರ್ಕ್



ರತ್ನಾ ಮತ್ತು ಮೊಮ್ಮಕ್ಕಳಾದ ಲಕ್ಷ್ಮಣ ಮತ್ತು ಕೀರ್ತಿ, ಕೆನಡಿ ಸ್ಪೇಸ ಸೆಂಟರದಲ್ಲಿ ಅಪಲೊ ಮೂನ ಲ್ಯಾಂಡಿಂಗ್ ವೈಹಕಲ



ರತ್ನಾ ಮತ್ತು ಲಕ್ಷ್ಮಣ ಜೊತೆ ಎ.ಆರ್. ಪಂಚಗಾವಿ ವೈಗರಾ ಪಾಲ್ಸ ನ್ಯೂಯಾರ್ಕ್ ಅಮೇರಿಕಾ

## ಅವರೇ ಕಟ್ಟಿ ಬೆಳೆಸಿದ ವಿದ್ಯಾಸಂಸ್ಥೆಗಳು



ಬಿ.ಜಿ. ಹೈಸ್ಕೂಲ್ ಹಿರೇಕೊಪ್ಪ (ತಾ. ರಾಮದುರ್ಗ)



ಗೋಕಾಕ್ ನ್ಯೂ ಇಂಗ್ಲೀಷ್ ಸ್ಕೂಲ್ ಸಮಾರಂಭದಲ್ಲಿ ಪಂಚಗಾವಿ ಅಳಿಯ ವೆಂಕಣ್ಣ ಗಣಿಯವರಿಂದ ಉಪಾನ್ಯಾಸ



ನ್ಯೂ ಇಂಗ್ಲಿಷ್ ಸ್ಕೂಲ್ ಗೋಕಾಕ್



ಪಿ.ಜಿ. ನೆಹರು ಹೈಸ್ಕೂಲ್ ಕಲ್ಲೋಳಿ



ಸೇವಾದಳ ಸಂಸ್ಥಾಪಕ ಡಾ.ನಾ.ಸು.ಹರ್ಡೇಕರ
ಜೊತೆ ಎ.ಆರ್. ಪಂಚಗಾವಿ



ಅಳಿಯ ತಮ್ಮಣ್ಣ ಸೊನವಾಲಕರ ಅವರು ಇಂಗ್ಲೆಂಡಿಗೆ
ಹೊರಟಾಗ ಎ.ಆರ್. ಪಂಚಗಾವಿ



ಅಮೇರಿಕೆಯಲ್ಲಿ ಅಧಿಕಾರಿಯಾಗಿರುವ ಅಳಿಯ ವೆಂಕಣ್ಣ ಗಣಿ
ಮಗಳು ರತ್ನಾ ಮತ್ತು ಮೊಮ್ಮಕ್ಕಳು
ಲಕ್ಷ್ಮಣ ಮತ್ತು ಕೀರ್ತಿ



ಎ.ಆರ್. ಪಂಚಗಾವಿಯವರ ತಂದೆ ತಾಯಿಗಳು
ರಾಮಪ್ಪ ಮತ್ತು ಯಮನವ್ವ



ಯುವನ್ಯಾಯವಾದಿ ಎ.ಆರ್. ಪಂಚಗಾವಿ

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಪ್ರಕಟಗೊಂಡ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಕೆ. ಹನುಮಂತಯ್ಯ | ಪ್ರೊ ಎನ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 20.00 |
| 2. | ಎಸ್. ನಿಜಲಿಂಗಪ್ಪ | ಡಾ|| ಸಂದೀಪ್ ಶಾಸ್ತ್ರಿ | 15.00 |
| 3. | ಶಾಂತವೇರಿ ಗೋಪಾಲ ಗೌಡ | ಪ್ರೊ|| ಎನ್.ಬಿ. ಪಂಗಣ್ಣಾಯ್ಯ | 15.00 |
| 4. | ವೈಕುಂಠ ಬಾಳಿಗಾ | ಡಾ|| ಪಿ. ಜೀವನ್ ಕುಮಾರ್ | 20.00 |
| 5. | ವೀರೇಂದ್ರ ಪಾಟೀಲ್ | ಡಾ|| ಎಸ್.ಹೆಚ್. ಕವಂಟೆ ಹಾಗೂ ಇತರರು | 20.00 |
| 6. | ಕಡಿದಾಳ್ ಮಂಜಪ್ಪ | ಡಾ|| ಎಸ್.ಹೆಚ್. ಕವಂಟೆ ಹಾಗೂ ಇತರರು | 15.00 |
| 7. | ಜಿ.ವಿ. ಹಳ್ಳಿಕೇರಿ | ಡಾ|| ಆರ್.ಎಂ.ಎಲ್. ಪಾಟೀಲ್ | 15.00 |
| 8. | ಕೆ.ಎಸ್. ನಾಗರತ್ನಮ್ಮ | ಪ್ರೊ|| ಎಸ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 15.00 |
| 9. | ಡಿ. ದೇವರಾಜ ಅರಸು | ಜೆ.ಎಸ್. ಸದಾನಂದ | 15.00 |
| 10. | ಕೆ.ಟಿ. ಭಾಷ್ಯಂ | ಡಾ|| ವಿಘ್ನೇಶ್ ಎನ್. ಭಟ್ | 15.00 |
| 11. | ಕೆ. ಪುಟ್ಟಸ್ವಾಮಿ | ಜಿ. ದಕ್ಷಿಣಾ ಮೂರ್ತಿ | 15.00 |
| 12. | ಟಿ. ಸಿದ್ದಲಿಂಗಯ್ಯ | ಜಿ. ದಕ್ಷಿಣಾ ಮೂರ್ತಿ | 20.00 |
| 13. | ಜಗಳೂರು ಇಮಾಂ | ಜಿ.ಎಸ್. ಸದಾನಂದ | 15.00 |
| 14. | ಕೆ.ಸಿ. ರೆಡ್ಡಿ | ಡಾ|| ಸಂಧ್ಯಾರೆಡ್ಡಿ | 20.00 |
| 15. | ಬಿ.ವಿ. ಕಕ್ಕಿಲ್ಲಾಯ | ಎಂ.ಕೆ. ಭಂಡಿ | 20.00 |

| | | | |
|---|---|---|---|
| 16. | ಹೆಚ್.ಎಂ. ಚೆನ್ನಬಸಪ್ಪ | ಪ್ರೊ॥ ಬಿ.ಎನ್. ಚಂದ್ರಯ್ಯ | 20.00 |
| 17. | ಬಿ. ರಾಚಯ್ಯ | ನಂಜಯ್ಯ ಹೊಂಗನೂರ್ | 20.00 |
| 18. | ಎಂ. ನಾಗಪ್ಪ | ಡಾ॥ ಎಂ.ಎಸ್. ಪಾಟೀಲ್ | 15.00 |
| 19. | ಜೆ.ಬಿ. ಮಲ್ಲಾರಾಧ್ಯ | ಡಾ॥ ಹೆಚ್.ಎಂ. ಪಂಚಾಕ್ಷರಯ್ಯ | 15.00 |
| 20. | ಗಂಗಾಧರ್ ನಮೋಶಿ | ಡಾ॥ ಕವಂಟೆ ಹಾಗೂ ಇತರರು | 15.00 |
| 21. | ಬಿ.ಡಿ. ಜತ್ತಿ | ಕೃಷ್ಣ ಕೊಲ್ಹಾರ ಕುಲಕರ್ಣಿ | 15.00 |
| 22. | ಆರ್. ಗುಂಡೂರಾವ್ | ಈಶ್ವರ ದೈ ತೋಟ | 20.00 |
| 23. | ಕೆ.ಎಚ್. ಪಾಟೀಲ್ | ಎಂ.ಕೆ. ಭಂಡಿ | 15.00 |
| 24. | ಅಜೀಜ್ ಸೇಠ್ | ಹೆಚ್.ಕೆ. ಬಾಲಸೂರಿ | 15.00 |
| 25. | ಸಿ.ಎಂ. ಆರ್ಮುಗಂ | ಹೆಚ್.ಕೆ. ಬಾಲಸೂರಿ | 15.00 |
| 26. | ಜೆ.ಹೆಚ್. ಪಟೇಲ್ | ಶೇಷಚಂದ್ರಿಕ | 30.00 |
| 27. | ಬಿ.ಎಲ್. ಸುಬ್ಬಮ್ಮ | ಡಾ॥ ಡಿ.ಎಸ್. ಜಯಪ್ಪಗೌಡ | 15.00 |
| 28. | ಟಿ.ಆರ್. ಶಾಮಣ್ಣ | ಎಲ್.ಎನ್. ಮುಕುಂದರಾಜ್ | 20.00 |
| 29. | ಎಸ್.ಡಿ. ಗಾಂವಕರ್ | ಮೋಹನ್ ವರ್ಣೇಕರ್ | 20.00 |
| 30. | ಎಂ.ಪಿ.ಎಲ್. ಶಾಸ್ತ್ರಿ | ಉಷಾ ಹಾರೋಗದ್ದೆನಾಯಕ್ | 20.00 |
| 31. | ಎಸ್. ಶಿವಪ್ಪ | ಕೂಡ್ಲಿಗೆರೆ ಮಲ್ಲಿಕಾರ್ಜುನ | 30.00 |
| 32. | ಕಾಗೋಡು ಚಳವಳಿ | ಕೂಡ್ಲಿಗೆರೆ ಮಲ್ಲಿಕಾರ್ಜುನ | 15.00 |
| 33. | ಕೆ.ವಿ. ಶಂಕರಗೌಡ | ಜಗದೀಶ ಕೊಪ್ಪ | 20.00 |
| 34. | ಟಿ.ಎನ್. ನರಸಿಂಹಮೂರ್ತಿ | ಕೆ.ಜೆ. ಸುರೇಶ್ | 25.00 |
| 35. | ಎಸ್.ಆರ್. ಕಂಠಿ | ಮನು ಬಳಿಗಾರ್ | 30.00 |
| 36. | ಎಸ್.ಸಿ. ಮಲ್ಲಯ್ಯ | ಡಾ॥ ಟಿ.ಸಿ. ಪೂರ್ಣಿಮ | 20.00 |
| 37. | ಅಬ್ದುಲ್ ನಜೀರ್‌ಸಾಬ್ | ಮನು ಬಳಿಗಾರ್ | 30.00 |

| | | | |
|---|---|---|---|
| 38. | ಪಿ.ಎಂ. ನಾಡಗೌಡ | ಗಂಗಾಧರಯ್ಯ ಹಿರೇಮಠ | 30.00 |
| 39. | ಕೆ. ಪಟ್ಟಾಭಿರಾಮನ್ | ಸಂಜಯ್ ದೂರೆ | 20.00 |
| 40. | ಎಂ.ಎಸ್.ಕೃಷ್ಣನ್ | ಹೆಚ್.ಕೆ. ಬಾಲಸೂರಿ | 20.00 |
| 41. | ಎಂ.ವಿ. ಕೃಷ್ಣಪ್ಪ | ಜೆ.ಜಿ. ನಾಗರಾಜ್ | 15.00 |
| 42. | ಕೆ.ಎಚ್. ರಂಗನಾಥ್ | ಎಲ್.ಎಸ್. ಮುಕುಂದರಾಜ್ | 20–00 |
| 43. | ರಾಮಕೃಷ್ಣ ಹೆಗಡೆ | ಶೂದ್ರ ಶ್ರೀನಿವಾಸ್ | 20–00 |
| 44. | ಸಿ. ಬೈರೇಗೌಡ | ಪ್ರಹ್ಲಾದರಾವ್ | 20–00 |
| 45. | ಎಸ್.ಎಂ. ಯಾಹ್ಯಾ | ಬಿ.ಎಂ. ಹನೀಫ್ | 20–00 |
| 46. | ಬಾಪುಗೌಡ ದರ್ಶನಾಪುರ | ಗಂಗಾಧರಯ್ಯ ಹಿರೇಮಠ | 20–00 |
| 47. | ಡಾ॥ ಎಚ್. ನರಸಿಂಹಯ್ಯ | ಪ್ರೊ. ಗಂಗಾಧರ ಮೂರ್ತಿ | 20–00 |
| 48. | ಕರ್ನಾಟಕ ಏಕೀಕರಣ ಮತ್ತು ನಾಮಕರಣ | ಡಾ. ಸಿ.ಆರ್. ಗೋವಿಂದರಾಜ್ | 15–00 |
| 49. | ಕರ್ನಾಟಕ ರೈತ ಚಳುವಳಿ– ಸತ್ಯಗ್ರಹಗಳು ಸಂಪುಟ–1 | ಡಾ. ಎಂ.ಜಿ. ನಾಗರಾಜ್ | 15–00 |
| 50. | ಕರ್ನಾಟಕ ರೈತ ಚಳುವಳಿ– ಸತ್ಯಗ್ರಹಗಳು ಸಂಪುಟ–2 | ಡಾ. ಎಂ.ಜಿ. ನಾಗರಾಜ್ | 20–00 |

# ಭಾಷಾಂತರ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಡಾ॥ ಬಿ.ಆರ್. ಅಂಬೇಡ್ಕರ್ | ಭಾಷಾಂತರ ನಿರ್ದೇಶನಾಲಯ | 20.00 |
| 2. | ಡಾ॥ ರಾಂ ಮನೋಹರ ಲೋಹಿಯಾ | ಭಾಷಾಂತರ ನಿರ್ದೇಶನಾಲಯ | 15.00 |
| 3. | ವಿ.ಕೆ. ಕೃಷ್ಣಮೆನನ್ | ರಾಜ್ಯ ಭಾಷಾ ಆಯೋಗದ ಅಧ್ಯಕ್ಷರು | 20.00 |
| 4. | ಡಾ॥ ಶ್ಯಾಂಪ್ರಸಾದ್ ಮುಖರ್ಜಿ | ಭಾಷಾಂತರ ನಿರ್ದೇಶನಾಲಯ | 20.00 |
| 5. | ಶೇಕ್ ಮಹಮದ್ ಅಬ್ದುಲ್ಲಾ | ಭಾಷಾಂತರ ನಿರ್ದೇಶನಾಲಯ | 15.00 |
| 6. | ಡಾ॥ ರಾಜೇಂದ್ರ ಪ್ರಸಾದ್ | ಆರ್.ಕೆ. ಹುಡುಗಿ | 20.00 |
| 7. | ಭೂಪೇಶ್ ಗುಪ್ತ | ಆರ್.ಕೆ. ಹುಡುಗಿ | 20.00 |
| 8. | ಅನಂತಶಯನಂ ಅಯ್ಯಂಗಾರ್ | ಭಾಷಾಂತರ ನಿರ್ದೇಶನಾಲಯ | 15.00 |
| 9. | ರಾಜಕುಮಾರಿ ಅಮೃತ್‌ಕೌರ್ | ಕೆ.ಹೆಚ್. ಸಾವಿತ್ರಿ | 20.00 |
| 10. | ಡಾ॥ ಚಿಂತಾಮನ್ ಡಿ. ದೇಶಮುಖ್ | ಬೇಳೂರು ಸುದರ್ಶನ್ | 20.00 |
| 11. | ಪನಂಪಿಲ್ಲಿ ಗೋವಿಂದ ಮೆನನ್ | ಭಾಷಾಂತರ ನಿರ್ದೇಶಕನಾಲಯ | 15.00 |
| 12. | ಜೈ ಸುಖಲಾಲ್ ಹಾಥಿ | ಎಸ್. ಸುಮಿತ್ರ | 15.00 |
| 13. | ಎಸ್.ಎಂ. ಜೋಷಿ | ಕೆ.ಹೆಚ್. ಸಾವಿತ್ರಿ | 15.00 |
| 14. | ಡಾ॥ ಲಂಕಾ ಸುಂದರಂ | ಜವರಯ್ಯ | 15.00 |



ಎ.ಆರ್. ಪಂಚಗಾವಿ 1952 ರಿಂದ ಬೆಳಗಾವಿ ಜಿಲ್ಲೆ ಗೋಕಾಕ ತಾಲ್ಲೂಕನ್ನು ಪ್ರತಿನಿಧಿಸಿ 20 ವರ್ಷ ಶಾಸಕರಾಗಿದ್ದರು. ಈ ಅವಧಿಯಲ್ಲಿ ಒಂದು ಬಾರಿ ಉಪ ಸಭಾಪತಿಯಾಗಿದ್ದರೂ 'ರಾಜಕೀಯ ಕೊಳಚೆ' ಸೋಂಕದಂತೆ ಬದುಕಿದ ಅಪ್ಪಟ ಗಾಂಧೀವಾದಿ. ಬದುಕಿನಲ್ಲಿ ಅತಿ ಮಹತ್ವಾಕಾಂಕ್ಷೆ, ಒಣ ಪ್ರತಿಷ್ಠೆಗಳಿಗಿಂತ ಪ್ರಾಮಾಣಿಕತೆ, ಪರಿಶುದ್ಧತೆಗೆ ಹೆಚ್ಚಿನ ಆದ್ಯತೆ ನೀಡಿದವರು.

ಶಾಸನ ಸಭೆಯಲ್ಲಿರುವಾಗಲೂ ಅಷ್ಟೆ ಹೊಲಸು ರಾಜಕಾರಣದಲ್ಲಿ ತೊಡಗಿ ವ್ಯರ್ಥ ಕಾಲಹರಣ ಮಾಡದೆ, ಒಂದು ಸಭೆಗೂ ಗೈರು ಉಳಿಯದೆ ಮುಂಗಡ ಪತ್ರ, ಬರಗಾಲ ಕಾಮಗಾರಿ, ನೀರಾವರಿ ಯೋಜನೆ, ಪಾನನಿರೋಧ..... ಹೀಗೆ ಪ್ರತಿ ಚರ್ಚೆಗಳಲ್ಲಿ ಪಾಲ್ಗೊಂಡು ಸಕಾರಾತ್ಮಕವಾಗಿ ಸ್ಪಂದಿಸುತ್ತ ತಮ್ಮ ಪ್ರತಿಭೆ, ಪಾಂಡಿತ್ಯ, ಅನುಭವ, ಜನಪರ ಕಾಳಜಿಯೊಂದಿಗೆ ವಿದ್ವತ್ಪೂರ್ಣ ವಾಗ್ವೈಖರಿಯಿಂದ ಸದನದ ಮೆಚ್ಚುಗೆ ಪಡೆದಿದ್ದರು. ಅಂದು ಅವರು ಮಂಡಿಸಿದ ವಿಚಾರಗಳು - ಅವುಗಳ ಹಿಂದಿದ್ದ ಸಾಮಾಜಿಕ ಕಳಕಳಿ ಸರ್ವಕಾಲಕ್ಕೂ ಸ್ಮರಣೀಯ ಮತ್ತು ಅನುಕರಣೀಯ.

